

ದಸರಾ ಮೆರವಣಿಗೆ



# ವೈ. ಸುಬ್ರಹ್ಮಣ್ಯ ರಾಜು ಅವರ
## ನೀರ್ಬಣ್ಣ ಚಿತ್ರಗಳು



ಅಶೋಕ ರಸ್ತೆ ಮತ್ತು ಕಮಾನು

ಅಕ್ಷರಗಳಲ್ಲಿ ದಾಖಲಿಸಲಾಗದಂತಹ ವರ್ಣ ಸಂಯೋಜನೆಯ ಬೆಡಗನ್ನು ಕಂಡದ್ದು ಅರಮನೆ ಕಲಾವಿದರೆಂದೇ ಖ್ಯಾತಿ ಹೊಂದಿದ್ದ ವೈ. ಸುಬ್ರಹ್ಮಣ್ಯರಾಜು (೧೯೦೭-೧೯೯೫) ಅವರ ನೂರರ ನೆನಪಿನ ಕಾರ್ಯಕ್ರಮದಲ್ಲಿ ಪ್ರದರ್ಶನಗೊಂಡ ಕೆಲವು ಚಿತ್ರಗಳ ಮೂಲಕ. ಜಲವರ್ಣದಲ್ಲಿ ಪಾರದರ್ಶಕ ಮತ್ತು ಅಪಾರದರ್ಶಕ ಎಂಬೆರಡು ವಿಧಕ್ಕೆ ಮತ್ತೊಂದು ಅಕ್ರಿಲಿಕ್ ಎಂಬ ವರ್ಣ ಸೇರಿ ಇಬ್ಬಗೆಯಲ್ಲಿಯೂ ಬಳಸಬಹುದಾಗಿದೆ ಇಂದು. ಆದರೆ ಮೂರ್ನಾಲ್ಕು ದಶಕಗಳ ಹಿಂದೆ ಜಲವರ್ಣದ ಬಿಲ್ಲೆಗಳು ಅಥವಾ ಬೆರಳಗಾತ್ರದ ಬಣ್ಣದ ತುಂಡುಗಳು ಹೊರದೇಶದಿಂದ ಆಮದಾಗುತ್ತಿದ್ದವು. ವಿನ್ಸನ್ ನ್ಯೂಟನ್ ಕಲರ್ಸನ್ನೇ ಕಲಾವಿದರೆಲ್ಲರೂ ಬಳಸುತ್ತಿದ್ದರು. ಅದರ ಮೇಲ್ಮೈ ಮೇಲೆ ಬಿದ್ದ ಬೆಳಕನ್ನು ಚಿತ್ರಿಸಿ ತ್ರಿಮಾನದಲ್ಲಿ ವೀಕ್ಷಕನಿಗೆ ಕಾಣ್ವಂತೆ ಮಾಡುವ ಜಾಣ್ಮೆ ಶ್ರೀ ಸುಬ್ರಹ್ಮಣ್ಯರಾಜು ಅವರದು. ದಸರಾ ಮೆರವಣಿಗೆ ಕುರಿತಂತೆ ಬರೆದಿರುವ ಸ್ಕೆಚ್ ಮಾದರಿ ಜಲವರ್ಣ ಚಿತ್ರಗಳಂತೂ ರಾಜು ಅವರ ಕಲಾಸಾಧನೆಗೆ ಹಿಡಿದ ಕನ್ನಡಿ ಎನ್ನಬಹುದು.

ಎಲ್. ಶಿವಲಿಂಗಪ್ಪ
ಕಲಾವಿದ - ಲೇಖಕ, ನಂ. ೯, ಕಲಾಮನೆ, ೧೨ನೇ ಕ್ರಾಸ್
ರಾಮಾನುಜ ರಸ್ತೆ, ಮೈಸೂರು -೪



ತರಕಾರಿ



ಮೈಸೂರು - ಭೂದೃಶ್ಯ



ಹೂವು

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...



---


ಚಿತ್ರಗಳು : ಆಚಾರ್ಯ, ಶ್ರೀಹರಿ, ವೆಂಕಟ್, ಎನ್. ಆರ್. ಬೊಮ್ಮಳ್ಳಿ, ರಾಂಚಂದ್ರ ಕೊಪ್ಪಲು, ಕಮಲಂ ಅರಸು

ಮುಖಚಿತ್ರ : ಮುತ್ತು ಹಾಳಕೇರಿ  ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ತಾನು ಮುಟ್ಟಿದ್ದೆಲ್ಲಾ ಸಂಪತ್ತು ಮತ್ತು ಅದೆಲ್ಲಾ ತನಗೇ ಸೇರಿದ್ದು ಎಂಬ ಮದದಿಂದ ಮೆರೆಯುವ ಅಮೆರಿಕಾ ತನ್ನ ಆರ್ಥಿಕ ಮುಗ್ಗಟ್ಟನ್ನು ಎಲ್ಲ ದೇಶಗಳಿಗೂ ರವಾನಿಸುತ್ತಿದೆ. ಅದು ಸಹಜವೇ ಇರಬೇಕು, ಏಕೆಂದರೆ ಯಾವ ದೇಶಗಳಿಂದ ಸಂಪತ್ತಿನ ಲೂಟಿಯಾಗುತ್ತದೋ ಆ ದೇಶಗಳೆಲ್ಲಾ ಅಮೆರಿಕಾಕ್ಕೆ ಆಸರೆ ನೀಡಿ ಉದ್ಧರಿಸಬೇಕು. ''ಕೋತಿ ತಾನು ಕೆಡುವುದಲ್ಲದೆ ವನವನ್ನೆಲ್ಲಾ ಕೆಡಿಸಿತು'' ಎಂಬ ಮಾತನ್ನು ಹೇಳುವುದುಂಟು. ಹನುಮಂತನು ಸೀತೆಯನ್ನು ಕಂಡು ಕಿಷ್ಕಿಂಧೆಗೆ ಹಿಂದಿರುಗಿದಾಗ ಸುಗ್ರೀವನ ವಾನರ ಸೈನ್ಯದ ಸಂಭ್ರಮದ ಹಿನ್ನೆಲೆಯಲ್ಲಿ ಈ ಮಾತು ಬಂದಿರಬಹುದು. ಅಮೆರಿಕಾದಲ್ಲಿ ವಾಸ್ತವವಾಗಿ ಏನು ನಡೆದಿದೆಯೆಂಬುದನ್ನು ಕೂಲಂಕಷವಾಗಿ ವಿವೇಚಿಸಬೇಕಾಗಿದೆ. ಅಮೆರಿಕಾದ ಬಿಕ್ಕಟ್ಟಿಗೆ ಮೂಲಕಾರಣವೆಂದರೆ ಕೃತ್ರಿಮವಾಗಿ ಹಣವನ್ನು ''ಸೃಷ್ಟಿಸುವ'' ಮಾಯಾಜಾಲ. ಒಂದು ಡಾಲರನ್ನು ಎಂಟು ಡಾಲರುಗಳನ್ನಾಗಿ ಪರಿವರ್ತಿಸುವ ತಂತ್ರದಲ್ಲಿ ನಿಷ್ಣಾತರೆಂದು ಭಾವಿಸಿದ್ದವರು ಈಗ ಪಾಪರ್ ಚೀಟಿಗಳನ್ನು ಪಡೆಯುತ್ತಿದ್ದಾರೆ. ನಮ್ಮ ದೇಶದಲ್ಲಿಯೂ ಅಂಥದೇ ತಂತ್ರವನ್ನು ಹೂಡುತ್ತಿರುವವರಿಂದ ಈಗಾಗಲೇ ಸ್ವಲ್ಪ ಬಾಧೆಯುಂಟಾಗಿದೆ, ಸರ್ಕಾರ ಹೆಣಗುತ್ತಿದೆ, ರಿಸರ್ವ್ ಬ್ಯಾಂಕ್ ತಿಣುಕುತ್ತಿದೆ. ಬೇರೆಯವರ ಹಣ ಪಡೆದು ಸ್ಟಾಕ್ ಮಾರ್ಕೆಟ್ಟಿನಲ್ಲಿ ಜೂಜಾಡುವವರು ಸಮಾಜ ಕಂಟಕರೆಂದು ಜನ ತಿಳಿಯಬೇಕಾಗಿದೆ. ಬರುವ ದಿನಗಳ ಅನುಭವವು ದೇಶಕ್ಕೆ ಅತಿ ಹೆಚ್ಚು ಹಾನಿಯನ್ನುಂಟು ಮಾಡದಿರಲೆಂದು ಆಶಿಸಬೇಕಾಗಿದೆ.

* * *

ಸರಿಯೋ, ತಪ್ಪೋ, ತಿಳಿಯದು; ಆದರೆ ಒಂದು ಭಾವನೆ ಸದಾ ಮನಸ್ಸಿಗೆ ಬರುತ್ತದೆ. ಸದ್ಯದ ಹಲವು ವಿದ್ಯಮಾನಗಳು ಅದೇ ಭಾವನೆಯನ್ನು ಗಟ್ಟಿಗೊಳಿಸುತ್ತವೆ. ನಮ್ಮ ದೇಶದ ಇತಿಹಾಸವನ್ನು ನೋಡಿದರೆ, ಪ್ರತಿ ಶತಮಾನದಲ್ಲೂ ಅಂದಂದಿನ ವಸ್ತುಸ್ಥಿತಿಗೆ ಕಣ್ಣುಮುಚ್ಚಿ, ಹಿಂದಿನ ತಥಾಕಥಿತ ವೈಭವದ ಬಗ್ಗೆ ರೋಮಾಂಚನಗೊಂಡು, ಅದರ ಪುನರುತ್ಥಾನಕ್ಕಾಗಿ ಹಪಹಪಿಸುವುದು ಕಾಣಬರುತ್ತದೆ. ನಮ್ಮ ಸಾಮಾಜಿಕ ಏರುಪೇರನ್ನು ತಗ್ಗಿಸಲು ಮೂರು ಸಾವಿರ ವರ್ಷಗಳು ಸಾಲದಾಗಿವೆ, ಆದರೆ ಆಗಾಗ್ಗೆ ಅದರ ಅಗತ್ಯವನ್ನು ಪ್ರತಿಪಾದಿಸಲಾಗಿದೆ. ಆ ಪ್ರತಿಪಾದನೆಯ ಪುನರುಚ್ಚಾರದಿಂದಲೇ ತೃಪ್ತಿ! (ಇಂದು ಹಲವರು ಬಸವಣ್ಣನವರನ್ನು ನೆನೆದು ಸ್ಫೂರ್ತಿಯಿಂದ ಉಪನ್ಯಾಸ ನೀಡುವಂತೆ). ದೇಶದ ಮೇಲಿನ ಆಕ್ರಮಣ ಸರಣಿಗಳಿಗೆ ಪ್ರತಿರೋಧವೂ ಬಹುಮಟ್ಟಿಗೆ ಇದನ್ನೇ ಹೋಲುತ್ತದೆ. ನಾವು ''ಸಾಹಸದಿಂದ ಕಾದಾಡಿ ವೀರಸ್ವರ್ಗ''ವನ್ನು ಸೇರಿದ್ದೇ ಹೆಚ್ಚು, ಆಕ್ರಮಣಕಾರರನ್ನು ಹಿಮ್ಮೆಟ್ಟಿಸಿದ್ದು ವಿರಳ. ಆದರೆ ಅದನ್ನು ಕುರಿತು ವಿಶ್ಲೇಷಣೆ ನೀಡುವಾಗ ಎರಡು ರೀತಿಯ ಅಭಿಪ್ರಾಯಗಳು ಪ್ರಕಟಗೊಳ್ಳುತ್ತವೆ: (ಅ) ಆಕ್ರಮಣ ನಡೆಯಿತು, ಆದರೆ ಅದನ್ನು ನಾವು ಜೀರ್ಣಿಸಿಕೊಂಡೆವು, ಎಂಬುದೊಂದು. (ಆ) ಹಾಗೆ ಆಕ್ರಮಣ ಮಾಡಿದವರು ನಮ್ಮಂತೆ ಸಭ್ಯರಾಗಿರಲಿಲ್ಲ, ಅವರು ಪರಮ ಕ್ರೂರಿಗಳು, ಅವರಿಗೆ ನಮ್ಮವರೇ ಕೆಲವರು ಸಹಾಯ ಮಾಡಿ ಅಧಿಕಾರ ದೊರಕಿಸಿಕೊಟ್ಟರು, ಎಂಬುದು ಇನ್ನೊಂದು.

ಎರಡರಲ್ಲಿ ಯಾವುದನ್ನು ಅಂಗೀಕರಿಸಿದರೂ ಬೇರೆಯವರ ಕ್ರೌರ್ಯಕ್ಕೆ ತುತ್ತಾಗುತ್ತಾ ಕೂತಿದ್ದೇಕೆ ಎಂಬ ಪ್ರಶ್ನೆಗೆ ಉತ್ತರವಿಲ್ಲ. 'ಆವರಣ'ದಂತಹ ಕಾದಂಬರಿಗಳನ್ನೋ, ''ಮತಾಂತರ''ದ ಬಗೆಗಿನ ದೀರ್ಘ ಲೇಖನಗಳನ್ನೋ ಬರೆದು ಕೊರಗುವುದು, ಚಡಪಡಿಸುವುದು, ಇತರರನ್ನು ದೂಷಿಸುವುದು ಮುಂತಾಗಿ ಮಾಡುತ್ತಾ ಪ್ರಚಂಡ ಪರಿಹಾರದ ರೂಪದಲ್ಲಿ ಯಾವ ಹಾದಿಯನ್ನೂ ತುಳಿಯದೆ ನಿಟ್ಟುಸಿರೆಳೆಯುವುದು ಅಪ್ರಯೋಜಕವಾದ್ದು. ಒಳ್ಳೆಯ ವಿವೇಚನೆ ಇದ್ದರೆ ಮತ ಮತ್ತು ಮತಾಂತರಗಳ ಮೂಲ ಲಕ್ಷಣಗಳನ್ನು ಗುರುತಿಸಲು ಸಾಧ್ಯ. ಆದರೆ ವಿವೇಚನೆಯ ಅಭಾವವೇ ಹೆಚ್ಚು. ಆರ್ಯರ ಕಾಲದಿಂದಲೂ ನಮ್ಮಲ್ಲಿ ಮತಾಂತರ ನಡೆಯುತ್ತಲೇ ಬಂದಿದೆ. ಬುದ್ಧ, ಜಿನ, ಶಂಕರ, ರಾಮಾನುಜ, ಬಸವಣ್ಣ ಇವರೆಲ್ಲಾ ಮತಾಂತರವನ್ನು ವ್ಯಾಪಕವಾಗಿ ಬೆಳೆಸಿದವರು. ಉದಾಹರಣೆಗೆ, ಇಂದು ತಮ್ಮನ್ನು ಅದ್ವೈತಿಗಳೆಂದು ಸುಳ್ಳುಸುಳ್ಳೇ ಗುರುತಿಸಿಕೊಳ್ಳುವವರು ಆರನೆಯ ಶತಮಾನದಲ್ಲಿ ಯಾವ ಮತದವರಾಗಿದ್ದರು ? ಜನ್ಮಸಿದ್ಧವಾದ ಮತ ಮತ್ತು ಆಯ್ಕೆ ಮಾಡಿಕೊಂಡ ಮತ ಎಂಬೆರಡು ಸಾಧ್ಯತೆಗಳಲ್ಲಿ ಎರಡನೆಯದು ಹೆಚ್ಚು ವೈಜ್ಞಾನಿಕವಾದ್ದು. ಇಂದಿನ ರಾಜಕೀಯವನ್ನು ಮರೆತು ಚರ್ಚಿಸಿದರೆ ಅದೇ ಸಾಧುವೆಂದು ತೋರುತ್ತದೆ. ಆದ್ದರಿಂದ ಮತಾಂತರದ ವಿರುದ್ಧದ ಶಾಸನವಾವುದೂ ಸೂಕ್ತವಲ್ಲ. ಆದರೆ ತಾಪತ್ರಯವಿರುವುದು ಮತಾಂತರವು ಬಲವಂತದಿಂದ ನಡೆಯುತ್ತದೆ, ಇಲ್ಲವೆ ಆಮಿಷಗಳನ್ನೊಡ್ಡಿ ಸೆಳೆಯಲಾಗುತ್ತದೆ ಎಂಬುದರಲ್ಲಿ. ಬಲವಂತವಾಗಿ ಹಾಗೆ ಮಾಡುವವರನ್ನು ಕಾನೂನುರೀತ್ಯಾ ಶಿಕ್ಷಿಸಿ ಕಾರಾಗೃಹಗಳಿಗೆ ತಳ್ಳಬೇಕೇ ವಿನಾ ಅಧಿಕಾರವನ್ನು ಆರೋಪಿಸಿಕೊಂಡ ಕೆಲವರು ಸ್ವೇಚ್ಛೆಯಿಂದ ಅವರನ್ನು ಹಿಂಸಿಸುವುದು ಅಪರಾಧವಾಗುತ್ತದೆ. ನಿಜಕ್ಕೂ ಬಲವಂತವಿದ್ದಿತೆಂಬುದನ್ನು ಸಾಬೀತು ಮಾಡದೆಯೇ

(೭ನೇ ಪುಟಕ್ಕೆ)




ಸಂಪುಟ-೧೦ ಸಂಚಿಕೆ-೪ ನವೆಂಬರ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@vsnl.com
website : www.navakarnataka.com

## ತನಿಖಾ ಆಯೋಗಗಳ ಉಪಯುಕ್ತತೆ – ಜನರಿಗೆ ಭ್ರಮನಿರಸನ

ಸಂಪಾದಕೀಯ

**ಕೋ**ಟ್ಯಂತರ ರೂಪಾಯಿಗಳ ದುರ್ವ್ಯವಹಾರಗಳು, ಲಂಚದ ಪ್ರಕರಣಗಳು, ಸ್ವಜನಪಕ್ಷಪಾತ, ಜಾತೀಯತೆ ಮುಂತಾದ ರಾಷ್ಟ್ರಘಾತುಕ ಕೃತ್ಯಗಳಿಂದಾಗಿ ನಮ್ಮ ಪ್ರಜಾಪ್ರಭುತ್ವದ ಆಧಾರಸ್ತಂಭಗಳಾದ ಸಂಸತ್ತು, ಕಾರ್ಯಾಂಗ, ಶಾಸಕಾಂಗ ಮತ್ತು ಮಾಧ್ಯಮಗಳು ದಿನೇ ದಿನೇ ಜನಸಾಮಾನ್ಯರ ವಿಶ್ವಾಸವನ್ನು ಕಳೆದುಕೊಳ್ಳುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ. ಈ ನೇತ್ಯಾತ್ಮಕ ಬೆಳವಣಿಗೆಗಳಿಗೆ ನಮ್ಮಿಂದ ಸಂಸತ್ತು, ವಿಧಾನಸಭೆಗಳಿಗೆ ಆರಿಸಿಹೋದ ಜನಪ್ರತಿನಿಧಿಗಳೇ ಬಹುಮಟ್ಟಿಗೆ ಕಾರಣರಾಗಿದ್ದಾರೆ. ಇದರಿಂದ ಸಂವಿಧಾನದಲ್ಲಿ ನಿರೂಪಿಸಿರುವ ಆಶಯಗಳಿಗೆ ಕಿಂಚಿತ್ತೂ ಬೆಲೆ ಇಲ್ಲದಂತಾಗಿದೆ. ಇದರಿಂದ ಸರಕಾರ ನಾನಾ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಸಂವಿಧಾನರೀತ್ಯಾ ನೇಮಕಮಾಡುವ ತನಿಖಾ ಆಯೋಗಗಳ ಕಾರ್ಯವೈಖರಿ ಜನರಲ್ಲಿ ಭ್ರಮನಿರಸನ ಉಂಟುಮಾಡಿದೆ.

೨೦೦೨ರಲ್ಲಿ ಜರುಗಿದ ಗೋಧ್ರಾ ಹತ್ಯಾಕಾಂಡಕ್ಕೆ ಸಂಬಂಧಪಟ್ಟಂತೆ ತನಿಖೆ ನಡೆಸಲು ರಚಿಸಲಾಗಿದ್ದ ನ್ಯಾಯಮೂರ್ತಿ ನಾನಾವತಿ ಆಯೋಗದ ವರದಿಯ ಮೊದಲ ಭಾಗ ಆರು ವರ್ಷಗಳ ನಂತರ ಮೊನ್ನೆ ತಾನೆ ಪ್ರಕಟಿಸಲಾಗಿದೆ. ಆ ವರದಿಯಲ್ಲಿನ ಅಂಶಗಳು ಮೇಲಿನ ಮಾತುಗಳನ್ನು ಪುಷ್ಟೀಕರಿಸುವಂತಿವೆ.

ಫೆಬ್ರವರಿ ೨೭, ೨೦೦೨ರಂದು ಗೋಧ್ರಾ ಎಂಬ ಪುಟ್ಟ ನಿಲ್ದಾಣದಲ್ಲಿ ಸಬರಮತಿ ಎಕ್ಸ್‌ಪ್ರೆಸ್ ರೈಲಿನ ೬೬ ಜನ ಸಂಘಪರಿವಾರದ ಕರಸೇವಕರು ಜೀವಂತವಾಗಿ ಸುಟ್ಟುಹೋದ ಆಘಾತ ಸಂಭವಿಸಿದ್ದು ಎಲ್ಲರಿಗೂ ತಿಳಿದಿರುವ ವಿಷಯ. ಇದು ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾರತದ ಘನತೆ, ಸ್ವಾಭಿಮಾನಗಳಿಗೆ ಕಳಂಕ ತಂದುಕೊಟ್ಟ ನಾಚಿಕೆಗೇಡಿನ ವಿಷಯ, ಫ್ಯಾಸಿಸ್ಟ್ ಶಕ್ತಿಗಳ ನಿಜ ಸ್ವರೂಪವನ್ನು ಇಡೀ ರಾಷ್ಟ್ರಕ್ಕೆ ಪರಿಚಯಿಸಿದ ಪಾಶವೀ ಕೃತ್ಯಗಳ ತಾಂಡವ ನೃತ್ಯದ ಪ್ರದರ್ಶನ. ಈ ದುರಂತವು ಕೋಮು ಸ್ವರೂಪ ಪಡೆದಿದ್ದರಿಂದಾಗಿ ಗುಜರಾತ್ ಹತ್ತಿ ಉರಿದು ವ್ಯಾಪಕ ಹಿಂಸಾಚಾರಗಳು ಜರುಗಿ ೨ ಸಾವಿರಕ್ಕೂ ಹೆಚ್ಚು ಜನರು ಅಸುನೀಗಿದರು. ಇದರಲ್ಲಿ ಹೆಚ್ಚಿನವರು ಮುಸ್ಲಿಮರು. ದಾಳಿಕೋರರಿಗೆ, ಸಾಮೂಹಿಕ ಕೊಲೆ - ಲೂಟಿಗಳಲ್ಲಿ ನಿರತರಾಗಿದ್ದ ಹಿಂದೂ ಮತಾಂಧ ಶಕ್ತಿಗಳಿಗೆ ಆಳುವ ಪಕ್ಷದ ಜನಪ್ರತಿನಿಧಿಗಳು, ಸರ್ಕಾರಿ ಇಲಾಖೆಯ ಅಧಿಕಾರಿಗಳು, ಪೊಲೀಸರಾದಿಯಾಗಿ ಎಲ್ಲರೂ ಕುಮ್ಮಕ್ಕು ನೀಡಿದ ವರದಿಗಳು ಈಗಾಗಲೇ ಜಗಜ್ಜಾಹೀರಾಗಿವೆ.

ಗೋಧ್ರಾ ಹತ್ಯಾಕಾಂಡ ಕುರಿತಂತೆ ಸಮಗ್ರ ತನಿಖೆ ನಡೆಸಲು ರಚಿಸಲಾದ ಬೇರೆ ಬೇರೆ ಆಯೋಗಗಳಲ್ಲಿ ನಾನಾವತಿ ಆಯೋಗವೂ ಒಂದು. ನರೇಂದ್ರ ಮೋದಿ ಅವರ ಗುಜರಾತ್ ಸರ್ಕಾರದ ಆದೇಶದ ಮೇರೆಗೆ ರಚಿಸಲಾದ ಈ ಆಯೋಗವು ೬ ವರ್ಷಗಳ ಕಾಲ ಸುದೀರ್ಘ ತನಿಖೆ ಕೈಗೊಂಡ ನಂತರ, ಈ ದುರಂತದ ಹಿಂದೆ ಮುಸ್ಲಿಮರ ಸಂಚು ಇದೆ, ಮುಖ್ಯಮಂತ್ರಿ ನರೇಂದ್ರ ಮೋದಿ ಮತ್ತು ಅವರ ಸಂಪುಟದ ಸಹೋದ್ಯೋಗಿಗಳು ನಿರ್ದೋಷಿಗಳು ಎಂಬ, ಸತ್ಯಾಂಶಗಳಿಗೆ ತದ್ವಿರುದ್ಧವಾಗಿರುವ, ತೀರ್ಪನ್ನು ನೀಡಿದೆ. ಇದು ಈ ಆಯೋಗ ಇತ್ತಿರುವ ತೀರ್ಪಿನ ಮೊದಲಭಾಗ. ಬರುವ ಡಿಸೆಂಬರ್ ಹೊತ್ತಿಗೆ ರೈಲು ದುರಂತದ ನಂತರ ಸಂಭವಿಸಿದ ಹಿಂಸಾಚಾರಗಳ ಬಗ್ಗೆ ತನ್ನ ತೀರ್ಪಿನ ಅಂತಿಮ ಭಾಗವನ್ನು ಪ್ರಕಟಿಸಲಿದೆ. ರಾಜ್ಯದ ವಿವಿಧ ರಾಜ್ಯಗಳಲ್ಲಿ ಕೋಮುವಾದದ ಜ್ವಾಲೆ ಹತ್ತಿ ಉರಿಯುತ್ತಿರುವ, ಫ್ಯಾಸಿಸ್ಟ್ ಶಕ್ತಿಗಳು ಎಗ್ಗಿಲ್ಲದೆ ಅಲ್ಪಸಂಖ್ಯಾತರ ಮೇಲೆ ವ್ಯಾಪಕವಾಗಿ ಅತ್ಯಾಚಾರಗಳನ್ನು ಎಸಗುತ್ತಿರುವ ಮತ್ತು ಭಯೋತ್ಪಾದಕರ ರಾಷ್ಟ್ರವಿರೋಧಿ ಕೃತ್ಯಗಳು ಹೆಚ್ಚುತ್ತಿರುವ ಹೊತ್ತಿನಲ್ಲೇ ಮೋದಿ ಸರ್ಕಾರ ನಾನಾವತಿ ಆಯೋಗದ ತೀರ್ಪನ್ನು ಪ್ರಕಟಿಸುತ್ತಿರುವುದು ವಿಷಾದನೀಯ. ಸರ್ವೋಚ್ಚ ನ್ಯಾಯಾಲಯವು ನಂಬಲನರ್ಹವೆಂದು ತಿರಸ್ಕರಿಸಿದ ಸ್ಥಳೀಯ ಪೊಲೀಸ್ ಚಾರ್ಜ್‌ಶೀಟುಗಳನ್ನೇ ಆಧಾರವಾಗಿಟ್ಟುಕೊಂಡು ನಾನಾವತಿ ಆಯೋಗವು ತನ್ನದೇ ಆದ ಕೆಲವು ಅಸಂಬದ್ಧ ಅಭಿಪ್ರಾಯಗಳನ್ನು ಪ್ರಕಟಿಸಿರುವುದು ಖಂಡನೀಯ. ಸುಳ್ಳು ಸಾಕ್ಷಿಗಳನ್ನು ಖರೀದಿಸಲು ಲಕ್ಷಾಂತರ ರೂಪಾಯಿಗಳ ಹಣದ ಹೊಳೆ ಹರಿಸಲಾಗಿದೆ ಎಂದು ವಿವಿಧ ಮೂಲಗಳಿಂದ ತಿಳಿದುಬಂದಿದೆ. ಮಾಧ್ಯಮಗಳೂ ಇದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳನ್ನು ಒದಗಿಸಿವೆ.

ಇದಕ್ಕೂ ಮುಂಚೆ ಕೇಂದ್ರ ಸರಕಾರದ ಆದೇಶದಂತೆ ರಚಿಸಲಾದ ಬ್ಯಾನರ್ಜಿ ಆಯೋಗವು ರೈಲು ಬೋಗಿಯಲ್ಲಿ ಸಂಭವಿಸಿದ ಬೆಂಕಿ ಅಪಘಾತ ಒಂದು ಆಕಸ್ಮಿಕವೇ ಹೊರತು ಉದ್ದೇಶಪೂರ್ವಕವಾದುದಲ್ಲ ಎಂದು ಅಭಿಪ್ರಾಯಪಟ್ಟಿರುವುದೇ ಅಲ್ಲದೆ ಹೊರಗಿನಿಂದ ಬೆಂಕಿ ಹಚ್ಚಲಾಯಿತು ಎಂಬ ಆರೋಪವನ್ನು ಸಾರಾಸಗಟಾಗಿ ತಿರಸ್ಕರಿಸಿದೆ. ಸರ್ವೋಚ್ಚ ನ್ಯಾಯಾಲಯದ ಆದೇಶದನ್ವಯ ಈ ವರದಿಯನ್ನು ಸಂಸತ್ತಿನಲ್ಲಿ ಇನ್ನೂ ಮಂಡಿಸಿಲ್ಲ.

ವಿಶೇಷದ ಸಂಗತಿ ಎಂದರೆ ಗೋಧ್ರಾ ಘಟನೆಯ ಬಗ್ಗೆ ರಚನೆಗೊಂಡ ನಿವೃತ್ತ ನ್ಯಾಯಾಧೀಶರು ಮತ್ತು ಪರಿಣತರನ್ನು ಒಳಗೊಂಡ ಹಲವಾರು ಸಮಿತಿಗಳು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ನಾನಾವತಿ ಆಯೋಗದ ವರದಿ ತದ್ವಿರುದ್ಧವಾಗಿದೆ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಆಗಿನ ಅಧ್ಯಕ್ಷ ಹಾಗೂ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಜೆ. ಎಸ್. ವರ್ಮಾ ಮಂಡಿಸಿರುವ ವರದಿಯಲ್ಲಿ ದೊಂಬಿಯನ್ನು ನಿಯಂತ್ರಿಸಲು ಮತ್ತು ನೊಂದವರಿಗೆ ಪರಿಹಾರ ಒದಗಿಸಲು ಮೋದಿ ಸರ್ಕಾರ ಸಂಪೂರ್ಣವಾಗಿ ವಿಫಲವಾಗಿದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ನೇತೃತ್ವದ ತನಿಖಾ ಸಮಿತಿಯು ಸ್ವಾಯತ್ತವಾಗಿ ತನಿಖೆ ಕೈಗೊಂಡು ರೈಲು ಬೋಗಿಗೆ ಹೊರಗಿನಿಂದ ಬೆಂಕಿ ಹಚ್ಚಲಾಯಿತು ಎಂಬ ಆರೋಪ ನಿರಾಧಾರವಾದುದು ಎಂದು ಘೋಷಿಸಿದೆ. ಅಲಹಾಬಾದ್ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಎಸ್. ಸಿ. ಜೈನ್ ಅವರು ಸಹ ಈ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ.

ನಾನಾವತಿ ಆಯೋಗದ ತೀರ್ಪು ಅಂತಿಮ ಎಂದೇನಲ್ಲ, ಬರುವ ಡಿಸೆಂಬರ್ ೩೧ರ ಒಳಗಾಗಿ ಆಯೋಗ ತನ್ನ ಎರಡನೆಯ ಮತ್ತು ಅಂತಿಮ ಭಾಗವನ್ನು ಪ್ರಕಟಿಸಲಿದೆ. ಅದೇ ವೇಳೆಗೆ ಸರ್ವೋಚ್ಚ ನ್ಯಾಯಾಲಯವು ನೇಮಿಸಿರುವ ವಿಶೇಷ ತನಿಖಾ ಪಡೆಯ ವರದಿಯೂ ಬರಲಿದೆ.

ಇಲ್ಲಿ ಬಹು ಮುಖ್ಯವಾದ ಅಂಶವೆಂದರೆ, ಮೋದಿ ಸರ್ಕಾರ ಗಲಭೆಕೋರರಿಗೆ ನೇರವಾಗಿ ಕುಮ್ಮಕ್ಕು ನೀಡಿರುವ ವಾಸ್ತವಾಂಶಗಳನ್ನು ಮುಚ್ಚಿಹಾಕುವಂತಹ ಪ್ರಯತ್ನಗಳಿಗೆ ಕೇಂದ್ರ ಸರ್ಕಾರ ಅವಕಾಶ ನೀಡಬಾರದು. ಈ ಹಿನ್ನೆಲೆಯಲ್ಲಿ ಪ್ರಮುಖವಾಗಿ ಇದೀಗ ಒರಿಸ್ಸಾ, ಕರ್ನಾಟಕ ಮತ್ತು ಮಧ್ಯಪ್ರದೇಶ ರಾಜ್ಯಗಳಲ್ಲಿ ಕ್ರೈಸ್ತರ ಮೇಲೆ ಮತ್ತು ಇತರೆಡೆ ಮುಸ್ಲಿಮರು

ಹಾಗೂ ದಲಿತ ಸಮುದಾಯದವರ ಮೇಲೆ ಸಂಘಪರಿವಾರದ ಖೂಳರು ನಡೆಸುತ್ತಿರುವ ಆಕ್ರಮಣಕಾರಿ ಕೃತ್ಯಗಳನ್ನು ಪ್ರಜ್ಞಾವಂತ ಮತ್ತು ಪ್ರಗತಿಪರ ಜನವಿಭಾಗಗಳು, ಸಂಘಟನೆಗಳು ಗಂಭೀರವಾಗಿ ಪರಿಗಣಿಸಿ ಕೇಂದ್ರ ಸರ್ಕಾರದ ಮೇಲೆ ಒತ್ತಡ ತರುವ ದಿಶೆಯಲ್ಲಿ ಜನಾಭಿಪ್ರಾಯ ಮೂಡಿಸಬೇಕಿದೆ. ಜೊತೆಗೆ, ಈ ಜನವಿಭಾಗಗಳು ಮಧ್ಯಪ್ರವೇಶಿಸಿ ಕೋಮುವಾದಿ ಶಕ್ತಿಗಳನ್ನು ಹಿಮ್ಮೆಟ್ಟಿಸಲು ವಿವಿಧ ರಾಜ್ಯಗಳಲ್ಲಿ ಜರುಗಲಿರುವ ಚುನಾವಣೆಗಳು ಸೂಕ್ತ ಅವಕಾಶಗಳನ್ನು ಒದಗಿಸಲಿವೆ.

ಇನ್ನು ಈ ಆಯೋಗಗಳ ಉಪಯುಕ್ತತೆ ಕುರಿತೇ ವ್ಯಾಪಕವಾದ ಸಾರ್ವಜನಿಕಮಟ್ಟದ ಚರ್ಚೆಯಾಗುವುದು ಒಳಿತು. ಏಕೆಂದರೆ, ಸ್ವಾತಂತ್ರ್ಯಾನಂತರದ ದಿನಗಳಿಂದಲೂ ನೇಮಕಗೊಂಡು ಕಾರ್ಯ ನಿರ್ವಹಿಸಿರುವ ಬಹಳಷ್ಟು ಆಯೋಗಗಳಿಂದ ಯಾವ ನಿರೀಕ್ಷಿತ ಪ್ರಯೋಜನವೂ ಆಗಿಲ್ಲ. ಜನರು ಆಯೋಗಗಳಲ್ಲಿ ನಂಬಿಕೆ ಕಳೆದುಕೊಂಡಿದ್ದಾರೆ. ಏಕೆಂದರೆ ಪ್ರಕರಣವನ್ನು ಮುಚ್ಚಿಹಾಕಲೆಂದೇ ಆಯೋಗಗಳನ್ನು ರಚಿಸಲಾಗುತ್ತದೆ ಎಂಬ ಸಂಶಯ ಬಲಗೊಳ್ಳುತ್ತಿದೆ. ಒಟ್ಟಿನಲ್ಲಿ, ಆಯೋಗಗಳನ್ನು ನೇಮಕ ಮಾಡುವ ವ್ಯವಸ್ಥೆಯೇ ವಿಫಲವಾಗಿದೆ. ಮುಂಧ್ರ ಹಗರಣ ಅಥವಾ ಮತ್ತಾವುದೋ ಹಗರಣ, ಇಲ್ಲವೇ ಸಾಮೂಹಿಕ ಗಲಭೆಗಳ ಕುರಿತು ರಚಿಸಲಾದ ಒಂದೆರಡು ಆಯೋಗಗಳನ್ನು ಹೊರತುಪಡಿಸಿದರೆ ಮಿಕ್ಕೆಲ್ಲ ಆಯೋಗಗಳು (ಉದಾಹರಣೆಗೆ, ಇಂದಿರಾ ಗಾಂಧಿ ಹತ್ಯೆಯ ನಂತರ ಜರುಗಿದ ಸಿಖ್ಖರ ಮೇಲೆ ಜರುಗಿದ ದಾಳಿ, ಬಾಬ್ರಿ ಮಸೀದಿ ಪ್ರಕರಣದ ಲಿಬರ್ಹಾನ್ ಕಮಿಷನ್ ಇತ್ಯಾದಿ) ಇತ್ತಿರುವ ತೀರ್ಪಿನಿಂದಾಗಿ ಎಷ್ಟು ಜನ ಆಪಾದಿತರು ಶಿಕ್ಷೆಗೆ ಗುರಿಯಾಗಿದ್ದಾರೆ ? ಅಲ್ಲದೆ, ಆಯೋಗಗಳು ತನಿಖೆಗಾಗಿ ತೆಗೆದುಕೊಳ್ಳುವ ಸಮಯ ಬಹಳ ದೀರ್ಘವಾದುದು. ಹಾಗೊಮ್ಮೆ ಅವು ತೀರ್ಪು ನೀಡುವ ಹೊತ್ತಿಗೆ ಸಂಬಂಧಪಟ್ಟ ವಿಷಯಗಳು ತಮ್ಮ ಪ್ರಸ್ತುತತೆಯನ್ನೇ ಕಳೆದುಕೊಂಡಿರುತ್ತವೆ. ಕೆಲವೊಮ್ಮೆ ಆಯೋಗಗಳು ಸತ್ಯಸಂಗತಿಗಳ ದಾರಿ ತಪ್ಪಿಸುವ ದೃಷ್ಟಾಂತಗಳೂ ಇಲ್ಲದಿಲ್ಲ. ಸತ್ಯಾನ್ವೇಷಣೆಯ ಬದಲು ವೈಯಕ್ತಿಕ ಲಾಭಕ್ಕಾಗಿ ಮತ್ತು ರಾಜಕೀಯ ಲಾಭಕ್ಕಾಗಿ, ರಾಜಕೀಯವಾಗಿ ಸೇಡುತೀರಿಸಿಕೊಳ್ಳಲಿಕ್ಕಾಗಿ ಆಯೋಗಗಳನ್ನು ರಚಿಸಲಾಗುತ್ತದೆ ಎಂಬುದು ಅನುಭವದಿಂದ ಕಂಡುಬಂದಿರುವ ಸತ್ಯ.

ರಾಜಕೀಯ ಲಾಭಕ್ಕಾಗಿ ಸರ್ಕಾರಗಳು ಹೇಗೆ ಸೋಗಲಾಡಿತನಕ್ಕೆ ಮೊರೆಹೋಗುತ್ತವೆ ಎಂಬುದಕ್ಕೆ ಬಾಬರಿ ಮಸೀದಿ ಘಟನೆಯ ನಂತರ ಸಂಭವಿಸಿದ ಮುಂಬೈ ಗಲಭೆಗಳ ತನಿಖೆಗೆ ನೇಮಿಸಿದ ನ್ಯಾಯಮೂರ್ತಿ ಬಿ. ಎನ್. ಶ್ರೀಕೃಷ್ಣ ಆಯೋಗದ ವರದಿಗೆ ಸಂದ ಗತಿಯೇ ಒಂದು ಸೂಕ್ತ ನಿದರ್ಶನ.

ಕೋಮು ಗಲಭೆ, ಗೋಲಿಬಾರ್‌ಗಳಂತಹ ಘಟನೆಗಳು ಜರುಗಿದಾಗ ಸಾರ್ವಜನಿಕ ಟೀಕೆ, ಪ್ರತಿಪಕ್ಷಗಳ ಆಕ್ರೋಶಗಳನ್ನು ಆ ಕ್ಷಣಕ್ಕೆ ಶಮನಗೊಳಿಸುವ ಸಲುವಾಗಿ ಸರ್ಕಾರಗಳು ತನಿಖಾ ಆಯೋಗಗಳನ್ನು ರಚಿಸಿ ಕೈತೊಳೆದುಕೊಂಡುಬಿಡುತ್ತವೆ.

ಸದ್ಯದಲ್ಲಿ ಯಾವುದೇ ಆಯೋಗಕ್ಕೆ ತಪ್ಪಿತಸ್ಥರ ಮೇಲೆ ನೇರವಾಗಿ ಕ್ರಮ ಜರುಗಿಸುವ ಹಕ್ಕಿಲ್ಲ, ಕೇವಲ ಶಿಫಾರಸು ಮಾಡಬಹುದಷ್ಟೆ. ೧೯೫೨ರ ವಿಚಾರಣಾ ಆಯೋಗ ಕಾಯ್ದೆ ಅನ್ವಯ ನೇಮಕಗೊಂಡ ಆಯೋಗಗಳು ಸತ್ಯಶೋಧನಾ ಸಮಿತಿಗಳೇ ಹೊರತು ಅವುಗಳು ಮಾಡುವ ಶಿಫಾರಸುಗಳನ್ನು ಜಾರಿಗೊಳಿಸುವುದು ಸರ್ಕಾರಕ್ಕೆ ಕಡ್ಡಾಯವೇನೂ ಅಲ್ಲ. ಎಷ್ಟೋ ಆಯೋಗಗಳ ವರದಿಗಳು ಆಳುವ ಸರ್ಕಾರಗಳಿಗೆ ವಿರುದ್ಧವಾಗಿದ್ದರೆ, ಅಂಥವು ಬೆಳಕು ಕಾಣುವುದೇ ಇಲ್ಲ. ತೆರಿಗೆದಾರರ ಹಣವನ್ನು ವೆಚ್ಚಮಾಡಿ ಇಂತಹ ನಿಷ್ಪ್ರಯೋಜಕ ಆಯೋಗಗಳನ್ನು ರಚಿಸುವುದರಿಂದಾಗುವ ಪ್ರಯೋಜನವಾದರೂ ಏನು ?

ಈ ನ್ಯೂನತೆಗಳನ್ನು ನಿವಾರಿಸುವ ದಿಶೆಯಲ್ಲಿ ಈ ಕೆಲವೊಂದು ಅಂಶಗಳನ್ನು ಪರಿಶೀಲಿಸಬಹುದಾಗಿದೆ :

೧. ಆಡಳಿತ ಪಕ್ಷಗಳು ಮತ್ತು ಪ್ರತಿಪಕ್ಷಗಳು ಒಮ್ಮತಕ್ಕೆ ಬಂದು ಸಂವಿಧಾನದಲ್ಲಿ ಸೂಕ್ತ ತಿದ್ದುಪಡಿ ತಂದು ಇನ್ನು ಮುಂದೆ ರಚಿಸಲಾಗುವ ತನಿಖಾ ಆಯೋಗಗಳು ನೀಡುವ ತೀರ್ಪುಗಳಿಗೆ, ನ್ಯಾಯಾಲಯಗಳು ನೀಡುವ ತೀರ್ಪುಗಳಿಗೆ. ಶಾಸನಬದ್ಧ ಮಾನ್ಯತೆ ಇರುವಂತಾಗಬೇಕು.

೨. ಆಯೋಗವು ನಿರ್ದಿಷ್ಟ ಅವಧಿಯೊಳಗೆ ತನ್ನ ವರದಿಯನ್ನು ಸಲ್ಲಿಸಬೇಕು.

೩. ಆಪಾದಿತರನ್ನು ವಿಚಾರಣೆಗೆ ಗುರಿಪಡಿಸಲು ಆಯೋಗಕ್ಕೆ ಅಧಿಕಾರ ನೀಡಬೇಕು. ಅಂತಹ ವ್ಯಕ್ತಿ ಯಾರೇ ಆಗಿರಲಿ, ಆಯೋಗವೇ ಶಿಕ್ಷೆ ವಿಧಿಸುವಂತಿರಬೇಕು. (ಲೋಕಾಯುಕ್ತರ ಬೇಡಿಕೆಯೂ ಇದೇ ಆಗಿದೆ.)

ಇಂತಹ ಕ್ರಮಗಳಿಂದಾಗಿ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯ ಅಂಗಸಂಸ್ಥೆಗಳು ಜನತೆಯ ವಿಶ್ವಾಸವನ್ನು ಮತ್ತೊಮ್ಮೆ ಗಳಿಸಿಕೊಳ್ಳಲು ಸ್ವಲ್ಪ ಮಟ್ಟಿಗಾದರೂ ಸಾಧ್ಯವಾದೀತು.

ಸಿ — [signature]

## ಮಾಧ್ಯಮಗಳು ಎತ್ತ ಸಾಗಿವೆ ?

ಮೆಕ್‌ಲೂಹನ್ 'ಮಾಧ್ಯಮವೇ ಸಂದೇಶ' ಎಂದಿದ್ದಾನೆ. ಸಂದೇಶದ ವಾಹಕವು ಮಾಧ್ಯಮವೇ ವಿನಾ ಅದೇ ಹೇಗೆ ಸಂದೇಶವಾದೀತು ? ಆದ್ದರಿಂದ ಆ ಮಾತಿಗೆ ಒಂದು ಗಂಭೀರವಾದ ವ್ಯಾಪ್ತಿ ಇದ್ದಿರಬೇಕು. ೧೯೯೦ರ ದಶಕದ ನಂತರದಲ್ಲಿ ಮಾಧ್ಯಮಗಳು ಆವರಿಸಿದ ಪ್ರಕಾರವನ್ನು ನೋಡುತ್ತಾ ಬಂದಂತೆ ಈ ಮಾತು ನಿಜವಿರಬಹುದೆ, ಎಂಬ ಹೊಸ ಭಾವನೆ ಮೂಡುತ್ತಿದೆ. ೧೯೬೭ರಲ್ಲಿ ಬಿ.ಬಿ.ಸಿ.ಯ ದೂರದರ್ಶನವಲ್ಲದೆ, ಐ.ಟಿ.ವಿ., ಅಮೆರಿಕಾದ ಟಿ.ವಿ.ಚಾನೆಲ್ಲುಗಳು ಅಂತೆಯೇ ಹಲವು ಸ್ವದೇಶಿ ಮತ್ತು ವಿದೇಶಿ ರೇಡಿಯೋ ಪ್ರಸಾರಗಳನ್ನು ಸಾಕಷ್ಟು ಪರಿಮಾಣದಲ್ಲಿ ಪರಿಚಯ ಮಾಡಿಕೊಂಡಿದ್ದವರಿಗೊಂದು ವಿಸ್ಮಯವಿತ್ತು. ಆಗ್ಗೆ ಬಿ.ಬಿ.ಸಿ.ಯಲ್ಲಿ ಪ್ಯಾಲೆಸ್ಟೈನ್ ಬಗ್ಗೆ ಹತ್ತಾರು ವರದಿಗಳು ಮತ್ತು ಚರ್ಚೆಗಳು ತುಂಬಿರುತ್ತಿದ್ದವು. ಅದನ್ನು ಗಮನಿಸಿದಾಗ, ''ಎಲಾ ಇವರ, ಸುಳ್ಳನ್ನು ಎಷ್ಟೊಂದು ಪರಿಣಾಮಕಾರಿಯಾಗಿ ನಿಜವೆಂಬಂತೆ ನಂಬಿಸುವ ಚಮತ್ಕಾರ ಇವರಿಗಿದೆಯಲ್ಲ'' ಎನಿಸುತ್ತಿತ್ತು. ಈಚಿನ ವರ್ಷಗಳಲ್ಲಿ ಮಾಧ್ಯಮಗಳನ್ನು ನಂಬುವುದೇ ಕಷ್ಟ, ಇವು ಯಾರದೋ ಹಿತವನ್ನು ಗಮನದಲ್ಲಿಟ್ಟುಕೊಂಡು ಸುದ್ದಿಯನ್ನು ಸೃಷ್ಟಿಸುತ್ತವೆ, ಇಲ್ಲವೆ ಸುದ್ದಿಗಳಿಗೆ ಹೊಸ ಆಯಾಮಗಳನ್ನು ಕಲ್ಪಿಸಿಕೊಡುತ್ತವೆ, ಎಂಬ ಆತಂಕ ಕಾಡುತ್ತಿದೆ. ನೋಮ್ ಚೋಮ್‌ಸ್ಕಿ ಬೇರೊಂದು ಸಂದರ್ಭದಲ್ಲಿ ಹೇಳಿರುವಂತೆ ಎಷ್ಟೋ ಬಾರಿ ಮಾಧ್ಯಮಗಳು ಜನರ 'ಒಪ್ಪಿಗೆಯನ್ನು ಉತ್ಪಾದಿಸುತ್ತವೆ'. ಅವುಗಳ ತಾಂತ್ರಿಕತೆ, ಪ್ರದರ್ಶನ ಕೌಶಲ್ಯ, ಆಕರ್ಷಕ ಮಾತುಗಾರಿಕೆ, ಎಲ್ಲಾ ಸೇರಿ ಓದುಗನ ಅಥವಾ ನೋಡುವವನ ತಾರ್ಕಿಕ ದೃಷ್ಟಿಯನ್ನು ಮಂಕುಗೊಳಿಸಿ, ಅನೇಕ ಅವಾಸ್ತವಿಕ ಮತ್ತು ಅವೈಚಾರಿಕ ಅಂಶಗಳನ್ನು ಅಂತರ್ಗತ ಮಾಡಿಕೊಳ್ಳುವಂತೆ ಪ್ರೇರೇಪಿಸುತ್ತವೆ.

(೯ನೇ ಪುಟಕ್ಕೆ)






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಪರಮಾಣು ಒಪ್ಪಂದ

ಶ್ರೀಮತಿ ತನು ಮೆಹ್ತಾ ತಿವಾರಿಯವರು ತಮ್ಮ ಲೇಖನದಲ್ಲಿ ಹಲವಾರು ಅಂತರಂಗದ ಮಾತುಗಳನ್ನು ಬಹಿರಂಗವಾಗಿ ಓದುಗರ ಮುಂದಿಟ್ಟಿದ್ದಾರೆ. ಅಮೆರಿಕಾದ ನೀತಿಯನ್ನು ನೇರವಾಗಿ ದುರಹಂಕಾರದ ಶಾಸನವೆಂದೂ, ಬೇರೆ ರಾಷ್ಟ್ರಗಳ ವಿದೇಶಾಂಗ ನೀತಿಯಲ್ಲಿ ಮೂಗು ತೂರಿಸುವ ಕ್ರಮವೆಂದೂ ನಿರ್ಭೀತಿಯಿಂದ ಓದುಗರಿಗೆ ಮನವರಿಕೆ ಮಾಡಿದ್ದಾರೆ. ಆ ಆಜ್ಞೆಗಳನ್ನು ಪಾಲಿಸುವುದು, ಬಿಡುವುದು ನಮ್ಮ ನಿರ್ಧಾರಕ್ಕೆ ಬಿಟ್ಟದ್ದು ಎನ್ನುವ ಧೋರಣೆಯು ಅಕ್ಷರಶಃ ನಿಜ. ಈ ನೀತಿಯನ್ನು ಎಡಪಕ್ಷಗಳು ಆಳುವ ಪಕ್ಷಕ್ಕೆ ತಿಳಿ ಹೇಳುವಲ್ಲಿ ಸಫಲರಾಗಿಲ್ಲ. ಶ್ರೀಮತಿ ಮೆಹ್ತಾರವರ ''ಅಮೆರಿಕಾ ಯಾವ ದೊಣೆ ನಾಯಕ!'' ಎನ್ನುವ ಮಾತು ಒಪ್ಪತಕ್ಕದ್ದೇ ಆದರೆ ನಮ್ಮ ಆಳುವ ಪಕ್ಷದ ನಾಯಕರು ಈ ನಿಲುವನ್ನು ತಳೆಯುವಲ್ಲಿ ಸಾಕಷ್ಟು ಚಿಂತಿಸಿ, ಮಂಥಿಸಿ ನಿರ್ಧಾರ ಕೈಗೊಳ್ಳುವಲ್ಲಿ ವಿಫಲರಾಗಿದ್ದಾರೆಂಬುದೂ ನಿರ್ವಿವಾದ. ಒಪ್ಪಂದದಿಂದ ತೊಂದರೆ ಬಂದಾಗ ಅಂದಿನ ಸ್ಥಿತಿಗತಿಗನುಗುಣವಾಗಿ ತೀರ್ಮಾನ ತೆಗೆದುಕೊಳ್ಳುವ ಹಕ್ಕು ಸ್ವತಂತ್ರ ಗಣತಂತ್ರವಾದ ''ನಮಗಿದೆ'' ಎನ್ನುವ ಅರಿವನ್ನು ''ದೊಡ್ಡಣ್ಣ'' ಎಂದು ಕರೆಸಿಕೊಳ್ಳುವ ಅಮೆರಿಕಾಗೆ ತಿಳಿಯಪಡಿಸಬೇಕಾದ ಅವಶ್ಯಕತೆಯನ್ನು ಎಡಪಕ್ಷಗಳು ನಮ್ಮ ಪ್ರಧಾನಿ ಮತ್ತು ಅವರ ಆಡಳಿತದ ಜೊತೆಗಾರರಿಗೆ ತಿಳಿ ಹೇಳುವ ರೀತಿಯಲ್ಲಿ ಎಡವಿದ್ದಾರೆ ಎಂಬುದು ಲೇಖನದ ಆಶಯ. ಈಗಿನ ವಿರೋಧ ಪಕ್ಷ ಕೇವಲ ತೋರಿಕೆಗಷ್ಟೇ ವಿರೋಧ ವ್ಯಕ್ತಪಡಿಸಿದ ವಿಷಯ ಆಡಳಿತ ಪಕ್ಷಕ್ಕೂ ಗೊತ್ತಿದ್ದ ವಿಷಯವೇ. ಹೀಗಾಗಿ ಅದು ಈ ನಿಟ್ಟಿನಲ್ಲಿ ಸದನದಲ್ಲಿ ಯಶಸ್ವಿಯಾಯಿತು, ಪರೋಕ್ಷವಾಗಿ. ಖಂಡಿತವಾದ ವಿರೋಧಕ್ಕೆ ಬದ್ಧವಾದ ಎಡಪಕ್ಷಗಳು ಈ ಆಂತರ್ಯವನ್ನು ಅರಿತಿದ್ದರೂ ಸ್ವೀಕರಿಸಲು ಸಿದ್ಧರಾಗದೆ ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದು ಸ್ವಾಗತಾರ್ಹ. ಆದಿಯಿಂದ ಅಂತ್ಯದವರೆಗೆ ಒಂದೇ ನಿಲುವನ್ನು ತಳೆದು ತಾವು ಗಾಳಿ ಬಂದಾಗ ತೂರಿಕೊಳ್ಳುವವರಲ್ಲವೆಂದು ಸಾಬೀತುಪಡಿಸುವಲ್ಲಿ ಎಡಪಕ್ಷಗಳು ಯಶಸ್ವಿಯಾಗಿ ನಂತರ ಒಟ್ಟಾರೆ ಮುಗ್ಗರಿಸಿರುವುದನ್ನು ಒಪ್ಪಿಕೊಳ್ಳಲೇಬೇಕು. ಜೊತೆಗೆ ಈ ವಿಷಯದ ಬಗ್ಗೆ ಎಳೆಎಳೆಯಾಗಿ ಚರ್ಚಿಸಿದ ಹೆಗ್ಗಳಿಕೆಯೂ ಎಡಪಕ್ಷಗಳಿಗಿದೆ. ರಾಜಕೀಯ ತಂತ್ರ ರೂಪಿಸುವಲ್ಲಿ ತಮ್ಮ ಪಾತ್ರವನ್ನು ಸಕಾರಾತ್ಮಕವಾಗಿ ಚಿಂತಿಸಿ ಮಂಥಿಸ ಬೇಕಾಗಿತ್ತೆನ್ನುವ ಮೆಹ್ತಾರವರ ಅನಿಸಿಕೆಯನ್ನು ಓದುಗ ಮತ್ತು ನಾಗರಿಕನಾಗಿ ನಾನೂ ಅನುಮೋದಿಸುತ್ತೇನೆ.

*ಬೆಂಗಳೂರು* **ನೆ. ಲ. ರಾಂ**

> ಜನವರಿಯ **ಹೊಸತು** ವಿಶೇಷ ಸಂಚಿಕೆಯ ಬಗೆಗಿನ ಪ್ರಕಟಣೆಯನ್ನು ಪು. ೫೮ರಲ್ಲಿ ನೋಡಿ. ಪಕ್ಷಾಂತರ ಮುಂತಾದ ವಿಷಯಗಳ ಬಗ್ಗೆ ಓದುಗರಿಂದ ಲೇಖನಗಳಿಗೆ ಸ್ವಾಗತವಿದೆ. ಆಯ್ದ ಕೆಲವನ್ನು ಪ್ರಕಟಿಸಲಾಗುತ್ತದೆ. ಲೇಖನಗಳು ನಾಲ್ಕು ನೂರು ಪದಗಳನ್ನು ಮೀರಬಾರದು ಮತ್ತು ನವೆಂಬರ್ ೨೦ರೊಳಗೆ ನಮಗೆ ತಲುಪಬೇಕು. ಓದುಗರ ಸಹಕಾರವನ್ನು ನಿರೀಕ್ಷಿಸುತ್ತೇವೆ.
>
> **- ಸಂಪಾದಕ**




### ಅಕ್ಟೋಬರ್ ಸಂಚಿಕೆ

ಈ ಬಾರಿ ಮುಕ್ತಾಯವಾದ ಎಸ್. ಆರ್. ವಿಜಯ ಶಂಕರ ಅವರ 'ಪಡ್ನೂರಿನ ಪಾಠಗಳು' ಈ ನೆಲದ ಕೆಳಸ್ತರದ ಮಂದಿಯ ಕನಸುಗಳು ಕರಗಿಹೋಗುವ ಹಾಗೂ ಕಮರಿಹೋದ ಆಸೆ, ಬದುಕನ್ನು ಹೃದಯ ಸ್ಪರ್ಶಿಯಾಗಿ ಹಿಡಿದುಕೊಟ್ಟಿತು. ತಂತ್ರಜ್ಞಾನದ ಬೆಳವಣಿಗೆಯಿಂದ ಹಾಗೂ ಜಾಗತೀಕರಣದ ಅವಸರದೊಂದಿಗೆ ಅಂತಹ ಮಂದಿಗಳ ಒಟ್ಟು ಬದುಕೇ ತ್ರಿಶಂಕು ಸ್ಥಿತಿಗೆ ತಲುಪಿದೆ. ಈ ದುರಂತವನ್ನು ಸಾಹಿತ್ಯಿಕವಾಗಿ, ವೈಚಾರಿಕವಾಗಿ ಶ್ರೀಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗುವಂತೆ ಚಿತ್ರಿಸುವ / ಕಟ್ಟಿಕೊಡುವ ಪ್ರಕ್ರಿಯೆ ಬೌದ್ಧಿಕವಲಯದಿಂದ ನಡೆಯಬೇಕಾಗಿದೆ. ಪ್ರಸಾರ ಮಾಧ್ಯಮಗಳೂ ಈ ಜಾಗೃತಿಯ ಕಾರ್ಯದಲ್ಲಿ ತಮ್ಮ ಮಣ್ಣಿನ, ನಾಡಿನ ಬಗೆಗಿರುವ ಬದ್ಧತೆಯನ್ನು ಮೆರೆಯಬೇಕಾಗಿದೆ. ಆಗ ಮಾತ್ರ ನಾವು ಜಾಗತೀಕರಣದ ತ್ಸುನಾಮಿಯಿಂದ ನಮ್ಮನ್ನು ನಾವು ರಕ್ಷಿಸಿಕೊಳ್ಳಲು ಸಾಧ್ಯವಾದೀತು ಎನ್ನಿಸುತ್ತದೆ.

ಡಾ|| ರಾ. ಚಿಂ. ಢೇರೆಯವರ ಜತೆ ಡಾ|| ರಹಮತ್ ತರೀಕೆರೆ ನಡೆಸಿದ ಸಂದರ್ಶನ ನೆರೆ ರಾಜ್ಯದ ಸಂಸ್ಕೃತಿಯೊಂದನ್ನು ಸ್ಥೂಲವಾಗಿ ಅಷ್ಟೇ ಮೌಲಿಕವಾಗಿ ಪರಿಚಯಿಸಿತು.

ಜಾಗತೀಕರಣ - ಬಲಪಂಥೀಯರ ಸುಳ್ಳು ಎಂದು ವಿಶ್ಲೇಷಿಸಿರುವ ಕು. ಸ. ಮಧುಸೂದನ ಅವರ ವಾದದಲ್ಲಿ ಸಾಕಷ್ಟು ಹುರುಳಿದೆ. ಅವರು ಹೇಳುವ 'ಪ್ರತಿಸಂಸ್ಕೃತಿ', 'ಸ್ವದೇಶೀ ಚಳುವಳಿ...' ಎಲ್ಲಾ ನಿಜವಾಗಿಯೂ ಮುಖವಾಡಗಳನ್ನು ಹೊತ್ತುಕೊಂಡವೇ ಎಂಬಂತೆ ಕಂಡುಬರುತ್ತಿರಲು ಕಾರಣ ನೈತಿಕತೆಯನ್ನು ಒಳಗೊಳಗೇ ಹರಾಜಿಗಿಟ್ಟುಬಿಟ್ಟಿದ್ದು. ಈ ದ್ವಂದ್ವಂಗಳಿಂದ ಚಳುವಳಿ ಮುಕ್ತವಾಗಬೇಕಿದೆ.

*ಚಿತ್ರದುರ್ಗ* **ಚನ್ನಬಸವ ಫುತ್ತೂರ್ಕರ**

### ಭೂತಾಯಿಯ ಸೀಮಂತಕಾರಣ - ಎಳ್ಳಅಮವಾಸ್ಯೆ

ಕೃಷಿ ಮತ್ತು ಜನಪದಗಳು ಒಂದಕ್ಕೊಂದು ಬೆಸೆದುಕೊಂಡಿವೆ. ಅಲ್ಲದೆ ಕಾಲದ ವಿವಿಧ ಹಂತಗಳಲ್ಲಿ ಬೇರೆ ಬೇರೆ ಅಂಶಗಳನ್ನು ಸೇರಿಸಿಕೊಂಡು ಸಂಕೀರ್ಣ ಸ್ವರೂಪ ಪಡೆದಿವೆ, ಸಾಂಕೇತಿಕವಾಗಿವೆ, ನಮ್ಮ ಗತ ಬದುಕಿನ ಗತಿ ಚಿತ್ರ ನೀಡುವ ರೂಪಕಗಳಾಗಿವೆ. ಅಂತಹ ಅರ್ಥಪೂರ್ಣ ರೂಪಕಗಳಲ್ಲಿ (ಆಚರಣೆಗಳಲ್ಲಿ) ಎಳ್ಳಅಮವಾಸ್ಯೆಯೂ ಜೀವಂತ ಪಳೆಯುಳಿಕೆ.

ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಇದು ಒಂದು ಜನಪದ ಹಬ್ಬ. ಹಿಂಗಾರಿ ಬೆಳೆಗಳು ಹಸುರುಟ್ಟು ಮೈದುಂಬಿ ನಿಂತಿರುವ ಋತುಮಾನ. ಈ ಹಂತದಲ್ಲಿ ಹಿಂಗಾರಿ ಜೋಳ ಹಾಲ್‌ಗಾಳಿಗೆ ಬಂದು ಬೆಳಸಿಯಾಗಿರುತ್ತದೆ. ಗರ್ಭಧರಿಸಿ ಭೂತಾಯಿಗೆ ಬಯಕೆ ಬುತ್ತಿ ಉಣಿಸಿ, ಸೀಮಂತಕಾರಣ ಮಾಡುತ್ತಾನೆ, ನಮ್ಮ ರೈತ. ಲೇಖಕರು ಭೂತಾಯಿ ಈ ವೇಳೆಯಲ್ಲಿ ಮದುವಣಗಿತ್ತಿ ಆಗಿರುತ್ತಾಳೆ ಎಂದಿದ್ದಾರೆ. ಆದರೆ ಇದು ಸೀಮಂತ ಕಾರಣದ ಹಬ್ಬ. ಈಗಲೂ ಜನಪದರು ಸೀಮಂತ ಕಾರಣವೆಂದೇ ಕರೆಯುತ್ತಾರೆ. ಈ ಸೀಮಂತ ಕಾರಣದ ಹಬ್ಬ ಮುಂಗಾರಿ ಬೆಳೆಯುವ ಪ್ರದೇಶಗಳಲ್ಲಿ ಶೀಗೆ ಹುಣ್ಣಿಮೆ ಸಂದರ್ಭದಲ್ಲೂ ಆಚರಿಸಲ್ಪಡುತ್ತದೆ. ಕೆಲವು ಪ್ರದೇಶಗಳಲ್ಲಿ ಎರಡೂ ಸಂದರ್ಭಗಳಲ್ಲಿ ಚರಗ ಚಲ್ಲುವ ಭೂತಾಯಿಗೆ ಉಣಬಡಿಸುವ ಕ್ರಿಯೆ ನಡೆಯುತ್ತದೆ. ಹಿಂಗಾರಿ - ಮುಂಗಾರಿಗಳೆರಡೂ ಸಮನಾಗಿ ಬೆಳೆವಲ್ಲಿ ಎರಡೂ ಆಚರಣೆ ರೂಢಿಯಲ್ಲಿವೆ.

ಬಂಧು-ಬಾಂಧವರನ್ನು, ಜೋಗಿ-ಜಂಗಮರನ್ನು, ಆಯಗಾರರಾದ ಎಲ್ಲ ವೃತ್ತಿಯವರನ್ನು ಉಣಿಸಿ ತೃಪ್ತಿಪಡಿಸುವ, ತಾನೂ ಸಂತೃಪ್ತಿ ಪಡೆಯುವ ಗುಣ ರೈತನದು. ತನ್ನ ಮೂರು ತಾಳಿನ ಕೂರಿಕೆಯ ಬೆಳೆಯಲ್ಲಿ, ಒಂದು ಪಾಲನ್ನು ಹಕ್ಕಿ-ಪಕ್ಷಿಗಳಿಗೆ, ಇನ್ನೊಂದು ಆಯಗಾರರು - ಜಂಗಮರಿಗೆ ಸಲ್ಲುವಂತಹದ್ದು. ಅನಂತರ ಉಳಿದದ್ದು ತನಗೆ ಎಂಬ ಭಾವ ರೈತನದು. ಹೀಗೆ ಹಂಚಿತಿನ್ನುವ ಗುಣ ರೈತನಲ್ಲಿ ಇದ್ದೇ ಇದೆ!

*ತಾಳಿಕೋಟೆ* **ಚಂದ್ರಗೌಡ ಕುಲಕರ್ಣಿ**

ಕೈಗೊಳ್ಳುವ ಗೂಂಡಾಕ್ರಮಗಳು ಸಂವಿಧಾನಕ್ಕೆ ಹೊರತಾದುವು. ಆಮಿಷದ ಪ್ರಶ್ನೆ ಇನ್ನೂ ಹೆಚ್ಚು ತೊಡಕಿನದು. ಏಕೆಂದರೆ, ಅಂತಹ ಆಮಿಷಕ್ಕೆ ಬಲಿಯಾಗದಂತೆ ಗಟ್ಟಿಯಾಗಿ ನಿಲ್ಲಲು ಅಗತ್ಯವಾದ ನೆಲೆಯನ್ನು ಕಲ್ಪಿಸಿಕೊಳ್ಳದಿರುವುದು ಒಂದು ದೊಡ್ಡ ನ್ಯೂನತೆ. ಆಮಿಷವನ್ನೊಡ್ಡಿ ಶಾಸಕರನ್ನು ತಮ್ಮೆಡೆಗೆ ಸೆಳೆದುಕೊಳ್ಳುವುದು ''ಪ್ರಜಾಪ್ರಭುತ್ವ''; ಆದರೆ ಮತಾಂತರವನ್ನು ಹಾಗೆ ಮಾಡಬಾರದೆಂಬ ಉನ್ನತ ನೈತಿಕ ಪ್ರಜ್ಞೆಯ ಹಿಂದಿನ ಕುಹಕವನ್ನು ಹೇಗೆ ಅರ್ಥೈಸಬೇಕು ? ಒರಿಸ್ಸಾದ ಕಂಧಮಾಲ್ ಜಿಲ್ಲೆಯಲ್ಲಿ ಮತಾಂತರಗೊಂಡಿದ್ದವರನ್ನು ''ಒಲೈಸಿ'' ಹಿಂದಕ್ಕೆ ಕರೆಸಿಕೊಳ್ಳುವ ''ಚಳುವಳಿ'' ನಡೆಯುತ್ತಿದೆ. ಮೊದಲು ಮತಾಂತರಗೊಂಡದ್ದು ಆಮಿಷಕ್ಕೆ ಬಲಿಯಾಗಿ ಎನ್ನುವುದಾದರೆ, ಮರು ಮತಾಂತರವು ಅಂತಸ್ಸಾಕ್ಷಿಯಿಂದಾಗಿ ನಡೆಯುತ್ತಿದೆಯೋ ಅಥವಾ ಬೇರೊಂದು ರೀತಿಯ ಆಮಿಷವನ್ನು ಒಡ್ಡಿರುವುದರಿಂದಲೋ ? ಮೊದಲು ಮತಾಂತರಕ್ಕೆ ಪ್ರೇರಣೆ ನೀಡಿದವರು ಮನೆ, ಉದ್ಯೋಗ, ಅಂತಸ್ತು, ಶಿಕ್ಷಣ ಮುಂತಾದುವನ್ನು ಆಮಿಷಗಳನ್ನಾಗಿ ಬಳಸಿದರು. (ಅದನ್ನು ಕೊಟ್ಟರೋ ಇಲ್ಲವೋ, ಅದು ಬೇರೆ ಪ್ರಶ್ನೆ). ಮರು ಮತಾಂತರಕ್ಕೆ ನಿರ್ಬಂಧ ಹೇರುತ್ತಿರುವವರು ಒಡ್ಡುವ ಆಮಿಷ ಬೇರೆ ರೀತಿಯದ್ದು. ''ಹಿಂದಿರುಗದಿದ್ದರೆ ನಿನ್ನ ಹತ್ಯೆ ಶತಸ್ಸಿದ್ಧ'' ಎಂಬುದು ಆ ಆಮಿಷ. ಈ ಸೂತ್ರವು ಯಾವ ಧರ್ಮಕ್ಕಾದರೂ ಗೌರವ ತರುತ್ತದೆಯೆ ?

ಎಲ್ಲ ಕೋಮುಗಳ ಸ್ವಯಂಘೋಷಿತ ಕಪಟ ನಾಯಕರು, ಧರ್ಮಾಧಿಕಾರಿಗಳು, ರಾಜಕೀಯ ಧುರೀಣರು ಇದರ ಬಗ್ಗೆ ಶಾಂತವಾಗಿ ಯೋಚಿಸಬೇಕೆಂದು 'ಹೊಸತು' ಅಪೇಕ್ಷಿಸುತ್ತದೆ. ಅದನ್ನು ಮಾಡಿದರೆ ಭೂತಕಾಲದ ಭವ್ಯತೆಯ ಭ್ರಾಂತಿಯನ್ನು ತೊರೆದು ವರ್ತಮಾನದ ವಾಸ್ತವಿಕತೆಯನ್ನು ತಿಳಿಯಲು, ಎದುರಿಸಲು, ಬದಲಿಸಲು ಸಾಧ್ಯವಾದೀತು. ಮತಾಂತರದ ವಿರುದ್ಧ ಎಲ್ಲ ಕೋಮಿನವರೂ ಸಮಾನವಾಗಿ ಆಕ್ರೋಶ ತುಂಬಿಕೊಂಡರೆ ನಮಗೆ ಭೂತ, ವರ್ತಮಾನ, ಭವಿಷ್ಯ ಯಾವುದೂ ಸುಗಮವಾಗುವುದಿಲ್ಲ.

*          *          *

ನಮ್ಮ ರಾಜ್ಯದಲ್ಲಿ ಹಿಂದೊಮ್ಮೆ ಗೋಕಾಕ ಚಳುವಳಿ ನಡೆಯಿತು. ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳು ಕನ್ನಡದ ಬದಲಾಗಿ ಸಂಸ್ಕೃತವನ್ನು ಆಯ್ದುಕೊಂಡು ಹೆಚ್ಚು ಅಂಕ ಗಿಟ್ಟಿಸಿಕೊಳ್ಳುತ್ತಾರೆಂಬ ಹಿನ್ನೆಲೆಯಲ್ಲಿ ಅದರ ಆರಂಭವಾಗಿತ್ತು. ಮುಂದಿನ ಬೆಳವಣಿಗೆಗಳು ಈಗ ಇತಿಹಾಸ. ಗೋಕಾಕ ಚಳುವಳಿಯ ನೇತಾರರಾಗಿದ್ದ ಕನ್ನಡದ ಶ್ರದ್ಧಾಳುಗಳು ಹಾಗೂ ಕಟ್ಟಾಳುಗಳು ಯಾರೂ ಇಂದಿನ ಒಂದು ಬೆಳವಣಿಗೆಯನ್ನು ವಿರೋಧಿಸಿಲ್ಲ ಅದು ನಡೆದೇ ಇಲ್ಲವೆಂಬಂತೆ ಮೂಕರಾಗಿದ್ದಾರೆ. ಏಕೆಂದರೆ, ಅವರಿಗೆಲ್ಲಾ ಕನ್ನಡಕ್ಕಿಂತಲೂ ''ಧರ್ಮದ ರಕ್ಷಣೆ''ಯ ತೀವ್ರತೆ ಇರುವಂತಿದೆ. ನಮ್ಮ ರಾಜ್ಯದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯವೊಂದು ಅಸ್ತಿತ್ವಕ್ಕೆ ಬರಲಿದೆ. ವಿಶ್ವವಿದ್ಯಾನಿಲಯವೊಂದು ಇಲ್ಲದೆಯೂ ಸಂಸ್ಕೃತ ಸಾಹಿತ್ಯವನ್ನು ಈವರೆಗೆ ಅಧ್ಯಯನ ಮಾಡುತ್ತಾ ಬಂದಿರುವುದು ತಿಳಿದ ವಿಷಯ. ಸುಸಂಸ್ಕೃತ ಯಡಿಯೂರಪ್ಪನವರ ಅಪಾರ ಸಂಸ್ಕೃತ ಜ್ಞಾನ ಮತ್ತು ಪ್ರೇಮದಿಂದಾಗಿ ಈಗ ವಿಶ್ವವಿದ್ಯಾನಿಲಯವೊಂದು ಸ್ಥಾಪನೆಗೊಳ್ಳಬೇಕೆ, ಎಂಬುದು ಪ್ರಶ್ನೆ. ಸಂಸ್ಕೃತದಲ್ಲಿರುವುದರ ಮಹತ್ವದ ಚರ್ಚೆ ಇಲ್ಲಿ ಬೇಕಾಗಿಲ್ಲ. ಅದರಲ್ಲಿ ಅದ್ಭುತವಾದ ನೂರಾರು ಸಂಗತಿಗಳಿವೆ, ಸಂಸ್ಕೃತಿಯ ಆಕರಗಳಿವೆ, ಭಾರತದ ಜ್ಞಾನಪ್ರಪಂಚದ ವಿಸ್ತಾರವಾದ ಭೂಮಿಕೆಯಿದೆ. ಈಗಾಗಲೇ ಬಂದಿರುವ ಸಂಸ್ಕೃತ ವಿಶ್ವವಿದ್ಯಾನಿಲಯಗಳು ಒಂದಷ್ಟು ವಿದ್ವಾಂಸರಿಗೆ ಉದ್ಯೋಗ ದೊರಕಿಸಿಕೊಟ್ಟಿವೆಯೇ ವಿನಾ ವಿಶೇಷವಾದ ಜ್ಞಾನಸಂಪತ್ತನ್ನು ಹೆಕ್ಕಿ ತೆಗೆದಿಲ್ಲ, ಯಾವ ಹೊಸ ಆವಿಷ್ಕಾರಗಳಿಗೂ ನಾಂದಿ ಹಾಡಲಿಲ್ಲ. ಕೇವಲ ಗ್ರಾಂಥಿಕ ಮೊಂಡುತನ ಮತ್ತು ಮತಧರ್ಮದ ಕೆಲವು ಆಯಾಮಗಳ ಪೋಷಣೆ ಮಾಡಿರುವುದನ್ನು ಯಾರು ಬೇಕಾದರೂ ವಸ್ತುನಿಷ್ಠವಾಗಿ ಗ್ರಹಿಸಬಹುದು. ಸಂಸ್ಕೃತ ಮತ್ತು ಸಂಸ್ಕೃತಿ ಎಂಬುವು ಗಂಡ-ಹೆಂಡಿರಲ್ಲವೆಂದು ಬಹಳ ಹಿಂದೆಯೇ ಬಿ. ಎಂ. ಶ್ರೀ.ಯವರು ಪ್ರತಿಪಾದಿಸಿದ್ದರು. ('ಸಂಸ್ಕೃತಿ' ಎಂಬುದು 'ಸಂಸ್ಕೃತ'ದ ಸ್ತ್ರೀಲಿಂಗ ರೂಪವಲ್ಲವೆಂಬುದು ಅವರ ಮಾತು). ಆ ಚರ್ಚೆ ಏನೇ ಇರಲಿ, ಗೋಕಾಕ ಧುರಂಧರರೆಲ್ಲಾ ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆಯ ಬಗ್ಗೆ ಚಕಾರವೆತ್ತದಿರುವುದು ಅವರ ಸಂಸ್ಕೃತದ ಬಗೆಗಿನ ಗೌರವದಿಂದಲೋ ಅಥವಾ ರಾಜಕೀಯ ಕಾರಣಗಳಿಂದಲೋ ಎಂಬುದು ಯಕ್ಷ ಪ್ರಶ್ನೆಯೇನೂ ಅಲ್ಲ. ಸಂಸ್ಕೃತದಲ್ಲಿರುವ ಎಲ್ಲ ಗ್ರಂಥಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ವೈಜ್ಞಾನಿಕವಾಗಿ ಅಂದಂದಿನ ಸಾಮಾಜಿಕ ಅವತರಣಿಕೆಗಳಲ್ಲಿ ವಿಶ್ಲೇಷಿಸುವಂತಹ ಸಂಸ್ಕೃತ ವಿಶ್ವವಿದ್ಯಾನಿಲಯವು ನಮಗೆ ಬೇಕು, ಗೊಡ್ಡು ಸಂಪ್ರದಾಯಗಳ ಪೋಷಣೆಗೆ ಸಾಮಗ್ರಿ ಒದಗಿಸುವಂತಹ ವಿಶ್ವವಿದ್ಯಾನಿಲಯವಲ್ಲ. ಅದು ಗೊಡ್ಡುತನದ ಗೂಡಾದರೆ ಅದರಲ್ಲಿ ವಿಶ್ವವು ಅಡಕವಾಗುವುದಿಲ್ಲ, ವಿದ್ಯೆಯೂ ಶೂನ್ಯ; ಕೇವಲ ನಿಲಯವಾಗಿ ಸ್ಥಾವರವೋ ಸ್ಮಾರಕವೋ ಆಗಿಬಿಡುತ್ತದೆ. ಇದರಲ್ಲಿ ಇನ್ನೊಂದು ಕುತೂಹಲದ ಪ್ರಶ್ನೆಯಿದೆ : ಬಿಜಾಪುರದಲ್ಲಿ ಮಹಿಳಾ ವಿಶ್ವವಿದ್ಯಾನಿಲಯ ಮತ್ತು ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾನಿಲಯ ಸ್ಥಾಪನೆಗೊಳ್ಳುವ ಪೂರ್ವದಲ್ಲಿ ಪರ-ವಿರೋಧವಾಗಿ ಅನೇಕ ವಾದಗಳು ಮಂಡಿಸಲ್ಪಟ್ಟಿದ್ದವು. 'ಅದೇಕೆ ಬೇಕು' ಎಂಬ ಧೋರಣೆ ಒಂದು ಕಡೆಯಾದರೆ, 'ಅದರಿಂದ ವಿಶೇಷ ಅನುಕೂಲ' ಉಂಟೆಂದು ಇನ್ನೊಂದು ಕಡೆಯ ಧೋರಣೆ. ಈ ವಿಶ್ವವಿದ್ಯಾನಿಲಯಗಳು ರೂಪುಗೊಳ್ಳುವಲ್ಲಿ ಈ ಚರ್ಚೆಗಳು ಸ್ವಲ್ಪವಾದರೂ ಉಪಯುಕ್ತವಾಗಿದ್ದಿರಬೇಕು. ಆದರೆ ಸಂಸ್ಕೃತ

## ಕನ್ನಡ ನೆಲದಲಿ ಚಡ್ಡಿಗಳು

ಕ್ರಿಸ್ತಪಾದ್ರಿಗಳು ಮುಖ್ಯಮಂತ್ರಿಗಳ ಭೇಟಿ
ಕ್ರಿಸ್ತರ ದುಃಖ ಆಕ್ರೋಶಕ್ಕೆ ಇಲ್ಲವೇ ಇಲ್ಲ ಸಾಟಿ

ದೇಶದ ಮುಂದೆ –
ಅವರದ್ದು ಒಂದೇ ಒಂದು ದೂರು
ಅಪಾಯದಲ್ಲಿದೆ ಕ್ರಿಸ್ತರ ಆತ್ಮದ ಸೂರು

''ಚಡ್ಡಿಗಳ ಅಧಿಕಾರ ಅಹಂಕಾರದ ಮಸ್ತಿ
ಅಮಾಯಕ ಕ್ರಿಸ್ತರ ಮೇಲೆ ಕುಕಾರಣ ಕುಸ್ತಿ
ಪುರೋಹಿತ ಪುರಾಣ ರಾಕ್ಷಸ ನರ್ತನ
ಎಲ್ಲೆಲ್ಲೂ ಚರ್ಚ್‌ಗಳ ನಿರಂತರ ದಮನ''

ಹೀಗೆ ನಡೆದಿತ್ತು ಮಾತು ಕತೆ –
ಪಾದ್ರಿಗಳದು ಒಂದೇ ಒಂದು ಪ್ರಶ್ನೆ:
''ಮಾನ್ಯ ಮುಖ್ಯಮಂತ್ರಿಗಳೆ...
ನಿಮ್ಮ ಸರ್ಕಾರಕ್ಕಿದು ಶೋಭವೆ ?''

ಪಾದ್ರಿಗಳ ಈ ಪ್ರಶ್ನೆಯಿಂದ ಕೆರಳಿ
ಕೂರ್ಮಾವತಾರವನ್ನೇ ತಾಳಿದ...
ಮುಖ್ಯಮಂತ್ರಿಗಳು :
''ಶೋಭಾ ವಿಷಯ ನಿಮಿಗ್ಯಾಕ್ರಿ ?
ಅವನ್ನೆಲ್ಲಾ ಬಿಟ್ಟು –
ನಿಮಗೇನು ಬೇಕೊ ಅದನ್ನು ಕೇಳ್ರಿ''
ಎಂದು ಗುಡುಗಿದರು

ಈ ಗುಡುಗಿನಿಂದಾಗಿ
ಕೊಂಚ ದಡಬಡಿಸಿದರೂ ಪಾದ್ರಿಗಳು :

''ಸ್ವಾಮಿ...
ನಿಮ್ಮ ಪರಿವಾರದವರ ತಲೆಕೆಟ್ಟ ಕ್ರಾಂತಿಯಿಂದ
ಕ್ರಿಸ್ತರು ಬದುಕುವಂತಿಲ್ಲ ನಿತ್ಯದ ಶಾಂತಿಯಿಂದ
ನಾವು ಶಾಂತಿ ಬೇಡಲು ಯೇಸುವಿನಿಂದ ;
ಚರ್ಚ್‌ಗಳೆಲ್ಲಾ ನಿರ್ನಾಮ ಕುಜರಂಗಿ ಚಡ್ಡಿಗಳಿಂದ''
ಎಂದು ದೂರಿದರು.

ಈ ಮಾತು ಕೇಳಿ...
ಕೋಪಾವಿಷ್ಟರಾದ ಮುಖ್ಯಮಂತ್ರಿಗಳು :

''ಏನ್ರಿ ಅದು...?
ಮಾತೆತ್ತಿದರೆ ಚಡ್ಡೀ ಚಡ್ಡೀ ಚಡ್ಡೀ ಚಡ್ಡೀ...
ನೀವೆಲ್ಲಾ ಚಡ್ಡಿ ಇಲ್ದೇ ಬಂದಿದಿರೇನ್ರಿ ?''
ಎಂದು ಮತ್ತೆ ಗುಡುಗಿದರು

ಈ ಗುಡುಗಿನಿಂದ –
ಇನ್ನಷ್ಟು ನಿರಾಶರಾದ ಪಾದ್ರಿಗಳು :

''ಸ್ವಾಮಿ...
ನಮ್ಮನ್ನು ಹೀಗೆಲ್ಲಾ ಅವಮಾನಿಸಬೇಡಿ
ಕೇವಲ ನಮಗಿಷ್ಟು ಶಾಂತಿ ನೀಡಿ''
ಎಂದು ಕೈಮುಗಿದರು.

ಆಗ ಮಾನ್ಯ ಮುಖ್ಯಮಂತ್ರಿಗಳು
ಒದರಿದರು ತಮ್ಮ ಶಾಂತಿಯ ಮಂತ್ರಗಳು :

''ನಿಮ್ಮವರ ಶಾಂತಿಗಾಗಿಯೇ
ವಿಧಾನಸೌಧದಲ್ಲಿಯೇ
'ಶಾಂತಿ ಮಹಾಯಜ್ಞವೇ ನಡೆಯಲಿದೆ ;
ನೀವಿನ್ನು ಹೊರಡಬಹುದು''
ಎಂದು ಆಜ್ಞೈದರು.

ಇದರಿಂದ ಇನ್ನಷ್ಟು ಕಂಗಾಲಾಗಿ
ದಿಕ್ಕೆಟ್ಟು ದೆಸೆಗೆಟ್ಟು ದುಃಖಿತರಾಗಿ
ವಿಧಾನಸೌಧದಿಂದ ಹೊರಬಂದ ಪಾದ್ರಿಗಳ
ಕಣ್ಣಿಗೆ ಕಂಡವು ಎರಡೇ ದೃಶ್ಯ :
ಒಂದು, ಅಂಬೇಡ್ಕರ್ ಪ್ರತಿಮೆಯ ಬಲತೋಳು
ಇನ್ನೊಂದು, ಕೆಂಬಣ್ಣದ ಕರ್ನಾಟಕ ಹೈಕೋರ್ಟು.

**– ಪ್ರೊ॥** ಮ. ನ. ಜವರಯ್ಯ, ಮೈಸೂರು

ವಿಶ್ವವಿದ್ಯಾನಿಲಯದ ಬಗ್ಗೆ ಗಾಢ ಮೌನದ ರಹಸ್ಯವೇನು ?

* * *

ಮಾನ್ಯರೆನಿಸಿಕೊಳ್ಳಬೇಕಾಗಿದ್ದ ಮುಖ್ಯಮಂತ್ರಿ ಯಡಿಯೂರಪ್ಪನವರು ಕೆಲವು ಅಸಂಸ್ಕೃತ ಮತ್ತು ಅನರ್ಥಕ ಅಕ್ರಮಗಳನ್ನು ರೂಢಿಸಿಕೊಂಡು 'ಯಾವತ್ತಿದ್ದರೂ ನನ್ನದು ಒಂದು ಕೈ ಮೇಲು' ಎಂಬುದನ್ನು ಸಾಧಿಸಲು ಹೊರಟಿದ್ದಾರೆ. ಒಂದು ಸಂವಿಧಾನಬದ್ಧವಾದ ದೇಶದಲ್ಲಿ ಅನುಸರಿಸಬೇಕಾದ ಕನಿಷ್ಠ ಸೌಜನ್ಯದ ಶಿಸ್ತನ್ನೂ ಗಾಳಿಗೆ ತೂರಿದರೆ ನಾವು ಐಕ್ಯತೆಯಿಂದ ಆರೋಗ್ಯಕರ ರಾಜಕೀಯವನ್ನು ಬೆಳೆಸಿಕೊಳ್ಳುವುದು ಹೇಗೆ ? ಇವರು ಶಿಫಾರಸು ಮಾಡಿರುವ 'ಪದ್ಮ ಪ್ರಶಸ್ತಿ' ಪಟ್ಟಿಯನ್ನು ಬಹಿರಂಗಗೊಳಿಸಿರುವ ಅನೈತಿಕತೆಯನ್ನು ಒಂದು ಉದಾಹರಣೆಯಾಗಿ ನೋಡಬಹುದು. ಪ್ರಶಸ್ತಿಗೆ ಅರ್ಹರಾದವರು ಅದಿಲ್ಲದೆಯೂ ಶೋಭಿಸುತ್ತಾರೆಂಬುದು ನಿರ್ವಿವಾದ. ಸಿದ್ದಗಂಗೆಯ ಶ್ರೀ ಶಿವಕುಮಾರ ಸ್ವಾಮಿಗಳಿಗೆ 'ಭಾರತ ರತ್ನ' ಪ್ರಶಸ್ತಿ ನೀಡದಿದ್ದರೂ ಅವರು ರತ್ನವೇ. ಇದೇ ಅರ್ಥ ಬರುವ ಮಾತನ್ನು ಡಾ॥ ಎಂ. ವಿಶ್ವೇಶ್ವರಯ್ಯನವರ ಬಗ್ಗೆ ನೆಹರು ಹೇಳಿದ್ದರು. ಇತರರಿಗೂ ಅದೇ ಅನ್ವಯಿಸುತ್ತದೆ. ಒಂದು ರಾಜ್ಯವು ತಾನು ಮಾಡುವ ಶಿಫಾರಸುಗಳನ್ನು ಪ್ರಕಟಿಸುವುದು ಯೋಗ್ಯವಲ್ಲ. ಇದು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ನಡುವಣ ಬಾಂಧವ್ಯದಲ್ಲಿರುವ ಅಘೋಷಿತ ಸೂತ್ರ. ಯಡಿಯೂರಪ್ಪನವರ ರಾಜಕೀಯವು ಹೀನಮಟ್ಟದ್ದಾಗಲು ಅದರ ಉಲ್ಲಂಘನೆಯೇ ಕಾರಣ. ನಾಳೆ ಕೇಂದ್ರವು ಸಿದ್ದಗಂಗೆ ಸ್ವಾಮಿಯವರಿಗೆ ಅಥವಾ ವಿದ್ವಾನ್ ಆರ್. ಕೆ. ಶ್ರೀಕಂಠನ್ ಅವರಿಗೆ ಅಥವಾ ಇನ್ನಾರಿಗೋ ಆ ಪ್ರಶಸ್ತಿ ಘೋಷಿಸಿಸಿದ್ದರೆ ಯಡಿಯೂರಪ್ಪನವರು ಕೇಂದ್ರವನ್ನು ದೂಷಿಸಿ ರಾಜ್ಯದ ಜನರ ಮೆಚ್ಚುಗೆ ಮತ್ತು ವೋಟು ಪಡೆಯಲು ಹೊರಡುತ್ತಾರೆ, ಪ್ರಶಸ್ತಿ ಪಡೆಯದವರನ್ನು ಪೇಚಿಗೆ ಸಿಲುಕಿಸುತ್ತಾರೆ. ಪ್ರಶಸ್ತಿಗಳು ದೊರೆತರೆ, ಆಗಲೂ ಇದೇ ಪರಿಣಾಮ: ''ನೋಡಿ, ನಾನು ಪ್ರಶಸ್ತಿ ಕೊಡಿಸಿದ್ದೇನೆ ಇಲ್ಲದಿದ್ದರೆ ಇವರಿಗೆಲ್ಲಿ ಪ್ರಶಸ್ತಿ ದೊರೆಯುತ್ತಿತ್ತು ! ರಾಜ್ಯಕ್ಕೆ ನನ್ನ ಕೊಡುಗೆ ಶ್ರೀಮಂತ'' ಎಂದು ಹೇಳುತ್ತಾ ಪ್ರಶಸ್ತಿ ಪಡೆದವರನ್ನು ಸಂಕೋಚದ ಕೂಪಕ್ಕೆ ತಳ್ಳುತ್ತಾರೆ ಮತ್ತು ಜನರ ವೋಟಿಗಾಗಿ ಕೈ ಚಾಚುತ್ತಾರೆ. ಇದು ಅಸಂಸ್ಕೃತ ಮಾತ್ರವಲ್ಲ, ಅಸಹ್ಯ ಕೂಡ. ಇದು ದುಷ್ಟ ಬ್ಲ್ಯಾಕ್‌ಮೇಲ್ ತಂತ್ರ !

* * *

ಭಾರತ ಎಲೆಕ್ಟ್ರಾನಿಕ್ಸ್ ಎಂಬ ಸಾರ್ವಜನಿಕ ಉದ್ಯಮದ ಶ್ರೇಷ್ಠತೆ ಮತ್ತು ಮಹತ್ವ ಎಲ್ಲರಿಗೂ ತಿಳಿದದ್ದೇ. ಅಲ್ಲಿಯ ವ್ಯವಸ್ಥಾಪಕ ಅಧಿಕಾರಿಗಳಿಗೆ ಮಾನಸಿಕ ಒತ್ತಡಗಳಿವೆಯೆಂದು ಯಾರೋ ಮಹಾತ್ಮರು ಸಂಶೋಧನೆ ಮಾಡಿದ್ದಾರೆ. ಇಷ್ಟು ವರ್ಷಗಳ ಕಾಲ ಇಲ್ಲದಿದ್ದ ಒತ್ತಡಗಳು ಈಗೇಕೆ ಬಂದವೋ ತಿಳಿಯದು. ಅಧಿಕಾರಿಗಳಿಗಿರುವಂತೆಯೇ ಸಾಮಾನ್ಯ ಕಾರ್ಮಿಕರಿಗೂ ಒತ್ತಡ ಉಂಟಾಗಬಹುದಲ್ಲವೆ ? ಅದಕ್ಕೇನು ಪರಿಹಾರ ? ಯಾರೋ ಸಹಾಯಕ ವ್ಯವಸ್ಥಾಪಕ ಮಹಾಶಯ ಉತ್ತರವನ್ನು ಕಂಡುಹಿಡಿದ. ಏನದು ? ಅಧಿಕಾರಿಗಳನ್ನೂ ಆಯ್ದ ಕಾರ್ಮಿಕರನ್ನೂ ಜಿಗಣಿಯ ಬಳಿ ಇರುವ ಯೋಗಕೇಂದ್ರಕ್ಕೆ ಕರೆದುಕೊಂಡು ಹೋಗಿ ಮೂರುದಿನಗಳ ಕಾಲ ಅಲ್ಲೇ ಉಳಿದು ಉಜ್ವಲವಾದ ಉಪನ್ಯಾಸಗಳನ್ನು ಕೇಳುವಂತೆ ಮಾಡುವುದು ! ಕೇಂದ್ರದೊಳಕ್ಕೆ ಪ್ರವೇಶಿಸಿದಾಗ ''ಹಿಂದು ಎದ್ದರೆ ದೇಶ ಏಳುತ್ತದೆ'' ಎಂಬರ್ಥ ಬರುವ ಘೋಷಣೆಗಳನ್ನು ಬರೆದು ತೂಗಿಹಾಕಿದ್ದಾರಂತೆ. ಅದನ್ನು ನೋಡಿಯೇ ಅರ್ಧ ಒತ್ತಡ ಕಡಿಮೆಯಾಗಬೇಕು. (ಕೆಲವರಿಗೆ ಒತ್ತಡ ಹೆಚ್ಚಾದರೆ ಅವರನ್ನು ಮೂರು ದಿನಗಳ ಬದಲು ಆರು ದಿನ ಇರುವಂತೆ ಮಾಡಬಹುದೇನೋ !) ಉಪನ್ಯಾಸಗಳು ಯಥಾಪ್ರಕಾರ ಬೆಂಗಳೂರಿನ ಕೆ. ಜಿ. ಸುಬ್ರಾಯ ಶರ್ಮರ ಶೈಲಿಯಲ್ಲಿರುತ್ತವೆಂದು ಭಾಗವಹಿಸಿದ ಒಬ್ಬ ತರುಣ ಮಿತ್ರರ ಅಭಿಪ್ರಾಯ. ಕಾರ್ಮಿಕರ ''ಮಾನಸಿಕ ಒತ್ತಡ''ಗಳಿಗೆ ಇಂತಹ ಪವಾಡಸ್ವರೂಪದ ಪರಿಹಾರವನ್ನು ಆಡಳಿತವರ್ಗವು ಅತ್ಯಂತ ಅವೈಜ್ಞಾನಿಕವಾಗಿ ಮತ್ತು ಕಾರ್ಮಿಕರ ಯಾವ ಸಲಹೆಯನ್ನೂ ಪಡೆಯದೆ ನೀಡಹೊರಟಿರುವಾಗ ಕಾರ್ಮಿಕ ಸಂಘಟನೆಗಳು ಏನು ಮಾಡುತ್ತಿವೆ ? ಇದಕ್ಕೂ ಕಾರ್ಮಿಕ ಸಂಘಟನೆಗಳಿಗೂ ಸಂಬಂಧವಿಲ್ಲವೆಂದು ಅವು ಭಾವಿಸಿವೆಯೆ ?

(ಸಹಿ)

## ಹಾಲುಗಲ್ಲದ ಹುಡುಗಿಯ ಅಲ್ಲಾ ಪ್ರಾರ್ಥನೆ !

ಇದೊಂದು ನವ ನಾಗರಿಕ ನಗರ
ಒಂದು ಕಡೆ ಗಗನಚುಂಬಿ ಮಹಲು
ಅಲ್ಲೇ ಕಣ್ಣಳತೆಯ ದೂರದಲ್ಲೊಂದು ಪುಟ್ಟ ಗುಡಿಸಲು ಸಾಲು
ಆಹಾ... ಸುಂದರ ! ಅದ್ಭುತ ಅದ್ಭುತ !!
ಮಹಲಿನ ಝಗಮಗಿಸುವ ಹುಣ್ಣಿಮೆಯ ಬೆಳಕು
ಗುಡಿಸಲು ತುಂಬಿದ ಅಮವಾಸ್ಯೆಯ ಕತ್ತಲು !

ನಮ್ಮ ಕಥಾ ನಾಯಕಿ ಇನ್ನೂ ಹಾಲುಗಲ್ಲದ ಹುಡುಗಿ
ಮಂಕಾಗಿ ಉರಿಯುವ ಚಿಮಣಿಯ ಬೆಳಕಿನಲ್ಲಿ
ಅವಳ ಭಾವ ಬತ್ತಿದ ಎವೆಗೆ
ನಿದ್ದೆ ತಾಗುವುದಿಲ್ಲ
ಚಂದಿರನಿಗಾಗಿ ರಾತ್ರಿಯೆಲ್ಲಾ ಹಂಬಲಿಸುವಳು
ಮಧುರ ರಾಗ ಕೇಳಲು ಅಷ್ಟ ದಿಕ್ಕುಗಳ –
ಕಡೆಗೂ ಕಿವಿಯನ್ನಿಟ್ಟು ಆಲಿಸುವಳು
ಆದರವಳ ಕಿವಿ ಕೇಳಿಸುವುದಿಲ್ಲ
ಕಣ್ಣು ಕಾಣಿಸುವುದಿಲ್ಲ
ಮಾತು ಮರೆತು ಹೋಗಿವೆ
ರಾತ್ರಿ ಸಂಪಾದನೆಯ ಆ ಪುಟ್ಟ ಮೃದುಳೆ
ಬಾವಲಿಗಳ ಪುಚ್ಚ ಜೋಡಿಸಿ
ಚಂದಿರನಿಗೆಂದು
ನೂರೊಂದನೆಯ ರಾತ್ರಿ ಬುರ್ಖಾ ಹೊಲೆವಳು
ಬೆಳಗಾಗುವ ಮೊದಲೇ
ಮುಖ ಮರೆಸಿ ಎಲ್ಲೋ ತಿರುಗುವ
ಚಂದಿರನ ವಿಳಾಸ ಅವಳ ಬಳಿಯಿಲ್ಲ !

ಕುಕ್ಕರಗಾಲಿನಲ್ಲಿ ಕುಳಿತು ಹುಡುಗಿ ದಿಟ್ಟಿಸುತ್ತಾಳೆ
ಗಿಡದಡಿಯ ಹುಲ್ಲು ಅಸ್ಪಷ್ಟವಾಗಿ ಕಾಣುತ್ತದೆ
ಅರೆಗಣಸ ಬಡಬಡಿಕೆಯಲ್ಲಿ ಕಿತ್ತೆಸೆದಳು ಬುರ್ಖಾ !
ನಾಯಿಗಳು ಕಚ್ಚಿಕೊಂಡು ಹೋದವು...!!

ಹಗಲುಗಳಲ್ಲಿ ಕಾಣದ ಚಂದಿರನ
ನೆನೆಯುತ್ತ ರಾತ್ರಿ ಸುರಿದ ಕಣ್ಣೀರನು
ಹಗಲ ಪಾತ್ರೆಯಲ್ಲಿ ತುಂಬಿ
ಹಾಸಿಗೆಯ ಮೇಲಿನ ನವಿಲಗರಿಯ ತಬ್ಬಿ
ಕುದಿಯುತ್ತ ಕರಗುತ್ತ ಬೆವರುತ್ತ ನವೆಯುತ್ತ
ದಿನದೂಡುತ್ತಾಳೆ ಬುರ್ಖಾದೊಳಗೆ
ಆ ರಾತ್ರಿ ಬೀಸಿದ ಚಂಡಮಾರುತ ಗಾಳಿಗೆ
ವಿಳಾಸ ಸಿಗದ ಹಾಗೆ ಅವಳ ಪುಟ್ಟ ಗುಡಿಸಲು ಮಾಯ
ರಾತ್ರಿಯೆಲ್ಲ ಬಟಾಬಯಲಿನಲ್ಲಿ ಅಲುಗಾಡಿದಳು ಹುಡುಗಿ
ನರಳಿದಳು ನಿಟ್ಟುಸಿರಿಟ್ಟಳು ಅಂಗಲಾಚಿದಳು, ಬೊಗಸೆಯೊಡ್ಡಿ ಬಿಕ್ಕಿದಳು.
ಬೆಳಕು ಹರಿಯುವ ಹೊತ್ತಿಗೆ ದನಿಯಡಗಿ ಕಸುವಡಗಿ
ಮೆಲ್ಲನೆ ಹೆಜ್ಜೆಯೂರಿ
ಯಾವುದೋ ಕರಿಯ ಸಮಾಧಿಯೊಳಗೆ ಅಡಗಿಕೊಂಡಳು
ಸಮಾಧಿಯ ಕದ ಮುಚ್ಚಿಕೊಂಡಿತು
ಸುದ್ದಿ ಹರಡಿ ಸಾಲು ಹಚ್ಚಿ ಹರಿದು ಬಂದ ಜನ ಲೊಚಗುಟ್ಟಿ
ಸಮಾಧಿಗೆ ಹಸಿರು ರುಮಾಲು ಹೊದಿಸಿದರು
ಇಳಿಬಿಟ್ಟರು ಕಾವಿ ಬಟ್ಟೆಯ ನಿಶಾನೆ
ಒಳಗಿದ್ದ ಹುಡುಗಿ ಸಣ್ಣಗೆ ನಕ್ಕಿತು
ನಿಶ್ಶಬ್ದವಾಗಿ ಪ್ರಾರ್ಥಿಸಿತು
''ಯಾ... ಅಲ್ಲಾ... ಸಮಾಧಿ
ಹೇ... ಶಿವನೇ ಸಮಾಧಿ''

– ಬಸೂ, ಗದಗ

ಹಲವೊಮ್ಮೆ ಅವು ಸಫಲವೂ ಆಗಿಬಿಡುತ್ತವೆ. ವಿದ್ಯುನ್ಮಾನ ಮಾಧ್ಯಮವು ವಿಕಾಸಗೊಂಡಂತೆಲ್ಲಾ ಈ ಸಾಮರ್ಥ್ಯವು ಇಮ್ಮಡಿಗೊಳುತ್ತಿದೆಯೆಂದು ತೋರುತ್ತದೆ.

೧೯೭೦ರ ದಶಕದ ಆದಿಭಾಗದಲ್ಲಿ ವೀಡಿಯೋ ಎಂಬ ತಂತ್ರಜ್ಞಾನವು ನಮ್ಮಲ್ಲಿ ಚೆನ್ನಾಗಿ ಬೆಳೆದರೆ ಶಿಕ್ಷಣ ಕ್ಷೇತ್ರಕ್ಕೆ ಅದೊಂದು ವರದಾನವಾಗುತ್ತದೆ, ಶಿಕ್ಷಣದ ಗುಣಮಟ್ಟ ಅದ್ಭುತವಾಗಿ ಸುಧಾರಿಸುತ್ತದೆ, ಇದು ಮಾಧ್ಯಮದ ಕ್ರಾಂತಿ, ಆಫ್ರಿಕಾದ ಕೆಲವು ದೇಶಗಳಲ್ಲಿ ಇದು ಅನನ್ಯವಾದ ಕೊಡುಗೆಯನ್ನು ನೀಡಿದೆ, ಎಂಬಿತ್ಯಾದಿ ಮಾತುಗಳು ಕೇಳಬಂದಿದ್ದುವು. ವೀಡಿಯೋದ ಮಹತ್ವದ ಕೊಡುಗೆಯನ್ನು ನಿರೀಕ್ಷಿಸುತ್ತಿದ್ದಾಗ ಅದರ ಬಳಕೆಯು ನಮ್ಮ ಕೈಯಲ್ಲೇ ಇದೆಯೆಂಬ ಅರಿವು ಸುಮಾರಾಗಿ ಇದ್ದೇ ಇದ್ದಿತು. ಆದರೂ ಅದರಿಂದ ಶೈಕ್ಷಣಿಕ ವಲಯದಲ್ಲಿ ಏನೆಲ್ಲಾ ಬದಲಾವಣೆಗಳಾಗಬಹುದೆಂಬ ಹುಮ್ಮಸ್ಸು ತುಂಬಿದ್ದಿತು. ಇವತ್ತಿನ ಸನ್ನಿವೇಶದಲ್ಲಿ ಇವೆಲ್ಲಾ ಮಾಯಾಲೋಕದ ಭ್ರಮೆಗಳು ಎನಿಸತೊಡಗಿವೆ. ಏಕೆಂದರೆ ವೀಡಿಯೋದಿಂದ ನಮ್ಮ ಶೈಕ್ಷಣಿಕ ಕ್ಷೇತ್ರದಲ್ಲಿ ಅಮೋಘ ಆವಿಷ್ಕಾರಗಳಾಗಿರುವುದು ಕಂಡುಬಂದಿಲ್ಲ. ಅಂದರೆ, ಮಾಧ್ಯಮಗಳ ತಂತ್ರಜ್ಞಾನ ಬೆಳೆಯುತ್ತಿರುತ್ತದೆ; ಅದಕ್ಕನುಗುಣವಾಗಿ ಮಾಧ್ಯಮಗಳ ಪಾತ್ರವು ಯೋಗ್ಯವಾಗಿ ವೃದ್ಧಿ ಹೊಂದುತ್ತಿರುತ್ತದೆಯೆಂದು ಸರಳವಾಗಿ ತೀರ್ಮಾನಿಸಲಾಗುವುದಿಲ್ಲ. ಮೊಳೆಗಳನ್ನು ಜೋಡಿಸಿ ಪುಸ್ತಕಗಳನ್ನು ಅಚ್ಚುಮಾಡುವ ಬದಲು ಈಗ ಡಿಟಿಪಿ ಮಾಡಿ ಪುಸ್ತಕಗಳನ್ನು ಅಚ್ಚುಮಾಡುವ ಪದ್ಧತಿ ಬೆಳೆದಿದೆ; ಹಾಗೆಂದಮಾತ್ರಕ್ಕೆ ಪುಸ್ತಕಗಳ ಮೌಲ್ಯ ಅಥವಾ ಗುಣಮಟ್ಟ ಹೆಚ್ಚಿಯೇ ಇದೆಯೆಂಬ ತೀರ್ಮಾನ ಸಲ್ಲದು. ಮೊದಲಿಗಿಂತಲೂ ಹೆಚ್ಚು ಪುಸ್ತಕಗಳು ಹೊರಬರುತ್ತವೆಂಬುದನ್ನು ಯಾವ ತಕರಾರೂ ಇಲ್ಲದೆ ಒಪ್ಪಬಹುದು. ಮಾಧ್ಯಮಗಳಲ್ಲಿ ಆಗಿರುವುದೂ ಇದೇ. ಅದು ಎಷ್ಟು ಹೆಚ್ಚಿದೆಯೆಂದರೆ, ಜೀವನದಲ್ಲಿ ಅಪ್ರಸ್ತುತವಾದ ಬಹಳಷ್ಟು ವಿಚಾರಗಳು ಅತ್ಯಂತ ಪ್ರಮುಖವಾದ ಸಂಗತಿಗಳು ಎಂಬಂತೆ ಪ್ರತಿಫಲಿಸಲಾಗುತ್ತಿದೆ. ಅವೇ ವಾಸ್ತವವೆಂಬ ಭ್ರಮೆಯನ್ನು ಹುಟ್ಟುಹಾಕಲಾಗಿದೆ ಕೂಡ. ಅವು ಶ್ರೀಮಂತರ ಇರುವಿಕೆಗೆ ಸಂಬಂಧಿಸಿದ್ದಾದರೆ ಮುಗಿಯಿತು. ಅದೇ ಜೀವನದರ್ಶನ, ಅದೇ ವ್ಯಕ್ತಿತ್ವದ ಪರಾಕಾಷ್ಠೆ. ಇಂತಹ ಅಬದ್ಧ ನಂಬಿಕೆಗಳಿಗೆ ಗೌರವವನ್ನು ತಂದುಕೊಟ್ಟಿರುವುದು ಮಾಧ್ಯಮಗಳೆಂದರೆ ತಪ್ಪಾಗುವುದಿಲ್ಲ. ಮಾಧ್ಯಮಗಳ ಒಡೆಯರಿಗೆ ರುಚಿಸದಿರುವುದಕ್ಕೆ ಅಭಿವ್ಯಕ್ತಿ ಅಥವಾ ಪ್ರಾತಿನಿಧ್ಯ ದೊರಕುವುದು ವಿರಳ. ಅದು ಹಿಂದೆಯೂ ಇತ್ತು, ಈಗಲೂ ಇದೆ. ವಿಶೇಷವೇನೆಂದರೆ ಈಗ ರೋಚಕತೆಗೆ ಪ್ರಾಧಾನ್ಯ ಹೆಚ್ಚಾಗಿದೆ. ಇದು ಸ್ಪರ್ಧೆಯ ಕಾಲ. ದಿನದ ಇಪ್ಪತ್ತನಾಲ್ಕು ಗಂಟೆ ಸಹಸ್ರಾರು ಜನರ ಮನಸ್ಸನ್ನು ತಮ್ಮೆಡೆ ಸೆಳೆದುಕೊಳ್ಳಲು ಹವಣಿಸುವಾಗ ತಾರ್ಕಿಕ ಚೌಕಟ್ಟು ಗೌಣವಾಗುತ್ತದೆ. ಮಾಧ್ಯಮಗಳಿಗೆ ವೈಜ್ಞಾನಿಕ ದೃಷ್ಟಿ ಅಗತ್ಯವಿಲ್ಲವೆಂಬ ತೀರ್ಮಾನಕ್ಕೇನಾದರೂ ಬಂದಿದ್ದೇವೆಯೆ ?

ಅದಿರಲಿ, ನಮ್ಮ ನಡುವಿನ ದಿನನಿತ್ಯದ ಸಂಗತಿಗಳನ್ನಾದರೂ ಪೂರ್ತಿಯಾಗಿ ತೆರೆದಿಡುವ ಪದ್ಧತಿಯನ್ನು ಬೆಳೆಸಿದ್ದೇವೆಯೆ ? ಒಂದು ಚಿಕ್ಕ ಉದಾಹರಣೆಯನ್ನು ನೋಡೋಣ: ನಮ್ಮ ದೇಶದಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು ಕಳೆದ ಎರಡು ವರ್ಷಗಳಲ್ಲಿ (ಅಂದರೆ ೨೦೦೫ – ೦೬ ಮತ್ತು ೨೦೦೬-೦೭) ದೊಡ್ಡ ಉದ್ಯಮಿಗಳು ಸಾಲವಾಗಿ ಪಡೆದಿದ್ದ ಎಷ್ಟು ಕೋಟಿ ರೂಪಾಯಿಗಳನ್ನು ಮನ್ನಾ ಮಾಡಿದೆಯೆಂಬ ಮಾಹಿತಿ ಮಾಧ್ಯಮಗಳಲ್ಲಿ ಲಭ್ಯವಿದೆಯೆ ? ಇಪ್ಪತ್ತೈದು ಸಾವಿರ ರೂಪಾಯಿ ಸಾಲ ಪಡೆದು, ಅದನ್ನು ಹಿಂದಿರುಗಿಸಲಾಗದೆ, ಅವಮಾನಿತನಾಗಿ ಆತ್ಮಹತ್ಯೆ ಮಾಡಿಕೊಂಡ ರೈತನ ಬಗ್ಗೆ ಮಾಧ್ಯಮಗಳು ತಿಳಿಸುತ್ತವೆ. ಆದರೆ ದೊಡ್ಡ ಉದ್ಯಮಿಗಳು ಯಾರೂ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ; ಏಕೆಂದರೆ ಅವರಿಗೆ ಅವಮಾನದ ಪ್ರಸಂಗ ಬರುವುದಿಲ್ಲ. ಅವರು ಪಡೆದ ಸಾಲವನ್ನು ಹಿಂದಿರುಗಿಸದಿದ್ದರೆ ಅವರು ಕಿರುಕುಳ ಅನುಭವಿಸುವುದಿಲ್ಲ, ಅವರ ಸಾಲ ಮನ್ನಾ ಮಾಡಲಾಗುತ್ತದೆ. ೨೦೦೫-೦೬ರಲ್ಲಿ ಹೀಗೆ ೮೮೫.೨ಕೋಟಿ ರೂಪಾಯಿಗಳ ಸಾಲ ಮತ್ತು ೨೦೦೬-೦೭ರಲ್ಲಿ ೯೪೨೪ಕೋಟಿ ಸಾಲ ಮನ್ನಾ ಮಾಡಲಾಗಿದೆ. ನಷ್ಟ ಅನುಭವಿಸಿದ್ದು ಬ್ಯಾಂಕುಗಳು; ಅಂದರೆ ನಮ್ಮ ದೇಶದ ನಾಗರಿಕ ಪ್ರಜೆಗಳು. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಒಂದೇ ಈ ಎರಡು ವರ್ಷಗಳಲ್ಲಿ ತಲಾ ೧೮೧೦ ಮತ್ತು ೧೩೯೭ ಕೋಟಿ ರೂಪಾಯಿಗಳನ್ನು ಕಳೆದುಕೊಂಡಿದೆ. ಯಾವ ದೊಡ್ಡ ಉದ್ಯಮಿಯ ಒಟ್ಟು ಸಂಪತ್ತೆಷ್ಟು ಎಂಬುದನ್ನು ಪ್ರಮುಖವಾಗಿ ಬಿತ್ತರಿಸುವ ಮಾಧ್ಯಮಗಳು ಅದೇ ಉದ್ಯಮಿಗಳು ನುಂಗಿಹಾಕಿದ ಸಾರ್ವಜನಿಕ ಹಣವೆಷ್ಟು ಎಂಬುದನ್ನು ದಾಖಲಿಸುವುದಿಲ್ಲ. ಬೇರಾವುದೋ ಮೂಲಗಳಿಂದ ನಾವು ಮಾಹಿತಿ ಸಂಗ್ರಹಿಸಬೇಕಾಗುತ್ತದೆ! ಹತ್ತೊಂಭತ್ತನೆಯ ಶತಮಾನದ ಆದಿಭಾಗದಲ್ಲಿ ಇಂಗ್ಲೆಂಡಿನಲ್ಲಿ ಒಂದು ಹಾಸ್ಯಪದ್ಯ ಪ್ರಸಿದ್ಧವಾಗಿದ್ದಿತಂತೆ:

*ಗೋಮಾಳದಿ ಮೇಯುವ ದನಗಳ ಕದ್ದವಗೆ*
*ಕಾದಿದೆ ಕಾನೂನಿನ ಸೆರೆಮನೆ ಶಿಕ್ಷೆ;*
*ಗೋಮಾಳವನೆ ನುಂಗುವ ಕಳ್ಳ ಖದೀಮರಿಗೆ*
*ಲಭಿಸುವುದಣ್ಣ ಕಾನೂನಿನ ರಕ್ಷೆ*

ಅಲ್ಲಿ ೧೮೦೦ರಿಂದ ೧೮೨೦ರವರೆಗಿನ ಎರಡು ದಶಕಗಳಲ್ಲಿ ಮೂರು ಕೋಟಿ ಎಕರೆ ಭೂಮಿಯನ್ನು ಕೆಲವು ದೊಡ್ಡಜನ ತಮ್ಮದನ್ನಾಗಿಸಿಕೊಂಡರಂತೆ; ಅದನ್ನು ಕಾನೂನುರೀತ್ಯಾ 'ಸಕ್ರಮ'ಗೊಳಿಸಲು ಪಾರ್ಲಿಮೆಂಟ್ ೧೭೦೦ ಶಾಸನಗಳನ್ನು ಅಂಗೀಕರಿಸಿತು. ಭೂಮಿಯು ಸಾರ್ವಜನಿಕ ಸಂಪತ್ತಾಗಿತ್ತು ಮತ್ತು ಪಾರ್ಲಿಮೆಂಟಿನಲ್ಲಿ ಸಾರ್ವಜನಿಕರ ಪ್ರತಿನಿಧಿಗಳಿರಲಿಲ್ಲ. ಅಂದಿನ ಮಾಧ್ಯಮಗಳು ಇದರತ್ತ ಗಮನ ಹರಿಸಲಿಲ್ಲ. ಇನ್ನೂರು ವರ್ಷಗಳ ನಂತರದಲ್ಲಿಯೂ ಅದೇ ಪ್ರವೃತ್ತಿ ನಮ್ಮಲ್ಲಿ ಕಂಡುಬರುತ್ತಿದೆ.

ಸಾರ್ವಜನಿಕರ ಹಿತಕ್ಕೆ ಅಷ್ಟೇನೂ ಪ್ರಸ್ತುತವಲ್ಲದ ವಿಷಯಗಳ ಬಗ್ಗೆ ನಮ್ಮ ಅನೇಕ ಪತ್ರಿಕೆಗಳು ಪುಂಖಾನುಪುಂಖವಾಗಿ ತಿಳುವಳಿಕೆ ನೀಡುತ್ತವೆ. ಅದಕ್ಕೆ ದೇಶ-ವಿದೇಶಗಳ ಪರಿಣತರು ಸಹಾಯಹಸ್ತ ಚಾಚುತ್ತಾರೆ. ಈಚಿನ ದಿನಗಳಲ್ಲಿ ಅದನ್ನು 'ಓಪ್-ಎಡ್ ಪೇಜ್' ಎನ್ನಲಾಗುತ್ತಿದೆ. ನಮ್ಮ ದೇಶದವರು ಬರೆಯುವುದು ಈ ಪುಟಕ್ಕೆ ಹೊರತಾದದ್ದು. ಬಹುಮಟ್ಟಿಗೆ ಎಲ್ಲಾ ಹೊರದೇಶಗಳವು, ವಿಶೇಷವಾಗಿ ಅಮೆರಿಕಾ ಮತ್ತು ಬ್ರಿಟನ್‌ಗಳದ್ದು. ಅಲ್ಲಿಯ ಪತ್ರಕರ್ತರು ಅವರವರ ಮತ್ತು ಬೇರೆಯವರ ದೇಶಗಳನ್ನು ಹೇಗೆ ನೋಡುತ್ತಾರೆ ಮತ್ತು ವಿಶ್ಲೇಷಿಸಿಕೊಳ್ಳುತ್ತಾರೆ ಎಂಬುದಕ್ಕೆ ಈ ಪುಟದಲ್ಲಿ ಬೇಕಾದಷ್ಟು ಸಾಮಗ್ರಿ ಇರುತ್ತದೆ. ನಮ್ಮ ದೇಶದ ಪತ್ರಕರ್ತರು ಅಂಥವೇ ವಿಷಯಗಳ ಬಗ್ಗೆ ಬರೆದದ್ದು ಆ ದೇಶಗಳಲ್ಲಿ ಎಷ್ಟು ಪ್ರಕಟಗೊಳ್ಳುತ್ತವೆ ಎಂಬುದು ಕುತೂಹಲದ ವಿಷಯ. ಬಹುಶಃ ನಮ್ಮ ವಿಶ್ಲೇಷಣೆಗಳು ಆ ದೇಶಗಳ ಪತ್ರಿಕೆಗಳಿಗೆ ಸ್ವೀಕಾರಾರ್ಹವಲ್ಲ. ಹಾಗಿದ್ದರೆ, ವಿಶ್ವದ ಘಟನೆಗಳ ಬಗ್ಗೆ ನಮ್ಮ ಪತ್ರಕರ್ತರು ನೀಡುವ ವಿಶ್ಲೇಷಣೆಗಳು ನಮ್ಮ ದೇಶಕ್ಕೆ ಹೆಚ್ಚು ಪ್ರಸ್ತುತವೆನಿಸುವುದಿಲ್ಲವೆ ? ಇಡೀ ವಿಶ್ವದ ರಾಜಕೀಯ ಮತ್ತು ಸಂಸ್ಕೃತಿಗೆ ನಿರ್ದೇಶನ ಕೇಂದ್ರವು ಅಮೆರಿಕಾ ಎಂಬ ಅಘೋಷಿತ ಭಾವನೆ ಈ ಇಡೀ ಪ್ರಕ್ರಿಯೆಯಲ್ಲಿ ಗಾಢವಾಗಿದೆ. ಇದು ವಸಾಹತುಶಾಹಿ ದುರಾಡಳಿತದ ಅವಧಿಯಲ್ಲಿ ನಮ್ಮ ದೇಶದಲ್ಲಿ ಹರಿಬಿಡಲಾಗಿದ್ದ ಭಾವನೆಗಳ ಮರುಹುಟ್ಟು ಎನ್ನಬಹುದು. ಬ್ರಿಟ್ನಿ ಸ್ಪಿಯರ್ಸ್ ಎಂಬಾಕೆ ಎಂತಹ ಜೀವನ ನಡೆಸುತ್ತಾಳೆಂಬುದು ನಮ್ಮ ದೇಶದಲ್ಲಿ ಪ್ರತಿದಿನದ ವಾರ್ತೆಯಾಗುತ್ತದೆಂಬುದು ನಮಗೆ ಗೌರವ ತರುವಂಥದಲ್ಲ. ತನ್ನ ಮಗುವಿನೊಡನೆ ಯಾವುದೋ ಶೌಚಾಲಯದಲ್ಲಿ ನಗ್ನಳಾಗಿ ಈಕೆ ಒಂದು ಇಡೀ ದಿನ ಕುಳಿತಿದ್ದರೆ ನಮಗೇನಾಗಬೇಕು ? ಅದಕ್ಕೇಕೆ ಅಂತಹ ಪ್ರಧಾನ ಸ್ಥಾನ ? ಇಂತಹ ನೂರಾರು ಬೇರೆ ಉದಾಹರಣೆಗಳನ್ನು ಯಾರು ಬೇಕಾದರೂ ನಮ್ಮ ಮಾಧ್ಯಮಗಳಿಂದ ಹೆಕ್ಕಿ ತೆಗೆಯಬಹುದು.

ಅದಕ್ಕಿಂತಲೂ ಹೆಚ್ಚು ಮಹತ್ವವಿರುವ ವಿಷಯಗಳಿವೆ: ಉದಾಹರಣೆಗೆ, ಜನವರಿ ೨೦೦೮ರಲ್ಲಿ ಕೀನ್ಯಾ ದೇಶದ ವಿದ್ಯಮಾನಗಳು. ಇದನ್ನು ಕುರಿತು ಬಿ.ಬಿ.ಸಿ.ಯು ತನ್ನ ಟಿ.ವಿ. ಸಮಾಚಾರದಲ್ಲಿ ಇಪ್ಪತ್ತು ನಿಮಿಷಗಳ ಕಾಲ ವ್ಯಯಿಸಿತು. ಸಾಮಾನ್ಯವಾಗಿ ಅರ್ಧ ನಿಮಿಷದ ಸಮಯ ನೀಡಲು ಹತ್ತುಬಾರಿ ಯೋಚಿಸುವ ಬಿ.ಬಿ.ಸಿ. ಇದಕ್ಕೆ ಇಪ್ಪತ್ತು ನಿಮಿಷಗಳನ್ನು ಮೀಸಲಿರಿಸಿದ್ದು ಏಕೆ ? ಈ ಪ್ರಶ್ನೆಯನ್ನು ಹಾಕಿಕೊಳ್ಳದಿದ್ದರೆ ಕೀನ್ಯಾದ ವಿದ್ಯಮಾನಗಳಲ್ಲಿ ಬ್ರಿಟನ್ನಿನ ಆಸಕ್ತಿ ಏನೆಂಬುದು ತಿಳಿಯುವುದಿಲ್ಲ. ಹಿಂದೆ ಜಿಂಬಾಬ್ವೆ ಬಗ್ಗೆ ಇಷ್ಟೇ ಆಸಕ್ತಿಯಿಂದ ಬಿ.ಬಿ.ಸಿ. ವರದಿ ಮಾಡುತ್ತಿದ್ದಿತು. ಕೀನ್ಯಾದ ಆಂತರಿಕ ಕ್ಷೋಭೆಯಲ್ಲಿ ಬ್ರಿಟನ್ನಿನ ಒಲವು ಯಾವ ಬಣದ ಪರವಾಗಿದೆ ಮತ್ತು ಏಕೆ ಎಂಬುದು ಪರ್ಯಾಲೋಚಿಸಬೇಕಾದ ಕರ್ತವ್ಯ ನಮ್ಮದು. ಜಾರ್ಜ್ ಬುಷ್ ಹೇಳುವಂತೆ ಅದು ಕೇವಲ 'ಪ್ರಜಾಪ್ರಭುತ್ವ'ದ ಪರವಾದ ನಿಷ್ಠೆಯೆ ? ಇದು ಭೌಗೋಳಿಕ ರಾಜಕೀಯದ ಒಂದು ಭಾಗವಷ್ಟೇ ಅಲ್ಲ; ಆಗ್ಗೆ ಚುನಾಯಿತನಾದ ವ್ಯಕ್ತಿಗಿಂತಲೂ ಓಡಿಂಗ ಹೆಚ್ಚು ಪ್ರೀತಿಪಾತ್ರ ನಾಗುವುದು ಪ್ರಾಸಂಗಿಕವಲ್ಲ. ೧೯೬೦ರ ಉತ್ತರಾರ್ಧದಲ್ಲಿ ನೈಜೀರಿಯಾದಲ್ಲಿ ಓಜುಕ್ವು ಎಂಬ ಸೈನ್ಯಾಧಿಕಾರಿಯು ಬಯಾಫ್ರ ವಿಭಾಗವನ್ನು ದೇಶದಿಂದ ವಿಭಜಿಸ ಹೊರಟಿದ್ದಾಗ ಅಮೆರಿಕಾ ಮತ್ತು ಬ್ರಿಟನ್ ಅದನ್ನು ಇಬೋ ಮತ್ತು ಯೊರುಬಾ ಪಂಗಡಗಳ ನಡುವಣ ಬಿಕ್ಕಟ್ಟು ಎಂದು ವ್ಯಾಖ್ಯಾನಿಸಿತ್ತು. ನಿಜವಾಗಿ ಅಲ್ಲಿದ್ದುದು ತೈಲಸಂಪತ್ತಿನ ಪ್ರಶ್ನೆ. ಅಂದರೆ, ಕೀನ್ಯಾ ವಿದ್ಯಮಾನಗಳನ್ನು ನಮ್ಮ ಮಾಧ್ಯಮಗಳು ನೋಡಬೇಕಾದ್ದು ನಮ್ಮ ಸ್ವಂತದ ಕಣ್ಣುಗಳಿಂದಲೇ ಹೊರತು ಅಮೆರಿಕಾದ ಕಣ್ಣುಗಳಿಂದ ಅಲ್ಲ.

* * *

ಅಂತೆಯೇ ನಮ್ಮ ಪ್ರಸ್ತುತ ವಿದ್ಯಮಾನಗಳ ಪ್ರಶ್ನೆ ಕೂಡ. ವೃತ್ತಪತ್ರಿಕೆಯೊಂದು ವರ್ತಮಾನಕ್ಕಿಂತಲೂ ಹೆಚ್ಚಾಗಿ ಪ್ರಚಾರಕ್ಕೆ ಬದ್ಧವಾಗಿ, ಮುಖಪುಟದಿಂದ ಆರಂಭಿಸಿ ಒಳಗಿನ ಇಡೀ ಪುಟವನ್ನು ಅಪ್ರಾಸಂಗಿಕ ಮತ್ತು ಅಬದ್ಧ ವಿಶ್ಲೇಷಣಾ ಲೇಖನವೊಂದಕ್ಕೆ ಮೀಸಲಾಗಿಡುವ ಮಾಧ್ಯಮವಾಗುವುದಾದರೆ ಅದನ್ನು ಒಂದು ರಾಜಕೀಯ ಪಕ್ಷ ಮತ್ತು ಆಕಾಂಕ್ಷೆಗಳ ಕರಪತ್ರವೆಂದು ಭಾವಿಸಬೇಕೆ ವಿನಾ ವೃತ್ತಪತ್ರಿಕೆ ಎಂದಲ್ಲ. ಮಾಧ್ಯಮದ ಮಿತ್ರರು ಇದನ್ನು ಗಮನಿಸುವುದು ಹಿತಕರ.

# ಕನ್ನಡ ನಾಡು-ನುಡಿ-ಪರಂಪರೆ

## "ಕನ್ನಡವೇ ಸತ್ಯ ಕನ್ನಡವೇ ನಿತ್ಯ" - ಕುವೆಂಪು

ಕರ್ನಾಟಕಕ್ಕೆ ಭಾರತದಲ್ಲಿ ಅಗಾಧವಾದ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಚರಿತ್ರೆ ಇದೆ. ಕರಿಯ ಮಣ್ಣಿನ ನಾಡು ಎಂಬರ್ಥದ ಪದಗಳು ಸೇರಿ ಕರ್ನಾಟಕ ಎಂದಾಗಿರುವುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕರುನಾಡು ಅಥವಾ ಎತ್ತರದ ಭೂಮಿ ಇರುವ ನಾಡೆಂದು ಹೇಳಿದವರೂ ಇದ್ದಾರೆ. ಕಮ್ಮಿತ್ತು ನಾಡು ಅಂದರೆ ಶ್ರೀಗಂಧದ ಕಂಪುಳ್ಳ ನಾಡು ಎಂಬುದೇ ಕರ್ನಾಟಕ ಎಂದೂ ಭಾವಿಸುವವರಿದ್ದಾರೆ. ಮೌರ್ಯರ ಆಳ್ವಿಕೆಯಲ್ಲಿ ಅಶೋಕ ಚಕ್ರವರ್ತಿಯ ಎಂಟು ಶಾಸನಗಳು ಕರ್ನಾಟಕದ ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಕೊಪ್ಪಳದಲ್ಲಿ, ಮೂರು ಬಳ್ಳಾರಿ, ಚಿತ್ರದುರ್ಗ ಮುಂತಾದ ಕಡೆ ದೊರೆತಿವೆ.

ಕದಂಬರು ಕರ್ನಾಟಕವನ್ನಾಳಿದ ಮೊದಲ ಕನ್ನಡಿಗ ದೊರೆಗಳು. ಇವರು ಪಲ್ಲವರನ್ನು ಸೋಲಿಸಿ ಕದಂಬ ವಂಶ ಸ್ಥಾಪಿಸಿದರು. ಸ್ವಾಭಿಮಾನವನ್ನು ಕಾಪಾಡಿ



ಕೊಳ್ಳಲು ಕನ್ನಡಿಗರ ರಾಜ್ಯ ಉದಯವಾಯಿತು. ಮಯೂರವರ್ಮನು ಕನ್ನಡಿಗರ ಕೆಚ್ಚು ಹಾಗೂ ಸ್ವಾಭಿಮಾನಗಳ ಪ್ರತೀಕ. ಈಗಿನ ಬಾಗಲಕೋಟೆ ಜಿಲ್ಲೆಯ ಬಾದಾಮಿಯನ್ನು ರಾಜಧಾನಿ ಮಾಡಿಕೊಂಡು ಆಳಿದ ಚಾಲುಕ್ಯರು ಕನ್ನಡದ ಸಾರ್ವಭೌಮರು. ಈ ರಾಜರಲ್ಲಿ ಇಮ್ಮಡಿ ಪುಲಿಕೇಶಿ ಪ್ರಖ್ಯಾತನು. ಈ ಪುಲಿಕೇಶಿ ಶ್ರೀಹರ್ಷವರ್ಧನನನ್ನು ಸೋಲಿಸಿದನು. ಕಳಿಂಗದ ದೊರೆಗಳು ಶರಣಾದರು. ಇವನ ಕಾಲದಲ್ಲಿ ಆಗಮಿಸಿದ್ದ ಚೀನಾದ ಹುಯೆನ್‌ತ್ಸಾಂಗನು ''ಅವನ ಸೈನಿಕರು ಸೋತರೆ ಎಲ್ಲಿ ತಮ್ಮ ಹೆಂಗಸರು ಬಳೆ, ಕುಂಕುಮ ಕೊಟ್ಟು ಅವಮಾನಿಸುತ್ತಾರೋ ಎಂದು ಹೆದರಿ ಕಾದಾಡುತ್ತಾರೆ. ಕನ್ನಡಿಗರು ಅಸಹಾಯ ಶೂರರು. ಸೋತು ಹಿಂದಕ್ಕೆ ಬರರು'' ಎಂದು ಮಾರ್ಮಿಕವಾಗಿ ವರ್ಣಿಸಿದ್ದಾನೆ.

ರಾಷ್ಟ್ರಕೂಟರ ದೊರೆಗಳು ಈಗಿನ ಗುಲಬರ್ಗಾದ ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಇವರ ಸೈನ್ಯವು ಸಿಂಹಳದಿಂದ ಹಿಮಾಲಯದವರೆಗೆ, ಗುಜರಾತಿನಿಂದ ಬಂಗಾಳದ ವರೆಗೆ ದಾಳಿ ನಡೆಸಿ ಅಖಂಡ ಭಾರತವನ್ನು ಗೆದ್ದಿತು. ಈ ಕಾಲದ ಕವಿರಾಜಮಾರ್ಗ ಕನ್ನಡ ಕೃತಿಗಳಲ್ಲಿ ಮೊದಲನೆಯದು. ಕನ್ನಡಿಗರು ಶೂರರು, ವಿವೇಕಿಗಳು ಎಂದು ವರ್ಣಿತವಾಗಿದೆ. ಕನ್ನಡನಾಡು ಕಾವೇರಿಯಿಂದ ಗೋದಾವರಿಯವರೆಗೂ ಹಬ್ಬಿತ್ತೆಂದೂ ಹೇಳಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಬಸವಣ್ಣ, ಅಲ್ಲಮ, ಮಾದಾರ ಚನ್ನಯ್ಯ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದವರು ಸಾಮಾಜಿಕ ಕ್ರಾಂತಿ ಮಾಡಿದರು. ಅವರ ವಚನಸಾಹಿತ್ಯ ಕನ್ನಡ ಭಾಷೆಗೆ ಅಪಾರ ಹೆಮ್ಮೆ ತಂದಿದೆ. ಹೀಗೆ ಅನೇಕ ಅರಸರು ನಾಡನ್ನು ಕಟ್ಟಿ ನುಡಿ ಬೆಳೆಸಿ ತಮ್ಮ ಕನ್ನಡತನವನ್ನು ಮೆರೆದರು.

ಬಾದಾಮಿ, ಐಹೊಳೆ, ಪಟ್ಟದಕಲ್ಲು, ದಕ್ಷಿಣ ಭಾರತದ ಶಿಲ್ಪಕಲೆಯ ತವರಾಗಿವೆ. ಬೇಲೂರು, ಹಳೇಬಿಡುಗಳಲ್ಲಿನ ಶಿಲ್ಪ ಕಲೆ ಅದ್ಭುತವಾದ್ದು. ಹಂಪೆಯ ಕಲಾಸಾಮ್ರಾಜ್ಯ, ಶ್ರವಣಬೆಳಗೊಳದ ಗೊಮ್ಮಟನ ವಿಗ್ರಹ ವಿಶ್ವವಿಖ್ಯಾತಿ ಪಡೆದಿವೆ. ಮಲೆನಾಡಿನ ಸುಂದರ ಊರು ಬನವಾಸಿಯಲ್ಲಿ ಮಧುಕೇಶ್ವರ ದೇವಾಲಯವಿದೆ. ಕರುನಾಡು ಹೀಗೆ ಕಲೆಯ ಸಾಮ್ರಾಜ್ಯವೇ ಸೈ. ಕವಿ ವಿ. ಸೀ. ಹೇಳಿದಂತೆ :

*ಬಾನಿನಗಲಕೆ ನೆಲಸಿ ದೆಸೆ ದೆಸೆಗೊ ಕಟ್ಟಿ*
*ನಡೆನೋಟಕೆರಚಿರುವ ಕಸ್ತೂರಿ ನಾಡು*
*ಅಗೆದಲ್ಲಿ ಹೊಳೆಹೊನ್ನು, ನುಡಿಯ ದಾಂಗುಡಿಯ ಹಾಡು*
*ಅಡಿತಳವ ಅರಿಮೆಟ್ಟು, ಗಂಡು ಮೆಟ್ಟು*
*ವೀರಸಿರಿ ಕಲೆಬೀಡು ಎನ್ನ ತಾಯ್ನಾಡು.*

ಮೈಸೂರ ಮಹಾರಾಜರು ತಮ್ಮ ಆಳ್ವಿಕೆಯಲ್ಲಿ ಸಂಸ್ಕೃತಿ, ಕಲೆ, ಸಾಹಿತ್ಯಕ್ಕೆ ವಿಶೇಷ ಕೊಡುಗೆ ನೀಡಿದರು. ಆ ಕಾಲದ ಕನ್ನಡ ಚಟುವಟಿಕೆಗಳ ನೇತಾರರಾಗಿದ್ದ ಬಿ. ಎಂ. ಶ್ರೀ., ಆಲೂರ ವೆಂಕಟರಾವ್ ಮುಂತಾದವರು ನಾಡ ಏಕೀಕರಣಕ್ಕೆ ಪ್ರಯತ್ನಿಸಿದರು. ಬ್ರಿಟಿಷರ ಆಡಳಿತ ಕಾಲದಲ್ಲಿ ಕನ್ನಡ ಭಾಷಾ ಪ್ರದೇಶಗಳು ಹರಿದು ಹಂಚಿ ಹೋಗಿದ್ದವು. ಕೊಪ್ಪಳದ ಬಂಡಾಯ, ಚನ್ನಮ್ಮ ರಾಣಿಯ ಹೋರಾಟ, ಕರ್ನಾಟಕದಲ್ಲಿ ಜರುಗಿದ ಬ್ರಿಟಿಷ್ ವಿರೋಧಿ ಪ್ರತಿಭಟನೆಗಳು. ಸುರಪುರದ ವೆಂಕಟಪ್ಪ ನಾಯಕ, ಮುಂಡರಗಿ ಭೀಮರಾಯ ಇನ್ನೂ ಮುಂತಾದವರು ಬ್ರಿಟಿಷರ ವಿರುದ್ಧ ಪ್ರತಿಭಟನೆ ನಡೆಸಿದರು. ಕಾಂಗ್ರೆಸ್ ಸ್ಥಾಪನೆ ನಂತರ ಕಾರ್ನಾಡ ಸದಾಶಿವರಾಯರು, ಅಣ್ಣ ಗುರೂಜಿ, ಚೆನ್ನಪ್ಪ ವಾಲಿ, ಹಳೇ ಮೈಸೂರಿನ ಕಡೆಗೋ ಎಸ್. ನಿಜಲಿಂಗಪ್ಪ, ಕಡಿದಾಳ್ ಮಂಜಪ್ಪ ಇವರುಗಳು ಉಲ್ಲೇಖನೀಯರು. ಕುಲ ಪುರೋಹಿತ ಆಲೂರ ವೆಂಕಟರಾಯ, ಸರ್ ಸಿದ್ಧಪ್ಪ ಕಂಬಳಿ, ಹಳ್ಳಿಕೇರಿ ಗುದ್ಲೆಪ್ಪ, ಅಳಬಂಡಿ ಶಿವಮೂರ್ತಿ ಸ್ವಾಮಿ, ಶಿರೂರ ವೀರಭದ್ರಪ್ಪ, ಎ. ಜೆ. ಮುಧೋಳ್, ಬಿ. ವಿ. ಕಕ್ಕಿಲ್ಲಾಯ ಇವರೆಲ್ಲ ಏಕೀಕರಣಕ್ಕೆ ಒತ್ತಾಸೆ ನೀಡಿದರು. ಸ್ವಾತಂತ್ರ್ಯಪೂರ್ವದಲ್ಲಿ ಹರಿದು ಹಂಚಿ ಹೋಗಿದ್ದ ಕರ್ನಾಟಕ ೧೯೪೭ರಲ್ಲಿ ಐದು ಆಡಳಿತಗಳಿಗೆ ಒಳಪಟ್ಟಿತು. ದೇಶದ ಸ್ವಾತಂತ್ರ್ಯಕ್ಕಾಗಿ ಚಳುವಳಿ ಹೂಡಿದ ಚೇತನಗಳು ಕರ್ನಾಟಕದ ಏಕೀಕರಣಕ್ಕೆ ಪಣತೊಟ್ಟರು. ಅವರ ಹೋರಾಟದ ಫಲವಾಗಿ ಕನ್ನಡ ಮಾತನಾಡುವ ಜನರು ಮೈಸೂರು ರಾಜ್ಯದಲ್ಲಿ ನೆಲೆಸಿದರು. ನಂತರದಲ್ಲಿ ಕರ್ನಾಟಕವೆಂದೂ ನಾಮಕರಣವಾಯಿತು.

ನಾವು ಸಮರ್ಥರಾದರೆ ನಾಡು ಪ್ರಗತಿಯತ್ತ ಸಾಗುತ್ತದೆ, ನುಡಿ ಗಟ್ಟಿಯಾಗುತ್ತದೆ. ಅನ್ಯಭಾಷಿಕರ ದಮನಕ್ಕೆ ಕನ್ನಡಿಗರು ಸಿಲುಕಿದಂತೆ ಮತ್ತಾರೂ ಸಿಲುಕಿಲ್ಲ. ಗಡಿ ವಿವಾದಕ್ಕಾಗಿ ಹುಟ್ಟಿದ ಮಹಾಜನ ವರದಿ, ಗೋಕಾಕ ವರದಿ ಜಾರಿಗಾಗಿ ಡಾ|| ರಾಜಕುಮಾರ್ ಅವರ ನೇತೃತ್ವದಲ್ಲಿ ಕರ್ನಾಟಕದಲ್ಲಿ ಪ್ರವಾಸ ಮತ್ತು ಸರೋಜಿನಿ ಮಹಿಷಿ ವರದಿ ಜಾರಿಗೆ ತರಲು ಒತ್ತಾಯಿಸುವಂತಹ ನಾಡು ನುಡಿಯ ಜನಪರ ಕಾರ್ಯಕ್ರಮಗಳು ನಾಡಿನುದ್ದಕ್ಕೂ ನಡೆದಿವೆ. ಇವುಗಳನ್ನು ಸಾಧಿಸಲು ಅನೇಕ ಸಂಘಟನೆಗಳು ತಮ್ಮದೇ ಆದ ಸೇವೆ ನೀಡುತ್ತಿವೆ. ಕನ್ನಡಿಗರು ನಿಜಾರ್ಥದಲ್ಲಿ ಸ್ವಾಭಿಮಾನಿಗಳಾಗಬೇಕಾಗಿದೆ. ನಾಡುನುಡಿಗಳ ಬಗೆಗಿನ ಹೆಮ್ಮೆಯನ್ನು ಬೆಳೆಸಿಕೊಂಡು ಉಳಿಸಿಕೊಂಡು ಬದುಕಿದರೆ ಎಲ್ಲೆಲ್ಲೂ ಕನ್ನಡದ ಕಂಪನ್ನು ಹರಡಬಹುದು.

ನೀ ಮೆಟ್ಟುವ ನೆಲ - ಅದೇ ಕರ್ನಾಟಕ
ನೀನೇರುವ ಮಲೆ - ಸಹ್ಯಾದ್ರಿ
ನೀ ಮುಟ್ಟುವ ಮರ - ಶ್ರೀಗಂಧದ ಮರ
ನೀ ಕುಡಿಯುವ ನೀರ್- ಕಾವೇರಿ
ಕನ್ನಡವೇ ಸತ್ಯ ಕನ್ನಡವೇ ನಿತ್ಯ

– ಹೀಗೆಂದು ರಾಷ್ಟ್ರಕವಿ ಕುವೆಂಪು ಅವರು ನಮ್ಮ ನಾಡು, ನುಡಿ, ಪ್ರಕೃತಿ ಸಂಪತ್ತನ್ನು ಸುಂದರವಾಗಿ ವರ್ಣಿಸಿ ನಮ್ಮಲ್ಲಿ ಸ್ವಾಭಿಮಾನದ ಕಿಚ್ಚನ್ನು ಮೂಡಿಸಿದ್ದಾವೆ. ಸುವರ್ಣ ಕರ್ನಾಟಕದ ಸಂದರ್ಭದಲ್ಲಿ ನಾಡು- ನುಡಿಗಾಗಿ ಅರ್ಪಿಸಿಕೊಂಡ ಕವಿಪುಂಗವರನ್ನು, ಹೋರಾಟಗಾರರನ್ನು, ನಮ್ಮ ಕಲೆ ಸಂಸ್ಕೃತಿಗಳನ್ನು ನೆನೆಯೋಣ. ಈ ನೆಲಕ್ಕಾಗಿ ಸರ್ವರೂ ದುಡಿಯೋಣ. ಅಂದಾಗ ಸಮೃದ್ಧ ಕರ್ನಾಟಕ ನಿರ್ಮಾಣದ ಕನಸು ಸಾಕಾರಗೊಳ್ಳುವುದರಲ್ಲಿ ಸಂದೇಹವಿಲ್ಲ.

**ವೀರಣ್ಣ ವಾಲಿ**
ಶಿಕ್ಷಕರು, ಸರಕಾರಿ ಪ್ರೌಢಶಾಲೆ
ಹೊಸಬಂಡಿ ಹರ್ಲಾಪೂರ (ಕೊಪ್ಪಳ ತಾಲ್ಲೂಕು, ಜಿಲ್ಲೆ)

ಕನ್ನಡ ನಾಡಿನ ಸಾಮಾಜಿಕ ಸಾಂಸ್ಕೃತಿಕ ಇತಿಹಾಸದಲ್ಲಿ ಹೈದ್ರಾಬಾದ್ ಕರ್ನಾಟಕದ ಕೊಡುಗೆ ಅಪಾರ. ಅದರಲ್ಲೂ ಮಧ್ಯಕಾಲೀನ ಸಂದರ್ಭವು ವಿಶ್ವಕ್ಕೆ ಹಲವಾರು ಮಹತ್ವದ ಸಾಧನೆಗಳನ್ನು ಕಟ್ಟಿಕೊಟ್ಟಿದೆ. ಮೊದಲನೆಯದು ವಚನ ಚಳವಳಿ, ಎರಡನೆಯದು ಕೀರ್ತನ ಚಳವಳಿ. ಈ ಎರಡು ಚಳವಳಿಗಳು ಸಮಾಜದ ಅತ್ಯಂತ ಕೊನೆಯ ಸ್ತರದಲ್ಲಿದ್ದ ವ್ಯಕ್ತಿ-ಶಕ್ತಿಯೊಂದಿಗೆ ಅಂದಿನ ಕಾಲದ ಸಮಾಜದ ಕಟ್ಟಕಡೆಯ ಜನರನ್ನಲ್ಲದೆ ಅಬಲೆಯರನ್ನು ಸಬಲ ಶಕ್ತಿಯಾಗಿಸುವುದಕ್ಕೆ ಪ್ರಯತ್ನ ಮಾಡಿದವು. ಕನ್ನಡ ಸಾಹಿತ್ಯ, ಸಂಸ್ಕೃತಿ, ಚರಿತ್ರೆಗೆ ಸಂಬಂಧಿಸಿದಂತೆ ಪ್ರಥಮ ಕಾಣಿಕೆ ನೀಡಿದ ನೆಲ ಇದು ಎನ್ನುವುದು ಹೆಮ್ಮೆಯ ವಿಷಯ. ಅನೇಕ ಕವಿಗಳು, ತತ್ವಪದಕಾರರು ಈ ನೆಲದಿಂದಲೇ ಬಂದವರಾಗಿದ್ದಾರೆ. ಅದರಂತೆ ಆಧುನಿಕ ಕಾಲದ ದಲಿತ ಚಳವಳಿಯನ್ನು ಹುಟ್ಟುಹಾಕಿದ ಪ್ರದೇಶವು ಇದೇ ಆಗಿದೆ.

ಅಂಬೇಡ್ಕರೋತ್ತರ ದಲಿತರ ಚೇತನವಾಗಿ ಬೆಳೆದ



ನಿಜಾಮನನ್ನು ಪ್ರೇರೇಪಿಸಿದರು. ನಿಜಾಮ ಸಂಸ್ಥಾನವು ಬಿ. ಶ್ಯಾಮಸುಂದರ್ ಮತ್ತು ಅವರ ಜೊತೆಗಾರರ ಹೋರಾಟ ಚಿಂತನೆಗಳನ್ನು ಗಮನಿಸಿ ದಲಿತರಿಗೆ ಶಿಕ್ಷಣ ಕೊಡಿಸಲು ಒಂದು ಕೋಟಿ ರೂಪಾಯಿಯ ನಿಧಿಯನ್ನು ಸ್ಥಾಪಿಸಿತು. ಅದಕ್ಕೊಂದು ಟ್ರಸ್ಟ್ ಮಾಡಿ ಅದರ ಅಧ್ಯಕ್ಷರನ್ನಾಗಿ ಬಿ. ಶ್ಯಾಮಸುಂದರ್ ಅವರನ್ನು ನೇಮಕಮಾಡಿಕೊಂಡರು. ೧೯೪೨ರಲ್ಲಿ ಸ್ಥಾಪಿಸಿದ ನಿಧಿಯಿಂದ ನಿಜಾಮ ಸಂಸ್ಥಾನದ ವ್ಯಾಪ್ತಿಯಲ್ಲಿ ಸುಮಾರು ೨೯ ವಸತಿ ಶಾಲೆಗಳನ್ನು ಪ್ರಾರಂಭಿಸಿದರು. ಔರಂಗಾಬಾದಿನಲ್ಲಿ ಡಾ|| ಅಂಬೇಡ್ಕರ್ ಅವರು ಸ್ಥಾಪಿಸಿದ ಜನತಾ ಶಿಕ್ಷಣ ಸಂಸ್ಥೆಗೆ ಸಮಿತಿಯು ೧೨ ಲಕ್ಷ ರೂಪಾಯಿಗಳನ್ನು ಧನಸಹಾಯ ರೂಪದಲ್ಲಿ ನೀಡಿತು. ಸಮಿತಿಯ ಸೂಚನೆಯ ಮೇರೆಗೆ ಸಂಸ್ಥಾನದಲ್ಲಿ ಅಸ್ಪೃಶ್ಯ ಮಕ್ಕಳಿಗೆ ವಸತಿಶಾಲೆಗಳನ್ನು ಸಹ ಪ್ರಾರಂಭಿಸಿದರು. ಪ್ರತಿ ವರ್ಷ ೪, ೬ ಹಾಗೂ ೮ ರೂಪಾಯಿಗಳಂತೆ ಆಯಾ ತರಗತಿಗಳಿಗೆ ವಿದ್ಯಾರ್ಥಿ ವೇತನ ನೀಡಿದರು. ನಿಜಾಮ

# ದಲಿತ ಚೇತನ ಬಿ. ಶ್ಯಾಮಸುಂದರ್

ಬಿ. ಶ್ಯಾಮಸುಂದರ್ ಅವರ ನೇತೃತ್ವದ 'ಭೀಮಸೇನೆ' ರಚನೆಗೊಂಡು ದಲಿತಪರವಾದ ಹೋರಾಟ ಪ್ರಾರಂಭವಾದದ್ದು ಒಂದು ಐತಿಹಾಸಿಕ ಸಂಗತಿಯಾಗಿದೆ. ಬಿ. ಶ್ಯಾಮಸುಂದರ್ ಅವರು ಮಹಾರಾಷ್ಟ್ರದ ಔರಂಗಾಬಾದಿನವರು. ಕ್ರಿ. ಶ. ೧೯೦೮ನೆಯ ಡಿಸೆಂಬರ್ ೨೧ರಂದು ಹುಟ್ಟಿದರು. ತಂದೆ ಬದುಲಾ ಮಾಣಿಕ್ಯಂ, ತಾಯಿ ಸುಧಾಬಾಯಿ. ಅಸ್ಪೃಶ್ಯರೆನಿಸಿದ 'ಮಾಲಾ' ಜಾತಿಗೆ ಸೇರಿದವರಾಗಿದ್ದರು. ಬಿ. ಶ್ಯಾಮಸುಂದರ್ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಔರಂಗಾಬಾದಿನ ಮುಸ್ಲಿಂ ಹಾಗೂ ಕ್ರೈಸ್ತ ಮಿಷನರಿ ಶಾಲೆಗಳಲ್ಲಿ ಪೂರ್ಣಗೊಳಿಸಿದರು. ಹಿಂದೂ ಶಿಕ್ಷಣ ಸಂಸ್ಥೆಗಳಾವುವೂ ಅಸ್ಪೃಶ್ಯರಾದ ಬಿ. ಶ್ಯಾಮಸುಂದರ್ ಅವರನ್ನು ತಮ್ಮ ಶಾಲೆಗೆ ಸೇರಿಸಿಕೊಳ್ಳಲಿಲ್ಲ. ಅವರ ತಂದೆ ನಿಜಾಮ ಸಂಸ್ಥಾನದ ರೇಲ್ವೆ ಇಲಾಖೆಯಲ್ಲಿ ಸೇವೆಯಲ್ಲಿದ್ದುದರಿಂದ ಔರಂಗಾಬಾದಿನಿಂದ ಹೈದರಾಬಾದಿಗೆ ವರ್ಗಾವಣೆಗೊಂಡರು. ತಂದೆಯೊಂದಿಗೆ ಹೈದರಾಬಾದಿಗೆ ಬಂದು ತಮ್ಮ ಉನ್ನತ ವ್ಯಾಸಂಗವನ್ನು ಮುಂದುವರೆಸಿದರು.

ಬಿ. ಶ್ಯಾಮಸುಂದರ್ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು. ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರ ವಿಷಯದಲ್ಲಿ ಬಿ.ಎ. ಪದವಿಯನ್ನು ರ್‍ಯಾಂಕ್ ಸಮೇತ ಪಾಸಾದರು (೧೯೨೮). ಖುಸ್ರು-ಎ-ದಕ್ಕನ್ ಎಂಬ ಬಿರುದು ಮತ್ತು ಬಂಗಾರದ ಪದಕವನ್ನು ಪಡೆದರು. ತರುವಾಯ ಅವರು ಕಾನೂನು ಪದವಿಯನ್ನು ಸಹ ಪಡೆದರು.

ಬಿ. ಶ್ಯಾಮಸುಂದರ್ ತಮ್ಮ ಪ್ರೌಢಾವಸ್ಥೆಯಲ್ಲಿಯೇ ನಾಯಕತ್ವದ ಎಲ್ಲ ಲಕ್ಷಣಗಳನ್ನು ಹೊಂದಿದ್ದರು. ೧೯೩೩ರಲ್ಲಿ ಸರೋಜಿನಿ ನಾಯ್ಡು ಅವರ ಅಧ್ಯಕ್ಷತೆಯಲ್ಲಿ ಜರುಗಿದ ಪದವೀಧರರ ಸಮಾವೇಶದ ಕಾರ್ಯದರ್ಶಿಗಳಾಗಿ ಶ್ಯಾಮಸುಂದರ್ ಕೆಲಸ ಮಾಡಿದರು. ಇದೇ ವೇಳೆಗೆ ಅಂದರೆ ೧೯೪೪ರಲ್ಲಿ ಅವರು ಉಸ್ಮಾನಿಯಾ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ ನೇಮಕಗೊಂಡು ಬಹುಕಾಲ ಸೇವೆ ಸಲ್ಲಿಸಿದ್ದಾರೆ. ೧೯೪೬ರಲ್ಲಿ ಒಂದಷ್ಟು ಕಾಲ ನಿಜಾಮ್ ಸ್ಟೇಟ್ ರೇಲ್ವೆ ನೌಕರರ ಸಂಘದ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಹೈದರಾಬಾದ್ ನಿಜಾಮನು ಸ್ಥಾಪಿಸಿದ ಶಿಕ್ಷಣ ಕ್ಷೇತ್ರದ ಶಾಸನಾಧಿಕಾರಿಗಳ ಸಮಿತಿಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಆ ಸಂದರ್ಭದಲ್ಲಿ ಸಂಸ್ಥಾನದ ಎಲ್ಲ ಜಿಲ್ಲೆಗಳಲ್ಲಿ ಯುವಕರ ಸಮಾವೇಶಗಳನ್ನು ನಡೆಸಿ ದಾಸ್ಯದ ಶೃಂಖಲೆಗಳನ್ನು ಕಿತ್ತೊಗೆಯಲು ಪ್ರೇರೇಪಿಸಿದರು.

ಈ ಎಲ್ಲ ಕಾರಣಗಳಿಂದಾಗಿ ಸಾಮಾಜಿಕ ಸೇವೆಗೆ ತಮ್ಮನ್ನು ತಾವು ತೊಡಗಿಸಿಕೊಂಡರು. ತಮ್ಮ ಜನರಿಗಾಗುತ್ತಿರುವ ಅನ್ಯಾಯ ಅಸಮಾನತೆಯ ವಿರುದ್ಧ ವೈಚಾರಿಕ ಹಾಗೂ ವೈಜ್ಞಾನಿಕವಾದ ನೆಲೆಯಲ್ಲಿ ಹೋರಾಟಕ್ಕೆ ಮುಂದಾದರು. ದೀನ-ದಲಿತರ, ಹಿಂದುಳಿದವರ, ಅಲ್ಪಸಂಖ್ಯಾತರ ಏಳ್ಗೆಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು. ಅವರ ಈ ಹೋರಾಟಕ್ಕೆ ಡಾ|| ಅಂಬೇಡ್ಕರ್ ಅವರ ವಿಚಾರಧಾರೆಗಳೇ ಮುಖ್ಯ ಪ್ರೇರಣಾ ಶಕ್ತಿಯಾಗಿದ್ದವು. ಸರಕಾರಿ ನೌಕರಿ ಎಂಬ ಜೀತ ತೊರೆದು, ತನ್ನ ಜನಾಂಗದ ಜೀತ ವಿಮೋಚನೆಗಾಗಿ ಬ್ರಹ್ಮಚಾರಿಯಾಗಿ ಉಳಿದು ಶ್ರಮಿಸಿದರು. ಅಂದು ಶಿಕ್ಷಣವು ಉಳ್ಳವರ ಸೊತ್ತಾಗಿತ್ತು. ವಿಶೇಷವಾಗಿ, ಮಡಿವಂತರ ಹಿಡಿತದಲ್ಲಿತ್ತು. ಅದನ್ನು ಮನಗಂಡು ಸುಶಿಕ್ಷಿತರಾದ ಶ್ಯಾಮಸುಂದರ್ ಸಂಸ್ಥಾನದಲ್ಲಿಯ ೪೦ ಲಕ್ಷಕ್ಕೂ ಹೆಚ್ಚಿರುವ ಅಸ್ಪೃಶ್ಯರನ್ನು ವಿಮೋಚನೆಗೊಳಿಸಲು ಅನೇಕ ಮೌಲಿಕವಾದ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಸಂಸ್ಥಾನದ ದೊರೆ

ಡಾ|| ಎಚ್. ಟಿ. ಪೋತೆ

ಸಂಸ್ಥಾನವು ಇಂತಹ ಒಂದಾದರೂ ಜನಪರ ಕಾರ್ಯಕ್ರಮಗಳನ್ನು ರೂಪಿಸಬೇಕಾದರೆ ಬಿ. ಶ್ಯಾಮಸುಂದರ್ ಹಾಗೂ ಅವರ ಒಡನಾಡಿಗಳೇ ಇದಕ್ಕೆಲ್ಲ ಮುಖ್ಯ ಕಾರಣ.

**ವಿನೂತನ ಸಮ್ಮೇಳನ**

ಇತ್ತೀಚಿನವರೆಗೂ ಭಾರತದಲ್ಲಿ ಅಸ್ಪೃಶ್ಯರು ಹೊಸ ಬಟ್ಟೆ ಧರಿಸುವಂತಿರಲಿಲ್ಲ. ಮೀಸೆ ಬೆಳೆಸುವಂತಿರಲಿಲ್ಲ, ಕಾಲಲ್ಲಿ ಚಪ್ಪಲಿ (ಚಮಡಾ) ಕೂಡ ಧರಿಸುವಂತಿರಲಿಲ್ಲ, ಕೈಯಲ್ಲಿ ಬಡಿಗೆ ಹಿಡಿಯಬಾರದು ಎಂಬ ನಿಯಮವನ್ನು ಮನುಸ್ಮೃತಿ ಆಧಾರಿತ ಹಿಂದೂ ಧರ್ಮ ಪಾಲಿಸಿಕೊಂಡು ಬಂದಿತ್ತು. ಈ ಕಾರಣಗಳಿಂದಾಗಿ ಅಸ್ಪೃಶ್ಯರು ತೀರಾ ಅವಮಾನಕ್ಕೆ ತುತ್ತಾಗಿದ್ದರು. ಇಂತಹ ಅನಾಗರಿಕ ಪದ್ಧತಿಗಳನ್ನು ವಿರೋಧಿಸುತ್ತಿದ್ದ ಬಿ. ಶ್ಯಾಮಸುಂದರ್ ೧೯೪೬ರಲ್ಲಿ ಮಹಾರಾಷ್ಟ್ರದ ನಾಂಧೇಡದಲ್ಲಿ ಸಮ್ಮೇಳನವೊಂದನ್ನು ನಡೆಸಿದರು. ಅವರೇ ಈ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಮ್ಮೇಳನದಲ್ಲಿ ಪಾಲ್ಗೊಳ್ಳುವ ದಲಿತ ಯುವಕರು ಮುಖ್ಯವಾಗಿ ಮೂರು ನಿಯಮಗಳನ್ನು ಪಾಲಿಸಬೇಕಾಗಿತ್ತು. ಅವೆಂದರೆ, ಮುಖದ ಮೇಲೆ ಮೀಸೆ ಬೆಳೆಸಿರಬೇಕು. ಕಾಲಲ್ಲಿ ಚಪ್ಪಲಿ (ಚಮಡಾ) ಧರಿಸಿರಬೇಕು. ಹೊಸ ಬಟ್ಟೆ ಉಟ್ಟಿರಬೇಕು. ಹೀಗೆ ದಲಿತರನ್ನು ಬದಲಾವಣೆಯ ಕಾರ್ಯದಲ್ಲಿ ಶ್ಯಾಮಸುಂದರ್ ತೊಡಗಿಸಿದ ರೀತಿ ವಿನೂತನವಾಗಿತ್ತು.

**ಅಸ್ಪೃಶ್ಯರಿಗೆ ಭೂ ಒಡೆತನ**

ನಿಜಾಮ ಸಂಸ್ಥಾನದಲ್ಲಿದ್ದ ಅಸ್ಪೃಶ್ಯರ ಉದ್ಧಾರವಾಗಬೇಕಾದರೆ, ಶಿಕ್ಷಣದಷ್ಟೇ ಭೂ ಒಡೆತನವೂ ಮಹತ್ವದ್ದು ಎಂದು ಭಾವಿಸಿದ ಅವರು ಭೂಮಿ ಹಂಚಿಕೆಯಾಗಬೇಕೆಂದು ಹೋರಾಡಿದರು. ಪ್ರಬಲ ಜಾತಿಯ ಭೂ ಒಡೆಯರ ಜೀತ ಪದ್ಧತಿಯನ್ನು ತೊರೆದು ಸ್ವತಂತ್ರ ಜೀವನ ನಡೆಸುವಂತಾಗಲು ವಿಶೇಷ [illegible] [illegible] ತರುವಲ್ಲಿ ಶ್ಯಾಮಸುಂದರ್ ಸಫಲರಾದರು. ಸರಕಾರದ

ಯಾವುದೇ ಅನಾಮತ್ತಾದ ಜಮೀನಿದ್ದರೂ ಅದನ್ನು ಭೂಹೀನರಿಗೆ ಹಂಚುವ ಕಾರ್ಯಕ್ರಮವನ್ನು ರೂಪಿಸಿ, ನಿಜಾಮ ಸರಕಾರದಿಂದ ಅನುಮತಿ ಕೊಡಿಸಿದರು. ಇಂತಹ ಗೈರಾಣಿ ಭೂಮಿಗಳಿಗೆ ಸಾವಿರಾರು ಅಸ್ಪೃಶ್ಯರನ್ನು ಭೂ ಒಡೆಯರನ್ನಾಗಿ ಮಾಡಿದ ಕೀರ್ತಿ ಶ್ಯಾಮಸುಂದರ್ ಅವರಿಗೆ ಸಲ್ಲುತ್ತದೆ.

**ವಿದೇಶ ಪ್ರವಾಸ**

೧೯೪೭ರಲ್ಲಿ ನಿಜಾಮ ಸಂಸ್ಥಾನವು ವಿಶ್ವ ಸಂಸ್ಥೆಗೆ ತನ್ನ ನಿಯೋಗವೊಂದನ್ನು ಕಳುಹಿಸಿಕೊಟ್ಟಿತು. ಆ ನಿಯೋಗದ ನೇತೃತ್ವವನ್ನು ಮಂತ್ರಿಯಾಗಿದ್ದ ಬಿ. ಶ್ಯಾಮಸುಂದರ್ ವಹಿಸಿದ್ದರು. ಆ ಸಂದರ್ಭದಲ್ಲಿ ಶ್ಯಾಮಸುಂದರ್ ಅವರಿಗೆ ಯೂರೋಪ್ ದೇಶದ ಹತ್ತಾರು ವಿಚಾರವಂತರ ಮತ್ತು ರಾಜಕೀಯ ಕ್ಷೇತ್ರದಲ್ಲಿ ಗಣ್ಯರ ಸಂಪರ್ಕ ಲಭಿಸಿತು. ಚೀನಾದ ಪ್ರಧಾನಿ ಚೌ ಎನ್ ಲಾಯ್, ವಿಯಟ್ನಾಮಿನ ಹೋ ಚಿ ಮಿನ್, ವಿನ್‌ಸ್ಟನ್ ಚರ್ಚಿಲ್, ಹೆರಾಲ್ಡ್ ಲಾಸ್ಕಿ ಮುಂತಾದವರಿಗೆ ಭಾರತದ ಜಾತಿ ವ್ಯವಸ್ಥೆ ಮತ್ತು ಅಸ್ಪೃಶ್ಯತೆಯಿಂದಾಗುವ ಶೋಷಣೆ ಕುರಿತು ಮನವರಿಕೆ ಮಾಡಿಕೊಟ್ಟರು. ಬಿ. ಶ್ಯಾಮಸುಂದರ್ ನೇತೃತ್ವದ ನಿಯೋಗವು ಯೂರೋಪ್ ದೇಶಗಳಿಗೆ ಭೇಟಿ ಕೊಟ್ಟ ಮುಖ್ಯ ಉದ್ದೇಶವೆಂದರೆ, ನಿಜಾಮ ಸಂಸ್ಥಾನವು ಸ್ವತಂತ್ರ ರಾಷ್ಟ್ರವಾಗಿ ಉಳಿಯಲಿ ಎಂಬುದಾಗಿತ್ತು. ಬಿ. ಶ್ಯಾಮಸುಂದರ್ ಕೂಡ ಈ ನಿಯಮಕ್ಕೆ ಬದ್ಧರಾಗಿದ್ದರು. ಭರತಖಂಡದಲ್ಲಿ ಅಸ್ಪೃಶ್ಯರನ್ನು ಕೀಳಾಗಿ ಕಾಣುತ್ತಿದ್ದ ಕಾಲದಲ್ಲಿ ಅವರನ್ನು ಅದರಿಂದ ಮುಕ್ತಗೊಳಿಸಬೇಕೆಂದು ನಿಜಾಮ ಸಂಸ್ಥಾನದ ಅಸ್ಪೃಶ್ಯರ ಅಭಿವೃದ್ಧಿಯ ಕನಸು ಕಂಡಿದ್ದರು. ಈ ನಿಟ್ಟಿನಲ್ಲಿ ನಿಜಾಮ ಕೂಡ ಸಕಾರಾತ್ಮಕವಾಗಿ ಸ್ಪಂದಿಸಿದ್ದ. ಹೀಗಾಗಿ ಸಂಸ್ಥಾನವು ಸ್ವತಂತ್ರವಾಗಬೇಕೆಂಬ ಇವರ ಹೇಳಿಕೆಯಿಂದ ನೆಹರು ಮತ್ತು ವಲ್ಲಭ ಭಾಯಿ ಪಟೇಲ ಅವರಲ್ಲಿ ತಳಮಳವುಂಟಾಯಿತು. ವಿದೇಶದಲ್ಲಿದ್ದ ಸಂದರ್ಭದಲ್ಲಿ ದೇಶ ಸ್ವತಂತ್ರವಾಯಿತು. ಆದೇ ವೇಳೆಗೆ ಶ್ಯಾಮಸುಂದರ್ ವಾಪಸಾದರು. ದಾರಿ ಮಧ್ಯದಲ್ಲಿ ಇವರನ್ನು ಬಂಧಿಸಿ ಒಂಭತ್ತು ತಿಂಗಳ ಕಾಲ ಪೂನಾದ ಕಾರಾಗೃಹದಲ್ಲಿ ಇಡಲಾಯಿತು. ಅವರ ಬಂಧನದಿಂದ ಅನೇಕ ಅನುಯಾಯಿಗಳು ಬೇರೆ ಬೇರೆ ರಾಜಕೀಯ ಪಕ್ಷಗಳನ್ನು ಸೇರಿದರು. ಕಾರಾಗೃಹದಿಂದ ಬಿಡುಗಡೆಗೊಂಡ ನಂತರ ಕೆಲವು ದಿನಗಳ ಕಾಲ ಏಕಾಂಗಿಯಾಗಿ ಉಳಿದರು. ಧೃತಿಗೆಡದೆ ಸಾಮಾಜಿಕ ಚಳವಳಿಗೆ ಮುಂದಾದರು. ಫೀನಿಕ್ಸ್ ಪಕ್ಷಿಯಂತೆ ಮತ್ತೆ ಮರುಹುಟ್ಟು ಪಡೆದು ಹೊಸ ಯೋಧರ ಪಡೆಯೊಂದನ್ನು ಕಟ್ಟಲು ತೀರ್ಮಾನಿಸಿ ಗುಲ್ಬರ್ಗಾ, ಬೀದರ್, ರಾಯಚೂರು ಈ ಮೂರು ಜಿಲ್ಲೆಗಳನ್ನೊಳಗೊಂಡ ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. ಆ ಮೂಲಕ ಸಾರ್ವಜನಿಕ ಸೇವೆಗೆ ತೊಡಗಿದರು.

**ಮೈಸೂರು ವಿಧಾನ ಸಭೆಗೆ ಆಯ್ಕೆ**

ಸ್ವತಂತ್ರ ಭಾರತದ ೧೯೫೦ರ ಸುಮಾರಿಗೆ ಶ್ಯಾಮ ಸುಂದರ್ ಅವರು ಡಿಪ್ರೆಸ್ಡ್ ಕ್ಲಾಸ್ ಅಸೋಸಿಯೇಷನ್ ಸಂಘಟನೆಯ ಅಧ್ಯಕ್ಷರಾಗಿ ಶೋಷಿತರ ಸಮಾಜಕ್ಕೆ ಹೊಸ ಜೀವ ತುಂಬಿದರು. ಅಂಬೇಡ್ಕರ್ ಅವರ ಸಿದ್ಧಾಂತ ಚಿಂತನೆಗಳ ಪ್ರಚಾರ, ಪ್ರಸಾರಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು. ೧೯೫೭ರ ಮಹಾ ಚುನಾವಣೆಯಲ್ಲಿ ಬಿ. ಶ್ಯಾಮಸುಂದರ್ ಅವರು ಭಾಲ್ಕಿ ಕ್ಷೇತ್ರದಿಂದ ಮೈಸೂರು ರಾಜ್ಯ ವಿಧಾನಸಭೆಗೆ ಆಯ್ಕೆಯಾದರು. ಇವರ ಗೆಲುವಿನಿಂದ ವಿರೋಧಿ ಅಭ್ಯರ್ಥಿಯ ಠೇವಣಿ ಜಪ್ತಿಯಾಯಿತು. ತಮ್ಮ ಅಪಾರ ಅನುಭವ, ಅಧ್ಯಯನ, ವಿದ್ವತ್ತು, ವಾಕ್ ಚಾತುರ್ಯ ಮತ್ತು ರಾಜಕೀಯ ಪ್ರೌಢಿಮೆಗಳಿಂದಾಗಿ ಸದನದಲ್ಲಿ ಒಳ್ಳೆಯ ಹೆಸರು ಪಡೆದುಕೊಂಡರು. ಸಮಾಜದ ಹಿತದ ದೃಷ್ಟಿಯಿಂದ ವಿಧಾನಸಭೆಯ ಹೊರಗೂ ಒಳಗೂ ದುಡಿಯಹತ್ತಿದರು. ರಾಜ್ಯದ ಗಡಿ ಪ್ರದೇಶದ ಆಳಂದ ತಾಲೂಕಿನ ಚಿಂಚನಸೂರ ಮಹಾಪೂರ ತಾಯಿ, ಹಡಲಗಿ ಯಲ್ಲಮ್ಮ ದೇವತೆಗಳ ಪೂಜೆಯ ಹೆಸರಿನಲ್ಲಿ ನಡೆಯುತ್ತಿದ್ದ ಅಮಾನವೀಯವಾದ ಬೆತ್ತಲೆ ಸೇವೆ ಪದ್ಧತಿಯನ್ನು ಸದನದ ಗಮನಕ್ಕೆ ತಂದರು. ಅದನ್ನು ನಿಲ್ಲಿಸುವಂತೆ ಸರಕಾರದ ಮೇಲೆ ಒತ್ತಡ ಹೇರಿದರು. ಸರಕಾರಿ ಸೇವೆಯಲ್ಲಿ ಒಂದೇ ವರ್ಗದವರು ಇರುವುದನ್ನು ನೇರವಾಗಿ ಸದನದಲ್ಲಿ ಖಂಡಿಸಿದರು. ಇಲ್ಲಿಯ ಜಾತಿ ಪದ್ಧತಿಯನ್ನು ತಾರ್ಕಿಕ ನೆಲೆಯಲ್ಲಿ ಖಂಡಿಸುತ್ತ ''ನಾವು ಮೂಲ ಭಾರತೀಯರು, ನಿಜವಾಗಿ ಮಣ್ಣಿನ ಮಕ್ಕಳು'' ಎಂದು ದಲಿತರನ್ನು ಬಡಿದೆಬ್ಬಿಸಿದರು. ವಿಧಾನಸಭೆಯಲ್ಲಿ ಹುಲಿಯಂತೆ ಗುಡುಗಿದರು. ಅಸ್ಪೃಶ್ಯರನ್ನು ಅಸ್ಪೃಶ್ಯರು ರಕ್ಷಿಸಬೇಕೆ ಹೊರತು ಅಸ್ಪೃಶ್ಯರನ್ನು ತುಳಿಯುವ ಸವರ್ಣೀಯರು ರಕ್ಷಿಸಲಾರರು ಎಂದು ಅಭಿಪ್ರಾಯ ಪಟ್ಟರು. ಅಂಬೇಡ್ಕರ್ ಅವರು ಪೂನಾ ಒಪ್ಪಂದದಲ್ಲಿ ಪಡೆದ ಎಲ್ಲ ಬೇಡಿಕೆಗಳನ್ನು ಪೂರೈಸುವಂತೆ ಸದನದಲ್ಲಿ ಪ್ರಶ್ನಿಸುವುದರ ಮೂಲಕ ಅಂತಹ ಮೊದಲ ಶಾಸಕರೆನಿಸಿದರು. ದಲಿತರು ಆದಿ ಕಾಲದಲ್ಲಿ ಈ ದೇಶವನ್ನು ಆಳಿದವರು. ಹೀಗಾಗಿ ನಾವು ಮೂಲ ಭಾರತೀಯರು ಎಂದು ವಾದ ಮಂಡಿಸಿ ದಲಿತರಲ್ಲಿ ಆತ್ಮಾಭಿಮಾನ ತುಂಬುತ್ತಿದ್ದರು. ಆದ್ದರಿಂದಲೇ ಈ ಪ್ರದೇಶದಲ್ಲಿ 'ಮೂಲ ಭಾರತೀಯರು' ಎಂಬ ಪದ ಈಗಲೂ ದಲಿತರ ಬಾಯಲ್ಲಿ ಜನಜನಿತವಾಗಿದೆ. ಅವರ ರಾಜಕೀಯ ಘೋಷಣೆ ಎಷ್ಟು ಸ್ಪಷ್ಟ ಮತ್ತು ಗಂಭೀರವಾಗಿತ್ತೆಂದರೆ ''ಖೋಯಾ ಹುವಾ ರಾಜ್ ಮಾಂಗನೇಸೆ ನಹಿ ಮಿಲ್ತಾ ಉಸೆ ಛೀನಾ ಜಾತಾ ಹೈ'' (ಕಳೆದು ಹೋದ ರಾಜ್ಯಾಧಿಕಾರವನ್ನು ಬೇಡುವುದರಿಂದ ಅದು ಸಿಗುವುದಿಲ್ಲ, ಬದಲಿಗೆ ಆಳುವ ವರ್ಗದ ಕೈಯಿಂದ ಕಿತ್ತುಕೊಳ್ಳಬೇಕು) ಎಂದು ಹೇಳುತ್ತಿದ್ದರು.




**ಸಾಹಿತ್ಯ ಸೇವೆ**

ಬಿ. ಶ್ಯಾಮಸುಂದರ್ ಅವರು ನಿಜಾಮ ಸಂಸ್ಥಾನದಲ್ಲಿ ಮಂತ್ರಿಯಾಗಿ ಸ್ವಾತಂತ್ರ್ಯನಂತರದಲ್ಲಿ ಮೈಸೂರು ರಾಜ್ಯ ವಿಧಾನಸಭೆಯ ಶಾಸಕರಾಗಿ, ಅಲ್ಲದೆ ಸಂಘಟಕರಾಗಿ, ಸಮಾಜ ಸುಧಾರಕರಾಗಿ ದುಡಿದಿದ್ದಲ್ಲದೆ ಲೇಖಕರಾಗಿ ಸ್ಮರಣಾರ್ಹವಾದ ಕಾರ್ಯ ಮಾಡಿದ್ದಾರೆ. ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿ ಚರಿತ್ರೆಯನ್ನು ಆಳವಾಗಿ ಅಧ್ಯಯನ ಮಾಡಿದ ಶ್ಯಾಮಸುಂದರ್ ಬಹು ಭಾಷಾ ಪಂಡಿತರಾಗಿದ್ದರು. ಹಿಂದಿ, ಇಂಗ್ಲಿಷ್, ಕನ್ನಡ, ಮರಾಠಿ, ಪರ್ಷಿಯನ್ ಭಾಷೆಗಳಲ್ಲಿ ಪ್ರೌಢಿಮೆಯನ್ನು ಪಡೆದಿದ್ದರು. ದ ಬ್ರೂನ್ ಮೂಲಭಾರತೀಯರು, ಭೂದೇವತೆಗಳ ಪ್ರಣಾಳಿಕೆಗಳು, ದಿ ಫೋರ್ ಇಮ್ಮಿಡಿಯೆಟ್ ನೀಡ್ಸ್ ಹೀಗೆ ಒಟ್ಟು ೧೫ ಕೃತಿಗಳನ್ನು ರಚಿಸಿದ್ದಾರೆ. ದೀಕ್ಷಾ ಕಾದಂಬರಿಯು 'ಜಿಂದಗಿ ಏಕ್ ಸಫರ್' ಹೆಸರಿನಲ್ಲಿ ಚಲನಚಿತ್ರವಾಗಿದೆ. ಈ ಚಲನಚಿತ್ರ ಕುಷ್ಠ ರೋಗ ಮತ್ತು ಪುನರ್ವಸತಿಯ ಕುರಿತಾದ ವಿಷಯಗಳನ್ನೊಳಗೊಂಡಿದೆ. ಅವರು ಅಲ್ಪಸಂಖ್ಯಾತರು, ಹಿಂದುಳಿದವರು ಮತ್ತು ದಲಿತರು ಒಂದಾಗಿ ತಮ್ಮ ಹಕ್ಕಿಗಾಗಿ ಹೋರಾಡ ಬೇಕೆಂದು ಸದಾ ಹೇಳುತ್ತಿದ್ದರು. ೧೯೬೨ರಲ್ಲಿ ಉತ್ತರ ಪ್ರದೇಶದ ಲಖನೌದಲ್ಲಿ ಎರಡು ದಿನಗಳ ಅಹಿಂದ ಸಮಾವೇಶ ನಡೆಸಿದರು. ಅದರ ಅಧ್ಯಕ್ಷತೆಯನ್ನು ಬಿ. ಶ್ಯಾಮಸುಂದರ್ ವಹಿಸಿದ್ದರು. ''ಈಗ ನೀವು ಒಂದಾಗಿರಿ. ಈಗ ಒಂದಾಗದಿದ್ದರೆ ನೀವು ಮುಂದೆಂದೂ ಒಂದಾಗಲಾರಿರಿ'' ಎಂದು ಎಚ್ಚರಿಕೆಯನ್ನು ನೀಡಿದ್ದರು. ಹೀಗೆ ಶೋಷಿತ ಸಮುದಾಯದಲ್ಲಿ ಅರಿವು ಮೂಡಿಸುವ ವಿಚಾರಗಳು ಅವರ ಕೃತಿಗಳಿಂದ ವ್ಯಕ್ತವಾಗಿರುವುದು ಕಂಡುಬರುತ್ತದೆ.

**ಭಾರತೀಯ ಭೀಮಸೇನೆ**

ಅವರ ಶಾಸಕ ಅವಧಿ ೧೯೬೨ಕ್ಕೆ ಮುಗಿದ ಮೇಲೆ ಸಂಪೂರ್ಣವಾಗಿ ದಲಿತ ಸಂಘಟನೆಗೆ ಮುಂದಾದರು. ಬಿ. ಶ್ಯಾಮಸುಂದರ್ ಬಾಲ್ಯದಿಂದಲೇ ಕೆಳವರ್ಗದ ಗುಲಾಮಗಿರಿಯ ಸ್ಥಿತಿಯನ್ನು ವಿರೋಧಿಸುತ್ತಾ ಬಂದವರು. ವ್ಯಕ್ತಿಯು ಜಾತಿಯ ಹಂಗು ತೊರೆದು ಸ್ವಾಭಿಮಾನದಿಂದ ಎದೆಯೆತ್ತಿ ನಡೆಯಬೇಕೆಂಬ ನಿಲುವು ಅವರದಾಗಿತ್ತು. ಈ ನಾಡಿನ ಬಹುಸಂಖ್ಯಾತರ ಎದುರಿಗೆ ದ್ವಿತೀಯ ದರ್ಜೆಯ ಪ್ರಜೆಗಳೆಂಬ ಕೀಳು ಭಾವನೆ ದಲಿತ, ಶೋಷಿತ ಹಾಗೂ ಅಲ್ಪಸಂಖ್ಯಾತರಲ್ಲಿ ಮೂಡಬಾರದು ಎಂಬುದು ಅವರ ಆಲೋಚನೆಯಾಗಿತ್ತು. ತುಳಿತಕ್ಕೊಳಗಾದವರನ್ನು ಸಂಘಟಿಸಿ ಹೋರಾಟದ ಮೂಲಕ ಮೇಲೆತ್ತಲು ಅವರು ಬದುಕಿನುದ್ದಕ್ಕೂ ಪ್ರಯತ್ನಿಸಿದರು. ಶಿಕ್ಷಣ, ಸಂಘಟನೆ, ಹೋರಾಟದ ಅರಿವುಗಳ ಮೂಲಕ ಮಾತ್ರ ದಲಿತರ ಏಳಿಗೆ ಸಾಧ್ಯವೆಂದು ನಂಬಿ ಡಾ॥ಅಂಬೇಡ್ಕರ್ ಅವರ ೭೭ನೆಯ ಹುಟ್ಟುಹಬ್ಬ (ಏಪ್ರಿಲ್ ೧೯೬೮)ದ ನಿಮಿತ್ತ ಹಮ್ಮಿಕೊಂಡ ಕಾರ್ಯಕ್ರಮದಂದು, ಅಂದರೆ ಸರಿ ಸುಮಾರು ನಾಲ್ಕು ದಶಕಗಳ ಹಿಂದೆ, ಭಾರತೀಯ ಭೀಮಸೇನೆ ಎಂಬ ಸಂಘಟನೆ ಕಟ್ಟಿದರು. ಭೀಮ

ಎಂಬುದು ಮಹಾಭಾರತದ ಭೀಮನ ಹೆಸರಲ್ಲ, ಆಧುನಿಕ ಭಾರತದ ಸಂವಿಧಾನ ಶಿಲ್ಪಿ, ದಲಿತ ಸೂರ್ಯ ಅಂಬೇಡ್ಕರ್ ಭೀಮ. ಶ್ಯಾಮಸುಂದರ್ ಅವರೇ ಸಂಸ್ಥಾಪಕ ಅಧ್ಯಕ್ಷರಾಗಿದ್ದರು. ಗುಲ್ಬರ್ಗಾದ ಜಗತ್ ಸರ್ಕಲ್‌ನಲ್ಲಿ ಸಂಘವು ವಿಧ್ಯುಕ್ತವಾಗಿ ಉದ್ಘಾಟನೆಗೊಂಡಿತು. ಆ ಮೂಲಕ ಅವರು ಮಾಡಿದ ಜನಜಾಗೃತಿ ಅನನ್ಯವಾದುದು. ಭಾರತದ ಜಾತಿ ವ್ಯವಸ್ಥೆ ಮತ್ತು ರಾಜಕೀಯ ವ್ಯವಸ್ಥೆಯ ದೋಷಗಳನ್ನು ಅವರು ಬಲವಾಗಿ ಖಂಡಿಸಿದರು. ಅವರು ಅಪ್ಪಟ ನಾಸ್ತಿಕರಾಗಿದ್ದರು. ದೈವ ದೇವರ ಅಸ್ತಿತ್ವವನ್ನು ಪ್ರೋತ್ಸಾಹಿಸುತ್ತಿರಲಿಲ್ಲ ಹಾಗೂ ನಂಬುತ್ತಿರಲಿಲ್ಲ. ಹಣೆ ಬರಹ, ಪುನರ್‌ಜನ್ಮದ ಬಗ್ಗೆ ಅವರಿಗೆ ನಂಬಿಕೆ ಇರಲಿಲ್ಲ. ಶತಶತಮಾನಗಳಿಂದ ದಲಿತರನ್ನು ದೇವರ ಹೆಸರಿನಲ್ಲಿ ಕತ್ತಲೆಯ ಕೂಪಕ್ಕೆ ತಳ್ಳಿರುವುದಲ್ಲದೆ, ಅಸ್ಪೃಶ್ಯತೆಯ ಅವಮಾನಕ್ಕೆ ಕಾರಣವಾಗಿದ್ದ ಹಿಂದೂ ದೇವತೆಗಳ ಫೋಟೋಗಳನ್ನು ಸಾಮೂಹಿಕವಾಗಿ ದಹನಗೊಳಿಸುವಂತಹ ವಿನೂತನ ಚಳವಳಿ ಕೈಗೊಂಡರು. ಈ ಹೋರಾಟಕ್ಕೆ ಬೆಂಬಲವಾಗಿ ನಿಂತ ದಲಿತರು ಎಲ್ಲ ದೇವಾನುದೇವತೆಗಳ ಫೋಟೋಗಳನ್ನು ಸುಡುವುದರ ಮೂಲಕ ಶೋಷಣೆಯ ವಿರುದ್ಧ ಪ್ರತಿಭಟಿಸಿದರು. ಅಂದಿನ ನಾಯಕರಾದ ವೀರೇಂದ್ರ ಪಾಟೀಲ, ಎಸ್. ನಿಜಲಿಂಗಪ್ಪ ಅವರು ಈ ವಿಷಯ ಕುರಿತು ದಿಗ್ಭ್ರಮೆ ವ್ಯಕ್ತಪಡಿಸಿದರು. ಈ ರೀತಿಯ ವಿನೂತನ ಕಾರ್ಯಕ್ರಮದಿಂದಾಗಿ ನಾಡಿನ ಮುಂದುವರಿದ ಜಾತಿಯವರು ಇದನ್ನು ಖಂಡಿಸಿದರು. ದಲಿತರ ಮೇಲಾಗುವ ಅವಮಾನಗಳು, ದೌರ್ಜನ್ಯಗಳು ನಿಲ್ಲಬೇಕಾದರೆ ಪ್ರತ್ಯೇಕ ಹಳ್ಳಿ, ಪ್ರತ್ಯೇಕ ರಾಜ್ಯ, ಪ್ರತ್ಯೇಕ ವಿಶ್ವವಿದ್ಯಾಲಯದ ಬೇಡಿಕೆಯನ್ನು ಸಹ ಶ್ಯಾಮಸುಂದರ್ ಪ್ರತಿಪಾದಿಸಿದರು.

ಶ್ಯಾಮಸುಂದರ್ ಅವರು ೧೯-೫-೧೯೭೫ರಂದು ನಿಧನರಾದರು. ಅವರ ನಿಧನದ ನಂತರ ಭೀಮ ಸೇನೆಯ ಚಟುವಟಿಕೆಗಳು ನಿಂತುಹೋದವು. ಅವರ ಅನುಯಾಯಿಗಳು ಬೂಸಾ ಪ್ರಕರಣದ ಚಳವಳಿಯಲ್ಲಿ ಸಕ್ರಿಯರಾದರು. ಹೀಗೆ ಜನ್ಮತಾಳಿದ ಭೀಮಸೇನೆ ಮಹಾರಾಷ್ಟ್ರದ, ದಲಿತ್ ಪ್ಯಾಂಥರ್, ಕರ್ನಾಟಕದ ದಲಿತ ಸಂಘರ್ಷ ಸಮಿತಿಯ ಹುಟ್ಟಿಗೆ ಕಾರಣವಾಯಿತು. ಭೀಮಸೇನೆ ರಾಷ್ಟ್ರಮಟ್ಟದ ಸಂಘಟನೆಯಾಗಿತ್ತು. ಶ್ಯಾಮ ಸುಂದರ್ ಅವರು ಜಗಜೀವನರಾಮ, ಅಲ್ಲದೆ ಕರ್ನಾಟಕ ರಾಜ್ಯದ ಅಂದಿನ ರಾಜ್ಯಪಾಲರಾಗಿದ್ದ ದೀಕ್ಷಿತ್ ಹಾಗೂ ಅಂದಿನ ಮುಖ್ಯಮಂತ್ರಿಗಳಾದ ಬಿ. ಡಿ. ಜತ್ತಿಯವರ ನಿಕಟವರ್ತಿಗಳಾಗಿದ್ದರು. ಬಿ. ಬಸವಲಿಂಗಪ್ಪ ಅವರು ಶ್ಯಾಮಸುಂದರ್ ಅವರನ್ನು ಹೆಚ್ಚು ಗೌರವಿಸುತ್ತಿದ್ದರು.

ಗುಲ್ಬರ್ಗಾದ ಮಹಾನಗರ ಪಾಲಿಕೆಯವರು ಸರಕಾರಿ ಆಸ್ಪತ್ರೆಯ ಸರ್ಕಲ್‌ಗೆ ಬಿ. ಶ್ಯಾಮಸುಂದರ್ ವೃತ್ತವೆಂದು ನಾಮಕರಣಮಾಡಿದ್ದಾರೆ. ಶ್ರೀ ಶ್ರೇಯಸ್ಕರ್ ಅವರು ಬಿ. ಶ್ಯಾಮಸುಂದರ್ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಯೊಂದನ್ನು ನಡೆಸುತ್ತಿದ್ದಾರೆ. ಇನ್ನೊಂದು ವಿಶೇಷವೆಂದರೆ ಗುಲ್ಬರ್ಗಾದ ಹೃದಯ ಭಾಗದಲ್ಲಿರುವ ಸುಂದರನಗರ ಮೊದಲು ಶ್ಯಾಮಸುಂದರ್ ನಗರವೇ ಆಗಿತ್ತು. ಆ ನಗರಕ್ಕೆ ಬಿ. ಶ್ಯಾಮಸುಂದರ್ ನಗರವೆಂದು ಮರುನಾಮಕರಣ ಮಾಡಲು ಮಹಾನಗರ ಪಾಲಿಕೆ ಒಪ್ಪಿಕೊಂಡಿದೆ. ಗುಲ್ಬರ್ಗಾ ವಿಶ್ವವಿದ್ಯಾಲಯವು ಶ್ಯಾಮಸುಂದರ್ ಅವರ ಜೀವನ ಚರಿತ್ರೆಯನ್ನು ಸ್ನಾತಕ ವಿದ್ಯಾರ್ಥಿಗಳಿಗೆ ಪಠ್ಯವಾಗಿಸಿದೆ. ಕರ್ನಾಟಕ ಸರಕಾರವು ಬಿ. ಶ್ಯಾಮಸುಂದರ್ ಪ್ರತಿಮೆಯನ್ನು ಅವರ ಹೆಸರಿನಲ್ಲಿರುವ ಸರ್ಕಲ್‌ನಲ್ಲಿ ಅನಾವರಣ ಮಾಡಲು ತೀರ್ಮಾನ ಕೈಗೊಂಡಿದೆ. ಅವರ ಸಮಾಜ ಸೇವೆಗೆ ಸಂದ ಗೌರವ ಇದಾಗಿದೆ.

ದಲಿತ ಚಳವಳಿಯ ಹುಟ್ಟಿಗೆ ಕಾರಣರಾದ ದಲಿತ ಚೇತನ ಬಿ. ಶ್ಯಾಮಸುಂದರರು ಹುಟ್ಟಿ, ಬರುವ ೨೧-೧೨-೨೦೦೮ರ ಹೊತ್ತಿಗೆ ನೂರು ವರ್ಷಗಳಾಗುತ್ತವೆ. ಅವರು ನಿಧನರಾಗಿ ೧೯-೦೫-೨೦೦೮ಕ್ಕೆ ಮೂವತ್ತೆಂಟು ವರ್ಷಗಳು ಕಳೆದಿವೆ. ಅವರ ಶತಮಾನೋತ್ಸವದ ಸಂದರ್ಭದಲ್ಲಿ ಅವರನ್ನು ಸ್ಮರಿಸುವುದು ನಮ್ಮೆಲ್ಲರ ಹಿತಕ್ಕಾಗಿ ಎನ್ನುವುದು ನನ್ನ ಭಾವನೆ.

**ಡಾ|| ಎಚ್. ಟಿ. ಪೋತೆ**
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ - ೫೮೫೧೦೬

## ಮುಖವಾಡ



ಈಗ ನಾನೇನು ಬರೆದರೂ
ಅದು ಗೋಳಿನ ಕತೆಯಾದೀತು.
ದುಃಖ ಹಂಚಿಕೊಳ್ಳುವುದೆಂದರೆ,
ನನಗೆ ನಾನೇ
ಸೂಜಿಯಲ್ಲಿ ಚುಚ್ಚಿಕೊಂಡ ಹಾಗೆ.

ನಗೆಯ ಗಿಲೀಟು ಹಚ್ಚಿದ
ಮುಖವಾಡ ಹೊತ್ತ ನನಗೆ
ದುಃಖವನ್ನು ಹೊರುವುದು
ಅಭ್ಯಾಸವಾಗಿಬಿಟ್ಟಿದೆ.

ಯಾರ ಕಣ್ಣಲ್ಲಿ ನಾನು
ಹೇಗೆ ಚಿತ್ರವಾಗಿದ್ದೇನೋ,
ಅದು ಹಾಗೇ ಇರಲಿ ಬಿಡು.
ಅದರ ಮೇಲೆ
ಮತ್ತೊಂದು ಚಿತ್ರ ಮೂಡಿ
ಅಸ್ಪಷ್ಟವಾಗುವುದು ಬೇಡ
ಎನ್ನುತ್ತದೆ ಮನಸು.

ಒಡೆದ ಕನ್ನಡಿಯಲ್ಲಿ
ನನ್ನದೇ ವಿಕೃತಗೊಂಡ
ನೂರು ಬಿಂಬಗಳು
ಅಣಕಿಸುತ್ತವೆ.
ನಕ್ಕರೆ,
ವಿಕಾರವಾಗಿ ನಗುತ್ತವೆ.

ಆದರೆ,
ಮುಖವಾಡದೊಳಗಿನ ಮುಖ
ನನಗೆ ಮಾತ್ರ ಕಾಣಿಸುತ್ತದೆ.

ಹರಿದ ಕಣ್ಣೀರು
ನನ್ನ ಎದೆಯನ್ನಷ್ಟೇ
ಒದ್ದೆ ಮಾಡುತ್ತದೆ
ಸಹಕರಿಸುತ್ತದೆ,
ನನ್ನ ಪಾತ್ರ ಪೋಷಣೆಗೆ.

**ಹೇಮಾ ವೆಂಕಟ್**
ನಂ. ೩೨೬, ತುಂಗಾನಗರ
ಅಂಚೆ : ವಿಶ್ವನೀಡಂ
ಬೆಂಗಳೂರು - ೫೬೦ ೦೯೧

# ಲಗಮು ಕಾಕಾ

ಡಾ|| ಅನಿಲ ಕಮತಿ

ಹುಡುಗಾಟಕಿ ಬುದ್ಧಿ ಕಾಲ ಜಾರಿ ಬಿದ್ದಿ! ನಾನು ಹತ್ತು ವರ್ಷದವನಾಗಿದ್ದಾಗ ಏನೋ ತುಂಟತನ ಮಾಡಹೋಗಿ ಬೇಸ್ತು ಬಿದ್ದಾಗ ಹೀಗೊಂದು ಗಾದೆಮಾತು ಉರುಳಿಸಿದವರು ನಮ್ಮ ಲಗಮು ಕಾಕಾ. ಮಾತು ಮಾತಿಗೊಮ್ಮೆ ಇಂಥ ಅನುಭವೋಕ್ತಿಗಳು, ಅಮೃತವಾಣಿಗಳು ಅವರ ಬಾಯಿಂದ ಸುರಿಯುತ್ತಲೇ ಇದ್ದವು. ಆದರೆ ಅದರೊಳಗೆಲ್ಲೂ ಜೊಳ್ಳಿಲ್ಲ. ಎಲ್ಲವೂ ಸಮಯೋಚಿತ – ಸಾಂದರ್ಭಿಕ. ಇವು ಕೆಲವು ಸಲ ಕಟೂಕ್ತಿಯ ಸಾಲಿನಲ್ಲಿ ನಿಲ್ಲಬಲ್ಲಂಥವಾದರೂ ಎಂದೂ ಯಾರ ಮನವನ್ನೂ ನೋಯಿಸಿಲ್ಲ. ಅಷ್ಟು ನಾಜೂಕು ನಮ್ಮ ಲಗಮು ಕಾಕಾನ ವಾಣಿಗಳು.

ಲಗಮು ಕಾಕಾನನ್ನು ನೀವು ದೂರದಿಂದ ನೋಡಿದಾಗ ನಿಮಗೆ ಘಟೋತ್ಕಚನದೋ ದಧೀಚಿಯದೋ ನೆನಪಾಗಬೇಕು. ಮಟ್ಟಸವಾದ ಬೀಸು, ಎತ್ತರದ ನಿಲುವು. ನಮ್ಮ ಕರ್‌ನಾಟಕಕ್ಕೆ ತನ್ನ ಹೆಸರನ್ನು ತಂದುಕೊಟ್ಟ ನಮ್ಮ ಕರಿಯ ಎರೆಮಣ್ಣೂ ಕೊಂಚ ನಾಚಿಕೊಳ್ಳಬೇಕಾದಂಥ ಮೈಬಣ್ಣ, ಹುರಿಗಟ್ಟಿದ ಮಾಂಸಲ ಶರೀರ. ಗಂಭೀರ ಹೆಜ್ಜೆ ಹಾಕುತ್ತ ಬಂದರೆ ಹತ್ತಿಡಿ ಸುತ್ತಲಿನ ನೆಲವೂ ನಡುಗುತ್ತಿತ್ತು. ನಾನು ಮೇಲೆ ಹೇಳಿದ ಪುರಾಣದ ಪಾತ್ರಗಳಿಗೂ ಈ ವ್ಯಕ್ತಿತ್ವಕ್ಕೂ ಒಂದೇ ವ್ಯತ್ಯಾಸ – ಅಲ್ಲಿ ಬಹುತೇಕ ಜನರಿಗೆ ಹೊದೆಯಂಥ, ಕಸಬರಿಕೆಯಂಥ ಮೀಸೆಗಳು, ಇಲ್ಲಿನ ಮೂಗಿನ ಕೆಳಭಾಗವೆಲ್ಲ ಲಗಮು ಕಾಕಾನ ತಲೆಯಂತೆ ಎಲ್ಲಾ ಬೋಳು - ಬೋಳು. ಅಂದ ಹಾಗೆ ನಾನು ಆತನ ತಲೆಯ ಮೇಲ್ಭಾಗದ ವಿಷಯ ಹೇಳಿದ್ದು.

ಲಗಮು ಕಾಕಾ ಹದಿಹರೆಯದವನಿದ್ದಾಗ ಆತನ ದೇಹದಾರ್ಢ್ಯ ನೋಡಿ ಹಳ್ಳಿಯ ನಾಟಕದಲ್ಲಿ ಈತನಿಗೆ ಜರಾಸಂಧನ ಪಾತ್ರ ನೀಡಿದ್ದರಂತೆ. ಜರಾಸಂಧ ಮೇಲಿಂದ ಮೇಲೆ ವೀರಾವೇಶದ ಒಂದೊಂದು ಡೈಲಾಗು ಹೊಡೆಯುವಾಗಲೂ ಮೀಸೆಗೆ ಕೈಹಾಕಿ ಜಂಭದಿಂದ ಮೀಸೆ ತಿರುವಬೇಕು. ಈತನಿಗೋ ದೇಹದ ಆ ಪಾಪಿಷ್ಠ ಭಾಗಕ್ಕೆ ಎಷ್ಟು ಪ್ರಯತ್ನಿಸಿದರೂ ಕೈಯೇ ಹೋಗಲೊಲ್ಲದು. ಹೇಳಿ ಹೇಳಿ ಸುಸ್ತಾಗಿ ಕೊನೆಗೆ ನಾಟಕದ ಮಾಸ್ತರರೇ ಪಾತ್ರದ ಮೀಸೆ ತಿರುವುವ ಈ ಅಂಶವನ್ನು ಕೈಬಿಟ್ಟರಂತೆ.

ನಾಟಕ ಪ್ರಾರಂಭವಾಯಿತು. ಮೊದಲರ್ಧವನ್ನು ಈ ಜರಾಸಂಧ ನೀಟಾಗಿಯೇ ನಿಭಾಯಿಸಿದ. ಭೀಮ-ಜರಾಸಂಧರ ಮಲ್ಲಯುದ್ಧದ ದೃಶ್ಯ ಬಂತು. ಕೊನೆಯ ಘಟ್ಟದಲ್ಲಿ ಭೀಮ ಜರಾಸಂಧನನ್ನು ಕೆಳಕ್ಕೆಸೆಯಬೇಕು. ಆತನ ದೇಹವನ್ನು ಉದ್ದಕ್ಕೆ ಸಿಗಿದು ಎರಡು ವಿರುದ್ಧ ದಿಕ್ಕುಗಳಿಗೆ ಎಸೆಯಬೇಕಾದ ದೃಶ್ಯಕ್ಕೆ ಲಗಮು ಕಾಕಾನನ್ನು ಹೋಲುವ ಅರ್ಧ ದೇಹದ ಗೊಂಬೆಗಳು ನೇಪಥ್ಯದಲ್ಲಿ ತಯಾರಿವೆ. ಆ ದೃಶ್ಯ ಸಮೀಪಿಸಿತು ಎಂದು ಸೂಚಿಸುವುದಕ್ಕೆ ಡೈರೆಕ್ಟರ ಸೈಡವಿಂಗ್‌ನಿಂದ ಈ ಗೊಂಬೆಗಳನ್ನು ತೋರಿಸಿದ. ತನ್ನ ಗೊಂಬೆಯ ಈ ವಿಕಾರ ರೂಪ ನೋಡಿ ಲಗಮು ಕಾಕಾನಿಗೆ ಅದೆಂತು ತಲೆಗೇರಿತೋ, ಭೀಮನ ಪಾತ್ರಧಾರಿಯನ್ನೇ ಗಿರಗಿರನೆ ನಾಲ್ಕು ಸುತ್ತು ತಿರುವಿ ಕೆಳಕ್ಕೆಸೆದ. ಜನವೆಲ್ಲ ಶಿಳ್ಳೆ ಕೇಕೆ ಹಾಕಿದರೆ ಡೈರೆಕ್ಟರರಿಗೆ ಕಕ್ಕಾಬಿಕ್ಕಿ.

ಲಗಮು ಕಾಕಾ ಮತ್ತು ನಮ್ಮ ಕುಟುಂಬದ ಸಂಬಂಧ ತೀರ ಹಳೆಯದು. ನಮ್ಮ ತಂದೆ ಮತ್ತು ಲಗಮು ಕಾಕಾ ಒಬ್ಬರಿಗೊಬ್ಬರು ಬೇರೆ ಬೇರೆ ಅರ್ಥದಲ್ಲಿ ಗುರು ಶಿಷ್ಯರು. ಇಪ್ಪತ್ತರ ಹರೆಯದಲ್ಲೇ ನಮ್ಮ ತಂದೆ ಲಗಮು ಕಾಕಾನ ಊರಿಗೆ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಹೋದಾಗ ಅವರಿಗಿಂತ ನಾಲ್ಕಾರು ವರ್ಷಕ್ಕೆ ಮಾತ್ರ ಚಿಕ್ಕವನಾಗಿದ್ದ ಲಗಮು ಕಾಕಾ ಅಕ್ಷರದ ವಿಷಯಕ್ಕೆ ನಮ್ಮ ತಂದೆಯ ಶಿಷ್ಯನಾದ. ನಮ್ಮ ತಂದೆಗೂ, ಸಾಮು, ಬೈಠಕ್ ಮುಂತಾದ ಸಾಂಪ್ರದಾಯಿಕ ವ್ಯಾಯಾಮಗಳಲ್ಲಿ ಆಸಕ್ತಿಯಿದ್ದುದರಿಂದ, ಇವರು ಅಲ್ಲಿಯ ವ್ಯಾಯಾಮ ಶಾಲೆಗೆ ಹವ್ಯಾಸಿ ಸದಸ್ಯರಾದಾಗ ಈ ವ್ಯಾಯಾಮಗಳೊಂದಿಗೆ ಕುಸ್ತಿಕಲೆಗೂ ಈತ ನಮ್ಮ ತಂದೆಗೆ ಗುರುವಾದ. ಆದರೆ ಜೀವನದ ಕೊನೆಯವರೆಗೂ ನಮ್ಮ ತಂದೆ ಕಾಕಾನಿಗೆ ಪ್ರತಿ ವಿಷಯಕ್ಕೂ ಗುರುವೇ. ಹಣಕಾಸಿನ ವ್ಯವಹಾರ,



ಲಗಮು ಕಾಕಾ ಹದಿಹರೆಯದವನಿದ್ದಾಗ ಆತನ ದೇಹ ದಾರ್ಢ್ಯ ನೋಡಿ ಹಳ್ಳಿಯ ನಾಟಕದಲ್ಲಿ ಈತನಿಗೆ ಜರಾಸಂಧನ ಪಾತ್ರ ನೀಡಿದ್ದರಂತೆ. ಜರಾಸಂಧ ಮೇಲಿಂದ ಮೇಲೆ ವೀರಾವೇಶದ ಒಂದೊಂದು ಡೈಲಾಗು ಹೊಡೆಯುವಾಗಲೂ ಮೀಸೆಗೆ ಕೈಹಾಕಿ ಜಂಭದಿಂದ ಮೀಸೆ ತಿರುವಬೇಕು. ಈತನಿಗೋ ದೇಹದ ಆ ಪಾಪಿಷ್ಠ ಭಾಗಕ್ಕೆ ಎಷ್ಟು ಪ್ರಯತ್ನಿಸಿದರೂ ಕೈಯೇ ಹೋಗಲೊಲ್ಲದು. ಹೇಳಿ ಹೇಳಿ ಸುಸ್ತಾಗಿ ಕೊನೆಗೆ ನಾಟಕದ ಮಾಸ್ತರರೇ ಪಾತ್ರದ ಮೀಸೆ ತಿರುವುವ ಈ ಅಂಶವನ್ನು ಕೈಬಿಟ್ಟರಂತೆ.

ಕೌಟುಂಬಿಕ ವಿರಸ, ಹಳ್ಳಿಯ ಉದ್ಧಾರ, ತಂಟೆ-ತಕರಾರು ಪ್ರತಿಯೊಂದಕ್ಕೂ ಲಗಮು ಕಾಕಾನಿಗೆ ನಮ್ಮ ತಂದೆಯ ಉಪದೇಶದ ಜತೆಗೆ ಆಶೀರ್ವಾದವೂ ಬೇಕೇಬೇಕು. ನಮ್ಮ ತಂದೆ ತೀರಿಹೋದಾಗ ನನಗಿಂತ ಹತ್ತಾರು ಪಟ್ಟು ಹೆಚ್ಚು ಅಂತಃಕರಣದಿಂದ ಗೋಳಾಡಿ ಅತ್ತವನು ಲಗಮು ಕಾಕಾನೇ.

ಲಗಮು ಕಾಕಾ 'ಛಲದೊಳ್ ಸುಯೋಧನನಂ' ಮೀರಿಸುವವ. ಆತನ ತಂದೆ ಯಾವುದೋ ಮಾತಿಗೆ ''ನನ್ನ ಆಸ್ತಿಯೊಳಗ ಒಂದ ಪೈಸಾನೂ ನಿನಗ ಸಿಗೂದುಲ್ಲ. ನಿಂತ ಹೆಜ್ಜಿ ಮ್ಯಾಲ, ಹೊತ್ತ ಅರವಿ ಮ್ಯಾಲ ನಿನ್ನ ಹೆಂಡ್ತಿನ ಕರಕೊಂಡ ಮನಿ ಬಿಟ್ಟ ಹೊರಗಬೀಳು'' ಎಂದ. ಈ ಭೂಪ ಎದ್ದವನೇ ಹೆಂಡತಿಯನ್ನು ಕೂಗಿದ. ಹೆಗಲ ಮೇಲಿದ್ದ ಚೌಕುಳಿಯನ್ನು ಝಾಡಿಸಿದವನೇ ಹೊರಬಿದ್ದ. ಊರ ಹೊರಗಿನ ಗೋಮಾಳದಂಚಿಗೆ ಗುಡಿಸಲು ಕಟ್ಟಿ



ವಾಸಿಸತೊಡಗಿದ. ದುಡಿದ – ಅಲ್ಲಿ ಇಲ್ಲಿ ಎನ್ನದೇ ಮೈಯ ಕಾವೆಲ್ಲ ಬಸಿದುಹೋಗುವವರೆಗೆ ದುಡಿದ. ಸ್ವಂತದ ಮನೆ ಕಟ್ಟಿದ. ಹತ್ತು ಎಕರೆ ಹೊಲ ಕೊಂಡ. ಈತನ ತಂದೆ ಕೊನೆಯುಸಿರೆಳೆಯುವಾಗ ಈತನನ್ನು ಕರೆದು ತನ್ನ ಪಿತ್ರಾರ್ಜಿತ ಆಸ್ತಿಯಲ್ಲಾದರೂ ಅರ್ಧ ಪಾಲು ಕೊಡಹೋದರೆ ನಮ್ಮ ರಾಜಾ ರವಿವರ್ಮನ ಚಿತ್ರಗಳಲ್ಲಿ ಮೇನಕೆಗೆ ಶಕುಂತಲೆ ಹುಟ್ಟಿದೊಡನೆ ವಿಶ್ವಾಮಿತ್ರ ಕೈಮೇಲೆತ್ತಿ ಕೊಟ್ಟ ಪೋಜಿನಂತೆ ಪೋಜು ಕೊಟ್ಟು ಹೊರ ಹೊರಟೇ ಬಿಟ್ಟ.

ಲಗಮು ಕಾಕಾ ಮುಂಜಾನೆದ್ದು ಹೊಲಕ್ಕೆ ಹೊರಟರೆ ದಾರಿಯಲ್ಲಿ ಬಿದ್ದ ಸಗಣಿಯನ್ನೆಲ್ಲ ತನ್ನ ಹೆಗಲಿಗೆ ಹಾಕಿದ ಟವೆಲ್ಲಿನಲ್ಲಿ ತುಂಬಿ ಹೆಗಲಿಗೇರಿಸುವ. ಟವೆಲ್ಲೂ ತುಂಬಿ ಸಗಣಿ ಮಿಕ್ಕಿದರೆ ತಲೆಗೆ ಸುತ್ತಿದ ಮುಂಡಾಸನ್ನೂ ಬಿಚ್ಚಿ ಅದಕ್ಕೂ ಈ ಗಂಜಲ ತುಂಬಿ ಮತ್ತೊಂದು ಹೆಗಲಿಗೇರಿಸುತ್ತಾನೆ. ಹೊಲಕ್ಕೆ ಹೋದೊಡನೆ ಇದನ್ನೆಲ್ಲ ಕಲಸಿ ಕಿವುಚಿ ತಿಪ್ಪೆಗೆ ಎಸೆದು, ಟವೆಲನ್ನೂ, ಮುಂಡಾಸನ್ನೂ ಸ್ವಚ್ಛವಾಗಿ ತೊಳೆದು ಒಣಹಾಕಿ, ದುಡಿಮೆಗೆ ತೊಡಗಿದರೆ ಸಂಜೆ ಗೋಧೂಳಿ ಹೊತ್ತಿಗೆ ಎಮ್ಮೆ-ಹಸುಗಳ ಕೊರಳ ಗಂಟೆಯ ಸದ್ದು ಈತನನ್ನು ಎಚ್ಚರಿಸಬೇಕು. ಮನೆಗೆ ಮರಳುವಾಗ ಮತ್ತದೇ ಪುನರಾವರ್ತನೆ. ಕತ್ತಲಾಗುವ ಹೊತ್ತಿಗೆ ಈ ಟವೆಲನ್ನು ತೊಳೆದುಹಾಕಿ, ಜಳಕ ಮಾಡಿ, ಊಟ ಮುಗಿಸಿ ಅಡ್ಡವಾಗುವುದೇ ತಡ, ಈತನ ಗೊರಕೆಯ ಸದ್ದು ಸುತ್ತಲಿನ ನಾಲ್ಕು ಮನೆಯವರಿಗೂ ಜೋಗುಳ ಹಾಡಬೇಕು.

ನಾನಿನ್ನೂ ಚಿಕ್ಕವನಿದ್ದಾಗಿನ ಮಾತು. ಪ್ರತಿ ಬೇಸಿಗೆ ರಜೆಯಲ್ಲೂ ನಮ್ಮೂರಿಗೆ ಹೋದಾಗ ನಾವೆಲ್ಲ – ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳೆಲ್ಲ ಸೇರಿ – ನಮ್ಮ ಹೊಲಕ್ಕೆ ಹೋಗಿ ಅಪ್ಪಿಪ್ಪು ಗೆಯ್ದು, ಎಮ್ಮೆ ಮೇಯಿಸಿ, ಎಮ್ಮೆಗಳೊಂದಿಗೆ ಹೊಳೆಗೆ ಜಳಕಕ್ಕಿಳಿಯುತ್ತಿದ್ದೆವು. ನನ್ನ ಒಂದು ದೌರ್ಬಲ್ಯವನ್ನು, ನಾನಿಲ್ಲಿ ಒಪ್ಪಿಕೊಳ್ಳಬೇಕು– ಎಮ್ಮೆಗಳನ್ನು ಹೊಳೆಗಿಳಿಸಿ ಪರಚು ಕಲ್ಲಿನಿಂದ ಅವುಗಳ ಮೈ ತಿಕ್ಕುವಾಗ ಹೊರಡುವ – ಆ ಪರಚು ಕಲ್ಲಿನೊಂದಿಗೆ ಆ ಒರಟು ಚರ್ಮದ ಘರ್ಷಣೆಯಿಂದುಂಟಾಗುವ ಆ ಖರ ಖರ ಸದ್ದು ನನ್ನ ಕಿವಿಗಳಿಗೆ ಬಹಳ ಆಪ್ಯಾಯಮಾನವಾಗಿರುತ್ತಿತ್ತು. ಆ ಶಬ್ದ ಮಾಧುರ್ಯಕ್ಕಾಗಿ ವರುಷವಿಡೀ ನನ್ನ ಕಿವಿಗಳು ತಹತಹಿಸುತ್ತಿದ್ದವು ಎಂದರೂ ತಪ್ಪಾಗಲಿಕ್ಕಿಲ್ಲ.

ಒಮ್ಮೆ ನಮ್ಮ ಲಗಮು ಕಾಕಾ ನಮ್ಮೂರಿಗೆ ಬಂದಾಗ ನಮ್ಮೊಂದಿಗೆ ನಮ್ಮ ಹೊಲಕ್ಕೆ ಬಂದ. ನಾಲ್ಕಾಳುಗಳ ಕೆಲಸವನ್ನು ಒಂದೆರಡು ಗಂಟೆಗಳಲ್ಲೇ ಮಾಡಿ ಮುಗಿಸಿದ. ನಮ್ಮೊಂದಿಗೆ ಹೊಳೆಗಿಳಿದ. ನನ್ನನ್ನು ಹೆಗಲಿಗೇರಿಸಿಕೊಂಡು ಹೊಳೆಯ ಆಚೆ ದಡದವರೆಗೂ ಈಜಿ ಮರಳಿ ತಂದ. ನಾನು ನನ್ನ ಪ್ರೀತಿಯ ಕೆಲಸಕ್ಕೆ ಪರಚುಕಲ್ಲೊಂದನ್ನು ಕೈಗೆತ್ತಿಕೊಂಡು ಎಮ್ಮೆಗಳನ್ನು ಸಮೀಪಿಸಿದೆ. ಅಷ್ಟರೊಳಗೆ ನನ್ನ ಕಿವಿಗಳಿಗೆ ಆಪ್ಯಾಯಮಾನವಾಗಿದ್ದ ಆ ಸುಮಧುರ ಲಯಬದ್ಧವಾದ ನಾದ – ಇನ್ನೂ ಹೆಚ್ಚು ಸುಮಧುರವಾಗಿ ಮಾರು ದೂರದಿಂದಲೇ ಕೇಳಬರುತ್ತಿದೆ. ಆಶ್ಚರ್ಯಗೊಂಡು ನಾನತ್ತ ಹೊರಳಿದೆ! ಲಗಮು ಕಾಕಾ ಅಂಥದೇ ಪರಚುಕಲ್ಲಿನಿಂದ ತನ್ನ ಮೈ ತಿಕ್ಕಿಕೊಳ್ಳುತ್ತಿದ್ದಾನೆ!! ಅಂದಿನಿಂದ ಆತನ ಬೆನ್ನನ್ನು ಬೆಣಚುಕಲ್ಲಿನಿಂದ ಸಂದರ್ಭ ಸಿಕ್ಕಾಗಲೆಲ್ಲ ತಿಕ್ಕುವ ಜವಾಬುದಾರಿ ನನ್ನದಾಯಿತು. ಆದರೆ ಹೀಗೆ ತಿಕ್ಕುತ್ತಿರುವಾಗಲೆಲ್ಲ ನಮ್ಮ ಎಮ್ಮೆ ನನ್ನನ್ನು ಇರುಕು ಕಣ್ಣಿನಿಂದ ನೋಡುತ್ತಿರುವಂತೆ ನನಗೆ ಭಾಸವಾಗುತ್ತಿದ್ದುದಂತೂ ಸತ್ಯ.

ಲಗಮು ಕಾಕಾನಿಗೂ ಆತನ ಏಕಮಾತ್ರ ಪುತ್ರರತ್ನನಿಗೂ ಯಾವುದೋ ವಿಷಯಕ್ಕೆ ಒಮ್ಮೆ ವಿರಸ ಹುಟ್ಟಿತು. ಅಪ್ಪನ ಯಾವುದೋ ಮಾತಿಗೆ ಸಿಡಿದು ನಿಂತ ಮಗರಾಯ ನನಗೆ ನಿನ್ನಾಸ್ತಿಯಲ್ಲಿ ಚಿಕ್ಕಾಸೂ ಬೇಡವೆಂದು ಮನೆಬಿಟ್ಟು ಹೋದ. ಒಂದೆರಡು ದಿನ ಧುಮುಧುಮುಗುಟ್ಟಿದ ಲಗಮು ಕಾಕಾ ಅರೆ ತಣ್ಣಗಾದ ನಂತರ ಮಗನೆಂಬ ವ್ಯಾಮೋಹ ತಡೆಯಲಾಗದ್ದಕ್ಕೆ ಮಗನಿಗೆ ಅವರಿವರಿಂದ ತಿಳಿಹೇಳಿಸಿದ. ಮಗ ಜಗ್ಗಲೊಲ್ಲ. ಕೊನೆಗೊಮ್ಮೆ ನ್ಯಾಯ ನಮ್ಮಪ್ಪನವರೆಗೂ ಬಂತು. ಅಪ್ಪ-ಮಗ ಇಬ್ಬರನ್ನೂ ಎದುರಿಗೆ ಕುಳ್ಳಿರಿಸಿಕೊಂಡು ಗಂಟೆಗಟ್ಟಲೆ ಪರಿಪರಿಯಾಗಿ ತಿಳಿಹೇಳಿದರೂ ಕುಮಾರ ಕಂಠೀರವ ಒಂದಿನಿತೂ ಹಿಂದೆ ಸರಿಯಲೊಲ್ಲ. ಕೊನೆಗೆ ಅಸಹಾಯಕರಾಗಿ ಕೈಚೆಲ್ಲಿದ ನಮ್ಮಪ್ಪ ತಮ್ಮ ಶಿಷ್ಯನಿಗೆ ತಿಳಿಹೇಳಿದ್ದಿಷ್ಟೇ – ''ಲಗಮಣ್ಣಾ ಎಲ್ಲಾ ವಿಷಯದಲ್ಲೂ ಆತ ಥೇಟ್ ನಿನ್ನ ಮಗನೇ ಅಪ್ಪ!''

ಒಮ್ಮೆ ನನ್ನ ತಾಯಿಯನ್ನು ಘಟಪ್ರಭಾದ ಆಸ್ಪತ್ರೆಯೊಂದಕ್ಕೆ ಅಡ್ಮಿಟ್ ಮಾಡಿದರು. ರೋಗಿಯೊಂದಿಗೆ ಜತೆಗಿರಲು ಒಬ್ಬರು ಮಹಿಳೆಯರಿಗೆ ಮಾತ್ರ ಅನುಮತಿಯಿತ್ತಾದುದರಿಂದ, ನಾನು - ನನ್ನ ತಂದೆ ಆಸ್ಪತ್ರೆಯ ಧರ್ಮಶಾಲೆಯಲ್ಲಿ ತಂಗಿದೆವು. ರಾಮಭಕ್ತ ಈ ಹನುಮಾನು ಯಾರಿಂದಲೋ ವಿಷಯ ತಿಳಿದಾಗ ನಾಲ್ಕನೆಯ ದಿನಕ್ಕೇನೇ ಹಾಜರಾದ. ತನಗೆ ತಿಳಿಸದೇ, ತನ್ನಕ್ಕನ ಸೇವೆಗೆ ತನಗೆ ಅವಕಾಶ ಕೊಡದೇ ಬಂದುದರಿಂದ ಕೊಂಚ ಮುನಿಸಿಕೊಂಡಿದ್ದ. ನಾಲ್ಕು ದಿನ ಅಲ್ಲಿಯೇ ಉಳಿದು, ತನ್ನ ಪಾಲಿನ ಸೇವೆ ಸಲ್ಲಿಸುವುದಾಗಿ ಪಟ್ಟು ಹಿಡಿದ. ಆ ಧರ್ಮಶಾಲೆಯಲ್ಲೋ ಒಂದೇ ಮಂಚ, ಒಂದೇ ಹಾಸಿಗೆ. ಇದನ್ನೇ ಹತ್ತು ವರ್ಷ ವಯಸ್ಸಿನ ನಾನು ಮತ್ತು ನನ್ನ ತಂದೆ ಹಂಚಿಕೊಳ್ಳುತ್ತಿದ್ದೆವು. ನನ್ನ ತಂದೆಯ ಧರ್ಮಸಂಕಟ ಅರ್ಥಮಾಡಿಕೊಂಡ ಲಗಮು ಕಾಕಾ ತಲೆಗೆ ಸುತ್ತಿದ್ದ ಮುಂಡಾಸನ್ನೇ ಬಿಚ್ಚಿ ಹಾಸಿದ. ತಾನುಟ್ಟಿದ್ದ ಧೋತರವನ್ನೇ ಅರ್ಧ ಬಿಚ್ಚಿ ಹೊದ್ದುಕೊಂಡ. ಆದರೆ ನಿಜವಾದ ಸಮಸ್ಯೆ ಎದುರಾದದ್ದು ಈಗಲೇ! ಲಗಮು ಕಾಕಾನಿಗೆ ಸುಮಾರು ಒಂದಡಿ ಎತ್ತರದ ತಲೆದಿಂಬಿಲ್ಲದೇ ನಿದ್ದೆ ಬಾರದು. ಆ

ಕೊಠಡಿಯಲ್ಲೋ ಅದಕ್ಕೆ ಲಾಯಕ್ಕಾದ ಒಂದೂ ವಸ್ತುವಿಲ್ಲ. ಲಗಮು ಕಾಕಾ ತಡಮಾಡಲಿಲ್ಲ, ಹೊರಗೆ ಹೋದ. ಮೈಲಿಗಲ್ಲಿಗೆಂದು ಹಿಂದಿನ ದಿನ ನನ್ನ ಕಣ್ಣೆದುರೇ ಮೂರು ಜನ ಕೂಡಿ ಚಕ್ಕಡಿಯಿಂದ ಕೆಳಗಿಳಿಸಿದ್ದ, ಎರಡೂವರೆ ಅಡಿ ಉದ್ದದ ಕಲ್ಲನ್ನು ನಿರಾಯಾಸವಾಗಿ ಎತ್ತಿ ತಂದ. ತಲೆಬದಿಗಿಟ್ಟುಕೊಂಡು ತಲೆಯೂರಿದ. ಅರ್ಧಗಂಟೆಯಷ್ಟಾಗುವಷ್ಟರಲ್ಲೇ ಅದೂ ಇದೂ ಮಾತನಾಡುತ್ತ ಗೊರಕೆಗೆ ಶರಣಾದ.

ಮುಂದೆ ಅಲ್ಲಿದ್ದ ಎರಡು ವಾರಗಳವರೆಗೂ ಇದೇ ಆತನಿಗೆ ತಲೆದಿಂಬು. ಹಗಲಲ್ಲಿ ನಮ್ಮ ಭೇಟಿಗೆಂದು ಬಂದ ಸಂಬಂಧಿಕರಿಗೆಲ್ಲ ಇದೊಂದು ವಿಸ್ಮಯದ ಸಂಗತಿ. ಇದೇಕೆ, ಅದೂ ಸರಕಾರದ ಸ್ವತ್ತಾದ ಇದು ಇಲ್ಲಿಗೇಕೆ ಬಂತು ಎಂಬಂತೆ ಹುಬ್ಬೇರಿಸಿದಾಗ ನಮಗೋ ಪೀಕಲಾಟ.

ಆದರೆ ಇದೇ ಕಲ್ಲು ಮತ್ತೊಂದು ಮೋಜಿನ ಪ್ರಸಂಗಕ್ಕೆ ಎಡೆಮಾಡಿಕೊಟ್ಟಿತು. ಅದು ೧೯೭೦ರ ಬೇಸಿಗೆ. ಆರು ತಿಂಗಳ ಹಿಂದಷ್ಟೇ ಕೊಯ್ನಾದಲ್ಲಾಗಿದ್ದ ಭೂಕಂಪದ ಝಟಕು ನಮ್ಮೂರವರೆಗೂ ತಲುಪಿತ್ತು. ಭೂಕಂಪದಂಥ ನೈಸರ್ಗಿಕ ವಿಕೋಪಕ್ಕೆ ಅದುವರೆಗೆ ಎಂದೂ ಒಳಗಾಗದ ನಮ್ಮೂರ ಜನರಲ್ಲಿ ಅನೇಕರಿಗೆ ಇದು ಎದೆನಡುಕಕ್ಕೂ, ಮಾನಸಿಕ ವ್ಯಾಧಿಗೂ ಕಾರಣವಾಗಿತ್ತು. ರಾತ್ರಿ ಹೊತ್ತು ನೆಲ ನಡುಗಿದಂತೆ, ಪಾತ್ರೆ - ಪರಡಿ ಅಲುಗಿದಂತೆ ಕೊಂಚ ಭಾಸವಾದರೂ ಸಾಕು ಇದ್ದಬಿದ್ದ ಸ್ಥಿತಿಯಲ್ಲೇ ಜನರೆಲ್ಲ ಬೀದಿಗೆ ಬಂದು ನಿಲ್ಲುತ್ತಿದ್ದರು. ಹೀಗೊಂದು ರಾತ್ರಿ ನಾವೆಲ್ಲ ಆ ಧರ್ಮಶಾಲೆಯ ಕೊಠಡಿಯಲ್ಲಿ ಮಲಗಿದ್ದಾಗ ಪಾತ್ರೆಗಳು ಉರುಳಿದ ಶಬ್ದವಾಯಿತು. ನಮ್ಮನ್ನೊಳಗೊಂಡು ಜನವೆಲ್ಲ ಹೊರಗೋಡಿದರು. ಆಗ ಎಲ್ಲರ ಕಣ್ಣೂ ನಮ್ಮ ಲಗಮು ಕಾಕಾನ ಮೇಲೆಯೇ. ಗಾಢ ನಿದ್ದೆಯಲ್ಲಿದ್ದ ಲಗಮು ಕಾಕಾ ನಾನೇ ಬದಿಗೆ ಮಲಗಿರುವೆನೆಂದು ಭಾವಿಸಿ ಧಡಬಡಾಯಿಸಿ ಓಡಿ ಬರುವಾಗ ಆ ಎಂಭತ್ತು ಕೆ.ಜಿ. ಭಾರದ ಕಲ್ಲನ್ನೇ ಎತ್ತಿತಂದಿದ್ದ!

ಅಂದು ಆದದ್ದಿಷ್ಟೇ. ನಮ್ಮ ಕೊಠಡಿಯ ತೆರೆದ ಕಿಟಕಿಯಿಂದ ಒಳ ಸೇರಿದ್ದ ಬೆಕ್ಕು ಹಾಲಿನ ಗಡಿಗೆಗೆ ಬಾಯಿ ಹಾಕಿತು. ಹಾಲು ತಳಸೇರಿದಾಗ ಗಡಿಗೆಯೊಳಗೆ ತಲೆ ಸೇರಿಸಿತು. ಹಾಲು ಕುಡಿದಾದ ಮೇಲೆ ತಲೆ ಹೊರಗೆ ಬರದಾದಾಗ ಗಾಬರಿಯಲ್ಲಿ ತಲೆಯಲ್ಲಾಡಿಸುತ್ತ, ಆ ಗಡಿಗೆಯಿಂದ ಸುತ್ತಲಿನ ಪಾತ್ರೆಗಳನ್ನು ಬಡಿದಾಗ ಎಲ್ಲ ಇಸ್ಪಿಟೆಲೆಗಳಂತೆ ಉರುಳಿದಾಗ ಆದ ಶಬ್ದವೇ ಇದು. ಈ ಬಡಿತಕ್ಕೆ ಗಡಿಗೆಯೇನೋ ಒಡೆಯಿತು. ಆದರೆ ಗಡಿಗೆಯ ಕುತ್ತಿಗೆ ಮಾತ್ರ ಕಂಠೀಹಾರದಂತೆ ಬೆಕ್ಕಿನ ಕೊರಳಲ್ಲಿ ಮೆರೆಯುತ್ತಲೇ ಇತ್ತು.

ಆದರೆ ಈ ಹತ್ತು ದಿನಗಳವರೆಗೂ ಜನರ ಕುತೂಹಲಕ್ಕೆ ಆಹಾರವಾದದ್ದು ಈ ಬೆಕ್ಕಿನ ನೆಕ್‌ಲೆಸ್‌ಗಿಂತ, ಕೂಸಿನಂತೆ ಲಗಮು ಕಾಕಾನ ಕಂಕುಳನ್ನಲಂಕರಿಸಿದ್ದ ಆ ಮೂರಡಿ ಉದ್ದದ ಕಲ್ಲೇ!

ಒಮ್ಮೆ ಲಗಮು ಕಾಕಾ ತುಂಬ ತ್ರಸ್ತಗೊಂಡಿದ್ದ. ಕುಟುಂಬದಲ್ಲಿಯ ವಿರಸ, ಹೆಂಡತಿಯ ಅನಾರೋಗ್ಯ, ಅಳಿಯನ ಮುಂಗೋಪ, ಮಗ ತೋರುತ್ತಿರುವ ಅಸಡ್ಡೆಯಿಂದ ಈತನ ಮನಸ್ಸು ರೋಸಿಹೋಗಿತ್ತು. ಮಾನಸಿಕವಾಗಿ ಸಂಪೂರ್ಣ ಕುಸಿದಿದ್ದ ಈತ ನಮ್ಮ ಮನೆಗೆ ಬಂದವನೇ ಗಳಗಳನೇ ಅತ್ತುಬಿಟ್ಟ. ನಂತರ ಸ್ವಲ್ಪ ತಹಬಂದಿಗೆ ಬಂದ ನಂತರ ಚಹಾ ಕುಡಿದಾದ ನಂತರ ಅದು ಇದು ಹೇಳುತ್ತ ಒಂದು ಮಾತು ಹೇಳಿದ – ''ಮನಷ್ಯಾಗ ಒಂದರೇ ಚಟಾ ಇರಬೇಕು. ಜೀವನದಾಗ ಒಂದೂ ಚಟಾ ಮಾಡದ್ದಕ್ಕು ನನಗ್ಹಿಂಗೆಲ್ಲ ಆಗಾಕಹತೇತಿ.'' ನಾನು ಕಕ್ಕಾಬಿಕ್ಕಿಯಾದೆ. ದಿನಬೆಳಗಾದರೆ ಚಿಕ್ಕ ಪುಟ್ಟ ಚಟಗಳ ಬಗೆಗೂ ನನ್ನ ರೋಗಿಗಳಿಗೆಲ್ಲ ಉಪದೇಶ ಕೊರೆಯುವ ನನಗೆ ಇದರ ತಳಬುಡವೇನೂ ತಿಳಿಯಲಿಲ್ಲ.

ನನ್ನ ತೆರೆದ ಬಾಯಿ ತೆರೆದಂತೆಯೇ ಇರುವುದನ್ನು ಕಂಡ ಕಾಕಾ ತನ್ನ ವಿಚಾರಗಳನ್ನು ತೊಳೆತೊಳೆಯಾಗಿ ಬಿಡಿಸಿಟ್ಟ – ''ಇದ ನನಗ ನಮ್ಮ ಮೂಕ ಬಸವಣ್ಣ ಕೊಟ್ಟ ಶಾಪಪ್ಪಾ. ಇದರಿಂದ ನಾ ಸಾಯೂತನಕ ಮುಕ್ತ ಆಗಾಕ ಸಾಧ್ಯನುಽ ಇಲ್ಲಾ.'' ನನ್ನ ಮನದಲ್ಲಿಯ ಕಗ್ಗಂಟು ಇನ್ನಷ್ಟು ಗೋಜಲು ಗೋಜಲಾಯಿತು. ''ನನ್ನ ಸ್ವಭಾವಂತೂ ನಿನಗ ಗೊತ್ತ ಐತಿ. ಎಂದೂ ಎಂಥಾ ಚಟಾನೂ ಮಾಡಿದಾವ ಅಲ್ಲಾ. ರೈತಗ ಚಹಾ ಕುಡಿಯೂದು, ಬೀಡಿ ಚುಟ್ಟಾ ಸೇದೂದು, ತಂಬಾಕ ತಿನ್ನೋದು ಇಂಥಾದ್ದೇನರ ಒಂದು ಚಟಾ ಇರಬೇಕು.'' ನನ್ನ ದಿಗಿಲು ಮುಗಿಲು ಮುಟ್ಟಿತು.

ಕಾಕಾ ಮುಂದುವರಿಸಿದ. ''ಮೂಡಲ ಹರ್‍ಯಾಕಿಂತ ಮೊದಲ, ಎತಗೋಳ ಕೊಳ್ಳ ಕಟ್ಟಿ - ಅದ ನೇಗಲ ಇರಲಿ, ರಂಟಿ, ಕುಂಟಿ, ನಂಗರಿ ಏನ ಇದ್ದರೂ ಹೊತ್ತ ನೆತ್ತಿದಾಟಿ ಎರಡ ಮಳಾ ಇಳಿಯೂ ತನಕಾ ನಾ ಬಿಟ್ಟಾವ ಅಲ್ಲ. ನನಗೂ ಒಂದ ಏನರ ಚಟಾ ಅನ್ನೂದಿದ್ದರ – ತಂಬಾಕ ತಿನ್ನಾಕೋ, ಬೀಡಿ, ಚಿಲಿಮಿ ಸೇದಾಕೋ, ತಾಸೆರಡ ತಾಸಿಗೊಮ್ಮಿ ಹತ್ತ ನಿಮಿಷರ ಕೂದ್ರತಿದ್ದಿನಿ, ಮತ್ತ ಅಷ್ಟರೆ ನಮ್ಮಪ್ಪ ಬಸವಣ್ಣಗೊಳಿಗಿ ಉಸರೆಳದಕೊಳ್ಳಾಕ ವಿಶ್ರಾಂತಿ ಸಿಗತಿತ್ತು. ದಿನಾ ಎಲ್ಲಾ ಪುರುಸೊತ್ತ ಕೊಡದ ಇಷ್ಟ ಕಷ್ಟಕೊಟ್ಟ ನನ್ನನ್ನ ಬಸವಣ್ಣ ಬಿಟ್ಟ ನಿಟ್ಟುಸಿರು ತಟ್ಟದಾಽ ಇದ್ದೀತಾಽ ?''

ನಾನು ಬೆಚ್ಚಿ ಬೆರಗಾದೆ. ಅಧ್ಯಾತ್ಮದ ಆಳಕ್ಕಿಳಿದು ಅಭ್ಯಸಿಸಿದ ಮಹಾತ್ಮರ ಚಿಂತನೆಯ ಮೂಸೆಯಲ್ಲೂ ಮೂಡಿ ಬರದ, ನಾನು ಕೇಳಿರದ ಇಂಥ ಮಾತು, ಕನ್ನಡ ಮೂರನೆ ಇಯತ್ತಾ ಕಲಿತ ಹಳ್ಳಿಹೈದನೊಬ್ಬನ ಮಿದುಳಿನಲ್ಲಿ ಮೂಡಿ ನಿಂತಿದ್ದದೆಂತು ? ಆತ್ಮ ನಿರೀಕ್ಷಣೆ ಮಾಡಿಕೊಳ್ಳುವ, ಚಿಂತನೆಯ ಒರೆಗಲ್ಲಿಗೆ ಹಚ್ಚಿದ ಎಂಥ ಹೆಡ್ಡ ತಲೆಗೂ ಎಂಥೆಂಥವೋ ವಿಚಾರಗಳು ಹೊಳೆದಾವು ! ಅಲ್ಲವೇ ?



ಡಾ॥ ಅನಿಲ ಕಮತಿ
ಕಮತಿ ಕ್ಲಿನಿಕ್, ಶಿವರಾಮ ಕಾರಂತ ನಗರ, ಯಕ್ಸಂಬಿ - ೫೯೧೨೪೪

# ಬೆಳಕಿನ ಬೆರಗು...



ಖರೇ ಜ್ಞಾನಿ ಯಾರು ? ಇದು ತಲೆತಲಾಂತರದಿಂದ ಒಬ್ಬರು ಇನ್ನೊಬ್ಬರನ್ನ ಕೇಳಿಕೋಂತ ಬಂದಿರೂ ಪ್ರಶ್ನೆ. ಆದರೂ ಇದಕ್ಕ ಗಟ್ಟಿ ಉತ್ತರ ಸಿಕ್ಕಿಲ್ಲ. ನನಗೆ ತಿಳಿದದ್ದು ಹೇಳಬೇಕು ಅಂದರ ದೇಹಾಭಿಮಾನ, ದೇಹದ ಹಸಿವು ದೂರಮಾಡಿ ದಾರಿ ತಪ್ಪಲಾರದ ನಡೆದಾಂವನು ಖರೇ ಜ್ಞಾನಿ. ಆದರ ಹೀಂಗ ನಡಿಯೂದು ಆಡಿದಷ್ಟು ಹಗುರ ಅಲ್ಲ. ಜ್ಞಾನ ಬೆಳಕು, ಅಜ್ಞಾನ ಕತ್ತಲು ಅನ್ನೊ ಸತ್ಯ ತಿಳಕೊಂಡು ಹೆಜ್ಜಿ ಇಟ್ಟಲ್ಲೆಲ್ಲಾ ಬೆಳಕ. ಹೀಂಗ ನಡಿಯುವವರು ಚಾರಾಣಿ ಮಂದಿ ಆದರ ಚಾರಾಣೆ ಮಂದಿ ಹೆಜ್ಜಿ ಇಟ್ಟಲ್ಲೆಲ್ಲಾ ಬರೇ ನರಕ. ಯಾಕ, ಹೀಂಗ್ಯಾಕ ? ಯಾಕಂದರ 'ನಾ' ಅಂಬೋ ಬೆಂಕಿ ಒಳಗಿಟಕೊಂಡು ನಡಿಯೊ ದೇಹಾಭಿಮಾನಿ ಮನುಷ್ಯ ಕತ್ತಲ ಬಣವಿ ಒಟ್ಟಾಕ ಹತ್ಯಾನಲ್ಲ ಇದಕ್ಕೇನ ಮಾಡೂದು ? ದಿನಬೆಳಗಾದರ ಮಾತ ಶುರೂ ಮಾಡೊ ಈ ಮಾತಾಡೊ ಪ್ರಾಣಿ : ''ನಾ ಹೀಂಗ, ನಾ ಹಾಂಗ, ನಾ ಇದನ್ನ ಮಾಡೇನಿ, ನಾ ಅದನ್ನ ಮಾಡೇನಿ, ನಾ ಕೊಡಾಂವಲ್ಲ, ನಾ ಬಿಡಾಂವಲ್ಲ'' ಅಂತ ಈ 'ನಾ' ಬಳಸ್ತಾನ, ನಾ ಬೆಳಸ್ತಾನ. ದಿನಕ್ಕ ಅದೆಷ್ಟು ಸಾರೆ ಈ 'ನಾ' ಅಂಬೊ ಮಿಠಕ್ಕ ಉಣಸ್ತಾನ ಅನ್ನೂದನ್ನ ಎಣಿಸೂದೂ ಸಾಧ್ಯ ಇಲ್ಲ. ಅಷ್ಟು ಸಾರೆ ಉಣಸ್ತಾನ. ಆದರ ಇಂವನ ನೆಲಿ ಎಲ್ಲಿ, ಇಂವನ ಬೆಲಿ ಏನು ಅಂತ ಅಂವಗs ಗೊತ್ತಿಲ್ಲ. ಇದs ನಮ್ಮ ನಿಮ್ಮಂತಾವರ ಪ್ರಪಂಚ. 'ನಾ' ಅಂಬೋ ನರಕದ ಬೀಜಾ ಹುರದು, ಎಲ್ಲಾರ ಕೂಡ ಬೆರದು ಬೆರಗಾಗೋ ಹಾಂಗ ಬದುಕು ಮಾಡಾಂವಗs 'ಜ್ಞಾನಿ' ಅಂತಾರ. ಇಂಥಾವರಿಗೇ 'ಸಂತರು' – ಅಂತ ಕರಿಯೋದು.

ಇಂಥಾ ಒಬ್ಬ ಸಂತ ಒಂದು ದಿವಸ ಆ ಪ್ಯಾಟೀಗೆ ಹೋಗಿದ್ದ. ಯಾವ ಪ್ಯಾಟಿ, ಹೆಂತಾ ಪ್ಯಾಟಿ ಅಂತೀರೇನು ? ಬಾಳ ದೊಡ್ಡ ಪ್ಯಾಟಿ. ದೇಶಕ್ಕs ಹೆಸರಾದ ಶಾರ ಬೆಂಗಳೂರ. ಅಲ್ಲಿ ಒಬ್ಬ ದೊಡ್ಡ ಶ್ರೀಮಂತ. ಅಂವನ ಹೆಸರs ಶ್ರೀಮಂತ. ''ಇಡೀ ಪ್ಯಾಟೀನs ಕೊಂಡರೂ ನನ್ನ ಖಾತೇದೊಳಗಿನ ರೊಕ್ಕ ತೀರಂಗಿಲ್ಲ. ಅಂಥಾ ಸಾವುಕಾರ ನಾ'' ಅಂತ ಮೆರೀತಿದ್ದಾ.

ಎಲ್ಲಿ ನೋಡಿದರೂ ಅಂವನ ಮನಿ, ಕಾಲಿಟ್ಟಲ್ಲಿ ಒಂದೊಂದು ಕಾರಖಾನಿ, ಅಂವನ ಮೋಟರ, ಅಂವನ ಥೇಟರ್, ಅಂವನ ಓಣಿ, ಅಂವನ ಅಂಗಡಿ... ಅಂವಾ ಹೊರಗ ಹೊಂಟರ ಮುಂದ ಸಾವಿರ ಮಂದಿ, ಹಿಂದ ಸಾವಿರ ಮಂದಿ. ಎಲ್ಲಾರೂ 'ಸಾವುಕಾರ' ಅನ್ನೋರು, ಎಲ್ಲಾರೂ ಜೈಕಾರ ಹಾಕುವರು. ಹಿಗ್ಗಿ ಸತ್ತಿದ್ದ ಈ ಸಾವುಕಾರ.

ಈ ಸಂತ ಆ ಪ್ಯಾಟೀಗೆ ಬಂದ ದಿವಸ ಈ ಸಾವುಕಾರನ [illegible] ಮದುವಿ ಇತ್ತು. ಓಣಿಗೆಲ್ಲಾ ಹಂದರಾ ಹಾಕಿಸಿದ್ದಾ. ಹಾದೀಗ ಹೋಗುವರೆಲ್ಲಾ ಒಳಗ ಬಂದು ಊಟಾ ಮಾಡೇ ಹೋಗಬೇಕು ಅಂಬೋ ಆದೇಶ ಅಂವಂದು. ಅಂವನ ಬಚ್ಚಾಗೋಳು ಹೋಗವರ್‍ನ-ಬರವರ್‍ನ ಕರಕೊಂಡು ಇಲ್ಲಾ [illegible]ಕೊಂಡು ಬಂದು ಊಟಾ ಮಾಡಿಸೇ ಕಳಸ್ತಿದ್ರು. ತಿರುಗಾಡ್ತಾ ತಿರುಗಾಡ್ತಾ ಈ ಸಂತ ಅದೇ ಓಣಿಗೇ ಬಂದಾ. ಸಾವುಕಾರನ ಆಳಗೋಳು ''ಬರ್ರಿ ಸಾಧು ಮುತ್ಯಾ, ಇವತ್ತು ನಮ್ಮ ಸಾವುಕಾರ್ರ ಮಗನ ಮದುವಿ ಅದ. ಒಳಗ ಬಂದು ಊಟಾ ಮಾಡಿಕೊಂಡು ಹೋಗ್ರಿ'' ಅಂದರು.

''ಬ್ಯಾಡ್ರೆಪಾ, ನನಗ ಹಸಿವಿಲ್ಲಾ'' ಅಂದ ಸಂತ.

''ಹಸಿವಿರಲಿಲ್ಲಂದ್ರ ಬಿಡ್ರಿ – ಸುಮ್ಮನ ತಾಟಿನ್ಯಾಗ ಕೈ ಇಟ್ಟು ಮದುಮಕ್ಕಳಿಗೆ ಆಶೀರ್ವಾದ ಮಾಡಿ ಹೋಗ್ರಿ'' ಅಂದರು.

''ನನ್ನ ಆಶೀರ್ವಾದಕ್ಕಿಂತ ಆ ಭಗವಂತನ ಆಶೀರ್ವಾದ ದೊಡ್ಡದು. ಅವರಿಗೆ ಒಳ್ಳೇದಾಗಲಿ. ನನಗ ಬ್ಯಾರೇ ಕಡೆ ಹೋಗಬೇಕಾಗೇತಿ. ನನ್ನ ಬಿಟ್ಟುಬಿಡ್ರಿ'' ಅಂದ.

''ಊಹೂಂ, ಸಾಧ್ಯ ಇಲ್ಲ. ಈ ಹಾದೀಲೆ ಹೋಗವರೆಲ್ಲಾ ಒಳಗ ಬಂದು ಉಂಡs ಹೋಗಬೇಕು ಅಂತ ನಮ್ಮ ಸಾವುಕಾರ್‍ರು ಆರ್ಡರ್ ಮಾಡ್ಯಾರ.''

''ನಿಮ್ಮ ಸಾವುಕಾರ ? ಯಾರಿಗೆ ಸಾವುಕಾರ ಆಂವಾ'' ? ''ಇದೇನಿದು ಹೀಂಗ ಕೇಳ್ತಾನ ಈ ಸಾಧು ! ನಮ್ಮ ಸಾವುಕಾರ - ಇಡೀ ಪ್ಯಾಟಿಗೇ ಸಾವುಕಾರ. ಈ ಊರಾಗ ನಡೀಬೇಕು ಅಂವನ ಮಾತs ಕೇಳಿದೇನು – ಸುಮ್ಮನ ಒಳಗ ಬಂದು ಉಂಡುs ಹೋಗು, ಇಲ್ಲಾಂದರ ಏನ ಹೇಳೂದು ಅವರಿಗೇ ಹೇಳಿ ಹೋಗು'' ಹೀಂಗ ರಿಕ್ಕಿಗೆ ಹಾಕಿ ಸಂತನ್ನ ಸಾವುಕಾರ ಹತ್ತರ ಕರಕೊಂಡು ಹೋದರು. ಅರಮನಿಯಂತಾ ಮನಿ, ರತ್ನಗಂಬಳಿ ಹಾಸಿದ ದರಬಾರ, ಬಂಗಾರ ತಗಡ ಬಡಿಸಿದ ಪಲ್ಲಂಗ, ಕುಷನಿ ಗಾದಿ, ಗಾದೀಮ್ಯಾಲ ಜಗ-ಮಗಾ ಅಂಗಿ ಬಟ್ಟಿ ತೊಟಗೊಂಡು, ಎಂಟೂ ಬಳ್ಳಿಗೆ ಉಂಗರಾ ಹಾಕ್ಕೊಂಡು, ಎಲಿ-ಅಡಿಕಿ ಮೆಲ್ಲಕೊಂತ ಕುಂತಿದ್ದಾ ಸಾವುಕಾರ. ಬೆಳ್ಳಿ ಬೀಸಣಿಕಿ, ಅದಕ್ಕೊಂದು ಬಂಗಾರ ಹಿಡಿಕಿ, ಸಿಂಗಾರಿ ಹೆಣ್ಣಗೋಳು ಗಾಳಿ ಬೀಸತಿದ್ದರು. ಸಂತನ್ನ ನೋಡಿದಾಂವನ ಸಾವುಕಾರ ಎದ್ದುಬಂದು ನಮಸ್ಕಾರ ಮಾಡಿದ. ಸಂತ ಆಶೀರ್ವಾದ ಮಾಡಿದ.

## ಬಿ. ಆರ್. ಪೋಲೀಸ್ ಪಾಟೀಲ

''ನೀವೀಗ ಎಷ್ಟು ಹೊಗ್ತದ ಅಷ್ಟು ಉಂಡು ಆಶೀರ್ವಾದ ಮಾಡಿಹೋಗ್ರಿ ಸಂತರ'' ಅಂದು ಕೈಮುಗದ.

''ಬೇಶಿ, ಬೇಶಿ, ಸಂಪತ್ತಿದ್ದರೂ ಸಂಪನ್ನ ಕಾಣತಾನ ಈ ಮನುಷಾ'' ಅನಿಸ್ತು ಒಳಗೊಳಗ ಮ್ಯಾಲ, ''ಬ್ಯಾಡ್ರಿ ಸಾವುಕಾರ, ನನಗ ಹಸಿವಿಲ್ಲ'' ಅಂದಾ.

''ಅದೇನ್ ನಡ್ಯೂದಿಲ್ಲರಿ ಸಂತರ, ನೀವು ಉಂಡು ಹೋಗಬೇಕು''ಬಲೆ ಆಗ್ರಹ ಮಾಡಿದ.

''ನನಗ ಒತ್ತಾಯ ಮಾಡಬ್ಯಾಡ್ರೆಪಾ, ಹಸಿದ ಲಕ್ಷ-ಲಕ್ಷ ಮಂದಿ ಅದಾರಲ್ಲ ಅವರ ಕಡೆ ಲಕ್ಷ್ಯ ಹಾಕರಿ. ಕರದು ಅನ್ನಾ ಹಾಕರಿ. ನಿಮಗ ಪುಣ್ಯಾ ಬಂದೀತು.''

''ಅವರಿಗೂ ಹಾಕ್ತೀವಿ, ನಿಮಗೂ ಹಾಕ್ತೀವಿ. ನಾವು ಇಷ್ಟೆಲ್ಲಾ ಮಾಡೀವಿ ಅಂದ್ರೇನು, ನೀವು ಉಣಾಂಗಿಲ್ಲ ಅಂದ್ರೇನು ! ನಮ್ಮ ಸಾವುಕಾರ ಉಗುಳ ಇಲ್ಲಿಮಟಾ ಯಾರೂ ದಾಟಿಲ್ಲ. ಸುಮ್ಮನ ಬರ್ರಿ ಒಳಗ, ಎಷ್ಟು ಕಪ್ಪಸ್ತದ ಅಷ್ಟು ಊಟಾ ಮಾಡ್ರಿ'' ಬಾಳಂದ್ರ ಬಾಳ ಒತ್ತಾಯ ಮಾಡಿದ ಕಾರಭಾರಿ.

''ಹಾಂಗಾದರ ನಂದೊಂದು ಪ್ರಶ್ನಾ ನಿಮ್ಮ ಸಾವುಕಾರ್ರಿಗೆ, ಕೇಳಲೇನು ?''

''ಕೇಳ್ರಿ ಸಂತರ, ನನಗ ತಿಳದದ್ದು ಹೇಳ್ತೇನಿ'' ಅಂದ ಸಾವುಕಾರ.

''ಸಾವುಕಾರ್ರ, ಈ ಜೀವ ಧರಿತ್ರಿ ಧರಿಗೆ ಬಂದಮ್ಯಾಲ ನೀವು ಏನೇನು ಮಾಡೀರಿ ?''

''ಹೂಂ – ಅದೊಂದು ದೊಡ್ಡ ಕಥಿ. ನಮ್ಮಪ್ಪಾ [illegible] ದೊಡ್ಡ ಸಾವುಕಾರ. ಅದರ ದುರ್ದೈವದಿಂದ ವ್ಯಾಪಾರದೊಳಗ [illegible] ತಗಿದು ಈ ಪ್ಯಾಟೀಗೆ ಬಂದು ಫುಟ್‌ಪಾಥ್‌ಮ್ಯಾಲೆ ನನ್ನ, ನನ್ನ [illegible]

[illegible]

ಒಡಿಹೋದ. ನಾನು ಥಂಡ್ಯಾಗ ನಡಗಕೋಂತ ಮನೀಮನೀಗೆ ಪೇಪರ ಹಾಕಿದೆ. ಹಮಾಲಿ ಮಾಡಿದೆ, ಆಳಿನ ಕೈಯ್ಯಾಗ ಆಳಾಗಿ ದುಡದು ಆ ಫುಟ್‌ಪಾಥ್‌ಲಿಂದ ಈ ಅರಮನಿತನಕ ಬೆಳದೆ...''

''ಎಷ್ಟು ಬೆಳದಾರ ನಮ್ಮ ಸಾವುಕಾರ್ರು ಅಂದರ...''

''ಗೊತ್ತಾಯ್ತಲ್ರಿ, ಕಾರಭಾರಿಗೋಳ, ಬಾಳಂದ್ರ ಬಾಳ ಬೆಳದಾರ ನಿಮ್ಮ ಸಾವುಕಾರು. ಅಂದಾಂಗ ಸಾವುಕಾರ, ನಿಮ್ಮ ಮನ್ಯಾಗ ಏನೇನು ಅದಾವ ?''

''ಏನದಾವ ಅಂತ ಕೇಳ್ತೀರಲ್ರೀ, ಏನಿಲ್ಲಾ ಅಂತ ಕೇಳ್ರಿ. ನೀವು ಏನ್ ಕೇಳ್ತೀರಿ ಅದೆಲ್ಲಾ ಅದ. ಲಕ್ಷ್ಮಿ ಕಾಲ ಮುರಕೊಂಡು ಬಿದ್ದಾಳ. ನಮ್ಮ ಸಾವುಕಾರ ಮನಿಯೊಳಗ.''

''ಆಯ್ತಿ ಕಾರಭಾರಿಗೋಳ, ನಿಮ್ಮ ಸಾವುಕಾರ ಮನ್ಯಾಗ ಜಗತ್ತಿನ – ನಕಾಶ ಅದ ಏನು ?''

ಸಾವುಕಾರ ಸನ್ನಿ ಮಾಡಿದಾ. ಆಳುಗೋಳು ಆಳೆತ್ತರದ ಗ್ಲೋಬ್, ಹೊತಗೊಂಡು ಬಂದು ಇಟ್ಟರು.

''ಇದರೊಳಗ ನಿಮ್ಮ ದೇಶ ಯಾವುದು ಅಂತ ತೋರಸ್ತೀರೇನು ?'' ಸಾವುಕಾರ ಬಂಗಾರ ಚಡಿ ತರಿಸಿ ತನ್ನ ದೇಶ ತೋರಿಸಿದಾ...

''ನಿಮ್ಮ ಪ್ರಾಂತ ತೋರಸ್ರಿ'' ಅಂದಾ.

ಅದನ್ನೂ ಬಂಗಾರದ ಚಡೀಲೆ ತೋರಿಸಿದ ಸಾವುಕಾರ.

''ನಿಮ ಶಾರ ?''

ಕಷ್ಟಪಟ್ಟು ಹುಡಿಕ್ಯಾಡಿ ಅದನ್ನೂ ತೋರಿಸಿದಾ.

''ಈ ಶಾರದೊಳಗ ನಿಮ್ಮ ಮನಿ, ನಿಮ್ಮ ಕಾರಖಾನಿ, ನಿಮ್ಮ ಶಾರ, ನೀವು ಹಾಕಿಸಿದ ಹಂದರಾ... ತೋರಸ್ರಿ ನೋಡೂಣು...'' ಅಂದಾ ಸಂತ. ಸಾವುಕಾರ ಕಣ್ಣಿಗೆ ಕತ್ತಲ ಬಂತು. ಮೈಮ್ಯಾಲ ಬೆವರ ನೀರಾಗಿ ಹರೀತು. ಉದ್ದಕ ಸಂತರ ಕಾಲಿಗೆ ಬಿದ್ದಾ.

''ನಾ ಬಾಳ ದೊಡ್ಡ ತಪ್ಪ ಮಾಡಿದೆ, ನನ್ನ ಕ್ಷಮಾ ಮಾಡ್ರಿ, ನನ್ನ-ನಿಮ್ಮ ಶಿಷ್ಯಾ ಅಂತ ಸ್ವೀಕಾರ ಮಾಡ್ರಿ'' ಅಂದಾ.

''ನನ್ನ ಶಿಷ್ಯಾ ಆಗಬೇಕಾದರ ನಿಮ್ಮ ಈ ಸಿರಿ, ಸಂಪತ್ತು ಎಲ್ಲಾ ಬಿಟ್ಟು ಬರಬೇಕಲ್ಲ ?''

''ತಪ್ಪಾತು ಸಂತರ. ಸಿರಿ-ಸಂಪತ್ತು ಎಲ್ಲಾ ಮೋಡದೊಳಗಿನ ಬಿಸಲಿದ್ದಾಂಗ ಅಂತ ಈಗ ತಿಳೀತು. ಖರೇ ಸಾವುಕಾರ ನಾ ಅಲ್ಲ, ನೀವು... ನಾನು ದಟ್ಟದರಿದ್ರ ಮನುಷಾ.''

''ತಪ್ಪು, ನಾನೂ ನಿಮ್ಮಾಂಗ ಒಬ್ಬ ಸಾಮಾನ್ಯ ಮನುಷ್ಯಾ. ಖರೇ ಸಾವುಕಾರ ಅಂದರ ಯಾರಿಗೆ ಏನ್‌ಬೇಕು ಅಂತ ತಾನss ತಿಳದು ಕೊಡ್ತಾನಲ್ಲ ಆ ಸೃಷ್ಟಿಕರ್ತ. ಅಂವಾ ಏನ್ರೆಪಾ.''

''ಅದಕ್ಕss ಹೇಳಿದ್ನೆಲ್ಲ ಸಂತರ... ಇದೆಲ್ಲಾ ಸುಳ್ಳು. ಇದನ್ನು ಈಗಿಂದೀಗ ಬಿಟ್ಟು ನಿಮ್ಮ ಕೂಡ ಬರ್ತೀನಿ, ನನ್ನನ್ನ ನಿಮ್ಮ ಶಿಷ್ಯಾ ಅಂತ ಸ್ವೀಕಾರ ಮಾಡ್ರಿ.''

''ಬಿಡೂದು ಅಂದರ ಈ ಸಿರಿ, ಈ ಸಂಪತ್ತು ಮಾತ್ರ ಅಲ್ಲ, ಈ ಸಂಪತ್ತಿನ ಕೂಡ ಒಳಗ ಬರ್ತದ ಅಲ್ಲಾ, ಈ 'ನಾ' ಅಂಬೋ ಮುಖಾ, 'ನಾ' ಅಂಬೋ ಮಿಕಾ, ಇದನ್ನ ಹೊರಗ ಹಾಕಿ ಸಂಪತ್ತಿನ ಸದುಪಯೋಗ ಮಾಡಿಕೋಬೇಕು. 'ನಾ' ಮರಿ ಆಗಿ 'ನಾವು' ಮೆರೀಬೇಕು. ಮುಳಗೋದನ್ನ ತೇಲಿಸೊ ತೆಪ್ಪ ಆಗಬೇಕು.''

''ನಾ ಇದನ್ನ ತಿಳದು ಬಾಳಬೇಕು, ತಿಳಿ ಬಾಳಿರಬೇಕು, ಯಾರ್ಯಾರೊ ಯಾವಯಾವದೊ ಕೆಲಸಕ್ಕ ಕಾಲಾಡಿಸಿ ಕಲತ ಮಾಡಿದ್ದನ್ನ ಕಲತು ಬದುಕಿ ತಿಳಿಮಾಡಬೇಕು, ಅಲ್ಲೀ ತನಕ ಇಲ್ಲೇ ಇರಬೇಕು, ಚೆಂದಾಗಿ ಜಾತ್ರಿ ಮಾಡಬೇಕು. ಆ ಭಗವಂತನ ಆದೇಶ ಆದ ದಿವಸ ನಾನೇ ಬಂದು ನಿನ್ನ ಕರಕೊಂಡು ಹೋಗ್ತೀನಿ.''

ಸಂತ ನಡದ ಹಾದೀ ತುಂಬಾ ಬೆಳ್ಳಂಬೆಳಗ. ಈ ಬೆಳಕಿನ ಬೆರಗನ್ನ ನೋಡಿಕೋಂತ ನಿಂತೇ ಇದ್ದ ಸಾವುಕಾರ.

ಬಿ. ಆರ್. ಪೋಲೀಸ್ ಪಾಟೀಲ
'ವಾತ್ಸಲ್ಯ', ಸೋಮವಾರಪೇಟೆ, ಬನಹಟ್ಟಿ
ಬಾಗಲಕೋಟೆ ಜಿಲ್ಲೆ

# ಮೂಗಾಯಣ

**ನಮ್ಮ ಮೂಗು ಬಹು ಉಪಯೋಗಿ ಸಾಧನ. ಅದು ಹೇಗೆ ಅಂತೀರಾ ? ಎಲ್ಲರ ಚಾಳೀಸಿಗೆ ಮೂಗೇ ಆಸರೆ. ಮೂಗೇ ಇಲ್ಲದಿದ್ದರೆ ಚಾಳೀಸಿನ ವಿನ್ಯಾಸವನ್ನೇ ಬದಲಿಸಬೇಕಿತ್ತು. ಕಾಂಟ್ಯಾಕ್ಟ್ ಲೆನ್ಸ್ ಬಂದು ಈ ಭಾರ ಈಗ ಕಡಿಮೆಯಾಗಿದೆ ಅನ್ನಿ. ನಮ್ಮ ಹೆಂಗೆಳೆಯರ ಮುಖದಲ್ಲಿ ಮೂಗೇ ಪ್ರಮುಖವಾಗಿ ಎದ್ದು ಕಾಣೋದು. ಯಾಕೆಂದರೆ ಅವರ ಮೂಗಿನಲ್ಲಿ ತರಹೇವಾರಿ ಮೂಗುತಿಗಳು ಮಿನುಗುತ್ತಿರುತ್ತವೆ. ಅಷ್ಟೇ ಅಲ್ಲ, ಹೆಂಗಸರು ತಮ್ಮ ಮೂಗನ್ನು ಒಮ್ಮೆ ಎಡಕ್ಕೆ ಮತ್ತೊಮ್ಮೆ ಬಲಕ್ಕೆ ಮುರಿದು ಮತ್ತೊಬ್ಬರನ್ನು ಹೀಗಳೆಯುವುದನ್ನು ನೋಡಬೇಕು. ನಮ್ಮ ಸಂವಹನ ಕ್ರಿಯೆಯಲ್ಲಿಯೂ ನಮ್ಮ ಮೂಗು ನಮಗರಿವಿಲ್ಲದಂತೆ ಭಾಗವಹಿಸುವುದು. ನಾವು ಮಾತನಾಡುವಾಗ ಮೂಗು ತುರಿಸಿದರೆ ಏನೋ ಮುಚ್ಚಿಡುತ್ತೇವೆ ಎಂದು ಮತ್ತೊಬ್ಬರಿಗೆ ಸುಲಭವಾಗಿ ತಿಳಿದುಬಿಡುತ್ತದೆ.**

ಬರೆಯುವ ಮೊದಲು ವಿಷಯದ ಆಯ್ಕೆ ಮಾಡಬೇಕು. ಅದು ಸುಲಭದ ಮಾತಲ್ಲ. ಮಾಹಿತಿಯ ಸಮುದ್ರದಲ್ಲಿ ವಿಷಯಗಳಿಗಾಗಿ ಜಾಲಾಡಬೇಕು. ಸಿಕ್ಕ ವಿಷಯಗಳನ್ನು ಬಲೆಯಲ್ಲಿ ಕೂಡಿಡಬೇಕು. ಅವುಗಳಲ್ಲಿ ಕೆಲವು ಜೊಳ್ಳು, ಮತ್ತೆ ಕೆಲವು ಗಟ್ಟಿ. ಗಟ್ಟಿಯಾದದ್ದನ್ನು ಆಯ್ದುಕೊಳ್ಳಬೇಕು. ವಿಷಯ ಅಸಾಮಾನ್ಯವಾಗಿದ್ದರೆ ಬರಹ ಓದುಗರನ್ನು ಆಕರ್ಷಿಸಬಲ್ಲದು. ಆಯ್ದ ವಿಷಯದ ಚಿಂತನವಾಗಬೇಕು, ಮಂಥನವಾಗಬೇಕು. ಆ ವಿಷಯದ ಮೇಲೆ ಮಲಗಬೇಕು. ವಿಷಯ ನಮ್ಮನ್ನು ನಿದ್ದೆಗೆಡಿಸಬೇಕು. ಕನಸು ಕಾಣಬೇಕು. ನಿದ್ದೆಗೆಟ್ಟು ಬರೆದಾಗ ಉತ್ತಮ ಬರಹ ಉದಯಿಸುವುದು.

'ಮೂಗಾಯಣ' ಇಂಥ ಒಂದು ವಿಷಯವಾಗಬಲ್ಲದೇ ? ಈ ಪ್ರಶ್ನೆ ಗ್ರೀಕ್ ಹಾಗೂ ರೋಮನ್ನರಿಂದ ಹಿಡಿದು ೨೧ನೇ ಶತಮಾನದ ಲೇಖಕರನ್ನೂ ಕಾಡಿದೆ. ಮೂಗಿನ ಬಗ್ಗೆ ಬರೆಯುವುದೇ ಒಂದು ಸಾಹಸ. ಗ್ಯಾಬ್ರಿಲ್ಲೆ ಗ್ಲೇಸರ್ ಎಂಬ ಅಮೆರಿಕೆಯ ಪತ್ರಕರ್ತೆ ಮೂಗಿನ ಬಗ್ಗೆಯೇ ಒಂದು ಪುಸ್ತಕ ಪ್ರಕಟಿಸಿದ್ದಾರಂತೆ. ಅಂದರೆ, ಮೂಗು ನಮ್ಮ ದೇಹದ ಬರಿ ಒಂದು ಸಾಧಾರಣ ಅಂಗವಲ್ಲ, ಅದು ಸೌಂದರ್ಯ, ಲೈಂಗಿಕತೆಗಳಿಗೇ ಅಲ್ಲದೆ ಜೀವಂತವಾಗಿರಲು ಬೇಕಾಗಿರುವ ಅತ್ಯವಶ್ಯವಾದ ಜೀವನಾಧಾರದ ಕೋನಶಿಲೆಯಂತೆ. ಇಂಥ ಒಂದು ಕ್ಲಿಷ್ಟ ವಿಷಯವನ್ನಾಯ್ದು ವಿಜ್ಞಾನಿಗಳ, ಉದ್ಯಮಿಗಳ, ಸಾಹಿತ್ಯಾಸಕ್ತರ ಗಮನ ಸೆಳೆದ ಗ್ಲೇಸರ್ ಅವರ ಧೈರ್ಯ ಮತ್ತು ಸಾಹಸವನ್ನು ಮೆಚ್ಚಲೇಬೇಕು, ಏಕೆಂದರೆ ಮೂಗಿನ ವಿಷಯವೇ ಅಂಥಾದ್ದು.

ನನಗೆ ಮೂಗು ಎಂದರೆ ಬಹಳ ಪ್ರೀತಿ. ಯಾಕೆ ಗೊತ್ತೆ? ಮೊದಲ ನೋಟದಲ್ಲಿ ನನ್ನಾಕೆಯ ಮೂಗು ನೋಡಿಯೇ ನಾನು ಮೋಹಿತನಾದದ್ದು. ಈ ಲೇಖನ ಬರೆಯಲಿಕ್ಕೆ ಅದೂ ಒಂದು ಪ್ರೇರಣೆ ಅನ್ನಿ. ಹ್ಯಾಗೆ ಅಂತ ಅದರ ವರ್ಣನೆಗೆ ಪಟ್ಟುಹಿಡಿಯಬೇಡಿ, ಅದು ನನಗೆ ಮಾತ್ರ ಸುಂದರವಾಗಿ ಕಾಣೋದು. 'ಸೌಂದರ್ಯವೆಂಬುದು ನೋಡುವವರ ಕಣ್ಣಲ್ಲಿರುತ್ತದೆ' ಎಂದು ಹೇಳೋದನ್ನ ನೀವು ಕೇಳಿರಬೇಕಲ್ಲವೆ ?

ಆನೆಯ ಮೂಗಿಗೆ ಹೋಲಿಸಿದರೆ ನಮ್ಮ ಮೂಗು ತೀರ ಚಿಕ್ಕದು. ವಾಸನೆಯನ್ನು ಗುರುತಿಸುವುದರಲ್ಲಿ, ಮುಖದ ಸೌಂದರ್ಯ ವರ್ಧಿಸುವುದರಲ್ಲಿ, ಮಾನಸಿಕ ಆರೋಗ್ಯ ಕಾಪಾಡುವುದರಲ್ಲಿ, ಸಾಮಾಜಿಕ ಜೀವನದಲ್ಲಿ ನಮ್ಮ ಅಂತಸ್ತನ್ನು ವೃದ್ಧಿಸುವುದರಲ್ಲಿ ಅದರ ಪಾತ್ರ ಹಿರಿದು. ಮೂಗು ಸುಂದರವಾಗಿದ್ದರೆ ಅದು ಸಾಧ್ಯ. ಸ್ವಲ್ಪ ದಪ್ಪವಾಗಿದ್ದರೆ ? ಸೀಳು ಮೂಗಾಗಿದ್ದರೆ ? ಸೊಟ್ಟ ಮೂಗಾಗಿದ್ದರೆ ? ಏರು ಮೂಗಾಗಿದ್ದರೆ ? ಅದನ್ನು ಮರೆಮಾಚಿ ಸೌಂದರ್ಯ ಹೆಚ್ಚಿಸಲು ಸಾಧ್ಯವೆ ? ಸಾಧ್ಯ ಎನ್ನುವುದಕ್ಕೆ ಮೈಕಲ್ ಜಾಕ್ಸನ್ ಸಾಕ್ಷಿ. ಅವನು ಮೂರು ನಾಲ್ಕು ಸಲ ತನ್ನ ಮೂಗಿನ ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಂಡಿದ್ದಾನಂತೆ.

ಮೂಗು ಚಿಕ್ಕದಾದರೂ ಮೂಗಿನ ಕಾರ್ಯವೈಖರಿ ದೊಡ್ಡದು. ಅಷ್ಟೇ ಕ್ಲಿಷ್ಟವಾದದ್ದು ಕೂಡ. ಒಂದು ಕ್ಷಣ ಮೂಗಿನ ಸುತ್ತ ಸುಳಿಯೋದಾದರೆ, ಸುವಾಸಿತಗಳಿಂದ ಹಿಡಿದು ಪ್ಲಾಸ್ಟಿಕ್ ಸರ್ಜರಿಯವರೆಗೆ ವಿಷಯಗಳು, ಸಮಸ್ಯೆಗಳು, ಸಮಾಧಾನಗಳು ನಮ್ಮೆದುರು ಹಾಯ್ದುಹೋಗುತ್ತವೆ. ಮೂಗಿನ ಬಗ್ಗೆ ಸಾವಿರಾರು ಸಂಶೋಧನೆಗಳು ನಡೆದರೂ ಹೊರಬಂದ ಸಂಗತಿಗಳು ತೀರ ಕಡಿಮೆ. ನಮ್ಮ ಕಣ್ಣು, ಕಿವಿಗಳಿಗಿಂತ ಮೂಗು ಕಾಂಪ್ಲೆಕ್ಸ್ ಅಂಗ. ಕ್ಲಿಯೋಪಾತ್ರಾಳಿಂದ ಮೈಕಲ್ ಜಾಕ್ಸನ್‌ವರೆಗೆ, ಮೂಗಿನ ಗಾತ್ರ, ವಿನ್ಯಾಸ, ವೈಚಿತ್ರ್ಯ, ವೈವಿಧ್ಯಗಳ ಪುರಾಣ ವಿಸ್ತಾರಗೊಳ್ಳುತ್ತ ಹೋಗುತ್ತದೆ.

ನಮ್ಮ ಉಸಿರಿಗೆ ದಾರಿ ನಮ್ಮ ಮೂಗು. ಅಷ್ಟೇ ಅಲ್ಲ, ಅದು ಏರ್‌ಕಂಡಿಶನರ್ ಇದ್ದಹಾಗೆ. ಏರ್‌ಕಂಡಿಶನರ್ ಏನ್ ಮಾಡುತ್ತೆ? ಹವಾಮಾನದಲ್ಲಿಯ ಉಷ್ಣತೆಯನ್ನು ಗುರುತಿಸುತ್ತದೆ, ಅಳೆಯುತ್ತದೆ ಮತ್ತು ನಿಯಂತ್ರಿಸುತ್ತದೆ. ಹಾಗೆಯೇ ನಮ್ಮ ದೇಹ ಸೇರುವ ಹವೆಯಲ್ಲಿಯ ಉಷ್ಣತೆಯನ್ನು ಗುರುತಿಸಿ, ಅಳೆದು, ನಿಯಂತ್ರಿಸಿ ಒಳಗೆ ಬಿಡುವ ಶಕ್ತಿ ಮೂಗಿಗುಂಟು. ಹವಾಮಾನದ ಉಷ್ಣತೆ ಹೆಚ್ಚಿದ್ದರೆ ಕಡಿಮೆ ಮಾಡಿ ಅಥವಾ ಕಡಿಮೆ ಇದ್ದರೆ ಹೆಚ್ಚುಮಾಡಿ ಪುಪ್ಪುಸಕ್ಕೆ ಕಳಿಸುತ್ತದೆ. ಒಂದು ದಿನದಲ್ಲಿ ಒಬ್ಬ ವಯಸ್ಕ ೧೮ ಸಾವಿರದಿಂದ ೨೦ ಸಾವಿರ ಲೀಟರ್ ಹವೆಯನ್ನು ಒಳಸೇರಿಸಿ ಹೊರಗೆ ಬಿಡುತ್ತಾನಂತೆ. ಅಂದ ಮೇಲೆ ನಮ್ಮ ಮೂಗು ಎಂಥ ಶಕ್ತಿಯುತ ಏರ್‌ಕಂಡಿಶನರ್ ಎಂಬುದನ್ನು ನೀವೆ ಊಹಿಸಿ.

ಮೂಗು ಫಿಲ್ಟರ್ ಕೂಡ ಹೌದು. ಯಾಕೆ ಗೊತ್ತೆ? ನಿಮ್ಮ ಮೂಗಿನಲ್ಲಿ ಕೂದಲುಗಳು ಬೆಳೆದಿರುವುದನ್ನು ನೀವು ಕಂಡಿರಬೇಕಲ್ಲವೆ ? ಈ ಕೂದಲುಗಳನ್ನು ಬುಡಸಹಿತ





■ ಪ್ರೊ|| ಆರ್. ಪಿ. ಪುನಗಿನ

ಕೇಳಬೇಡಿ. ಹವೆಯಲ್ಲಿಯ ಅತೀ ಸೂಕ್ಷ್ಮ ಕ್ರಿಮಿಗಳು ನಮ್ಮ ದೇಹ ಪ್ರವೇಶಿಸದಂತೆ ತಡೆಯುವಲ್ಲಿ ಈ ಕೂದಲುಗಳು ಬಹು ಉಪಯೋಗಿ. ಇತ್ತೀಚಿನ ಟಿ.ವಿ. ವಾಣಿಜ್ಯ ವಿಜ್ಞಾಪನೆಯನ್ನು ನೀವು ನೋಡಿರಬೇಕು, ಕೇಳಿರಬೇಕು. ಮಹಾದೇವನ್ ಓಡಿ ಬಂದು ಒಬ್ಬ ಗೃಹಿಣಿಯ ಮುಂದೆ ಒಂದು ತೊಳೆದ ತಾಟು ಹಿಡಿಯುತ್ತಾನೆ. ''ಇದರಲ್ಲಿ ನಿಮಗೆ ಚಿಕನ್ ಕಾಣ್ತಾ ಇದೆಯಾ ?'' ಅಂತ ಕೇಳತಾನೆ. ಅದಕ್ಕೆ ಹೌಹಾರಿದ ಅವಳು ''ಎಲ್ಲಿ! ನನಗೆ ಕಾಣತಾ ಇಲ್ಲ'' ಅಂತಾಳೆ. ಆಗ ಮಹಾದೇವನ್ ಹೇಳತಾನೆ, ''ನಿಮ್ಮ ಕಣ್ಣನ್ನು ನಂಬಬೇಡಿ, ನಿಮ್ಮ ಮೂಗನ್ನು ನಂಬಿ'' ಎಂದು. ಕೂಡಲೇ ಆ ಗೃಹಿಣಿ ಅದೇ ತಾನೆ ತೊಳೆದು ಸ್ವಚ್ಛ ಮಾಡಿದ ಆ ತಾಟನ್ನು ಮೂಸಿ ನೋಡತಾಳೆ, ಚಿಕನ್ ವಾಸನೆ ಅವಳ ಮೂಗಿಗೆ ಬಡಿಯುತ್ತೆ.

ವಾಸನೆ ಅಂದ ತಕ್ಷಣ ನೆನಪಾಯಿತು. ಒಂದು ಲಕ್ಷ ಹತ್ತು ಸಾವಿರ ನಮೂನೆಯ ವಾಸನೆಗಳು ನಮ್ಮ ಸುತ್ತಲಿನ ವಾತಾವರಣದಲ್ಲಿ ಇವೆಯಂತೆ. ನಮ್ಮ ಮೂಗು ೧೦೦ರಿಂದ ೨೦೦ ವಾಸನೆಗಳನ್ನು ಮಾತ್ರ ಗ್ರಹಿಸಲು ಶಕ್ಯವಂತೆ. ಆದರೆ ಸೌಂದರ್ಯ ವರ್ಧಕಗಳ ಕಾರ್ಖಾನೆಗಳಲ್ಲಿ ಕೆಲಸ ಮಾಡುವವರು ಸುಮಾರು ೩೦೦೦ ವಿವಿಧ ಸುವಾಸನೆಗಳನ್ನು ಗ್ರಹಿಸುವ ಸಾಮರ್ಥ್ಯ ಬೆಳೆಸಿಕೊಂಡಿರಬಹುದಂತೆ. ಇಂಥ ವಿಶೇಷ ಮೂಗನ್ನು ಹೊಂದಿದವರು ಜಗತ್ತಿನಾದ್ಯಂತ ಕೇವಲ ಒಂದು ಸಾವಿರದಷ್ಟು ಮಾತ್ರ ಇದ್ದಾರಂತೆ. ಅವರ ಮೂಗು ಪ್ರತಿವರ್ಷ ೪೦೦೦೦ದಿಂದ ಒಂದು ಮಿಲಿಯನ್ ಡಾಲರ್ ಗಳಿಸುವುದಂತೆ. ವಯಸ್ಕರಿಗಿಂತ ಮಕ್ಕಳಲ್ಲಿ ವಾಸನೆ ಗ್ರಹಿಸುವ ಶಕ್ತಿ ಹೆಚ್ಚು ಇರುತ್ತದಂತೆ.

ಮೂಗು ಅಂದ ತಕ್ಷಣ ನಮ್ಮ ನೆನಪಿಗೆ ಬರೋದು ಸರ್ಕಸ್‌ನ ಜೋಕರ್ ಅಥವಾ ಕಾಮಿಡಿ ಸೀರಿಯಲ್‌ನಲ್ಲಿ ಮಕ್ಕಳು ನೋಡಿ ಸಂತೋಷಪಡುವ ವಿಚಿತ್ರ ಮೂಗಿನ ಕಾರ್ಟೂನ್‌ಗಳು. ಮತ್ತು, ರಾಜಕಾರಣಿಗಳ ಕಾರ್ಟೂನ್‌ಗಳಲ್ಲಿ ಅವರ ಮೂಗೇ ಟ್ರೇಡ್ ಮಾರ್ಕು. ಇದು ಮೂಗಿನ ತಮಾಷೆಯಾದರೆ, ಅದರ ಸೌಂದರ್ಯದಿಂದಲೇ ಪ್ರಸಿದ್ಧಿಯಾದ ಸೆಲೆಬ್ರಿಟಿಗಳಿಗೇನೂ ಕೊರತೆ ಇಲ್ಲ. ಹತ್ತೊಂಬತ್ತನೆಯ ಶತಮಾನದ ಅಮೆರಿಕೆಯ ಜಾನ್ ಬ್ಯಾರಿಮೋರ್, ಬೇಬಿ ಚಿತ್ರದ ನಟಿ ಜಾನಿಫರ್ ಗ್ರೇ, ಇಂಗ್ಲೆಂಡಿನ ಪ್ರಧಾನಮಂತ್ರಿ ಡ್ಯೂಕ್ ಆಫ್ ವೆಲ್ಲಿಂಗ್ಟನ್ ಇವರೆಲ್ಲ ತಮ್ಮ ಮೂಗಿನಿಂದಲೇ ಪ್ರಸಿದ್ಧಿ ಹೊಂದಿದವರು.

ವೈದ್ಯಕೀಯ ಭಾಷೆಯಲ್ಲಿ ಮೂಗು ಮುಖದ ಮೇಲೆ ಹೊರಚಾಚಿದ ದೇಹದ ಮೂಳೆಯ ಒಂದು ಭಾಗ. ಅದು ಉಸಿರಾಟಕ್ಕೆ ಸಹಾಯ ಮಾಡಬಲ್ಲ ನಾಸ್ಟ್ರಿಲ್ ಎಂಬ ಹೊಳ್ಳೆಗಳನ್ನು ಹೊಂದಿದೆ. ಮೂಗು ಹಾಗೂ ಬಾಯಿಯ ಸುತ್ತಲಿನ ಅಂಗಗಳಿಗೆ ವಿಶೇಷ ರಕ್ತನಾಳಗಳು ಜೋಡಿಸಲ್ಪಟ್ಟಿವೆ. ಈ ರಕ್ತನಾಳಗಳ ಮೂಲಕ ವಾಸನೆಯ ಸಂಜ್ಞೆಗಳು ಮೆದುಳಿಗೆ ತಲುಪುತ್ತವೆ. ನನ್ನವಳ ಮೂಗಂತೂ ಪೊಲೀಸ್ ನಾಯಿಯ ಮೂಗಿಗಿಂತ ಚುರುಕು. ''ಹೋದ ಜನ್ಮದಲ್ಲಿ ನೀನು ಪೊಲೀಸ್ ನಾಯಿಯೇ ಆಗಿರಬೇಕು'' ಎಂದು ಎಷ್ಟೋ ಸಲ ನನ್ನವಳನ್ನು ಛೇಡಿಸಿದ್ದುಂಟು.

ಇನ್ನು ಮೂಗಿನ ವಿನ್ಯಾಸದ ವೈಚಿತ್ರ್ಯ ಮನಸ್ಸಿಗೆ ಮುದ ನೀಡುವಂಥಾದ್ದು. ಕೆಲವರದು ಗಿಣಿಯ ಮೂಗಾದರೆ, ಇನ್ನು ಕೆಲವರದು ನೇರ ಅಥವಾ ಸೀದಾ ಇರುವ ಮೂಗು. ಇನ್ನು ಕೆಲವರದು ಅಗಲ ಮತ್ತು ದಪ್ಪ, ಹೊರಗುಬ್ಬಿದ ಮೂಗು, ಒಳತಗ್ಗಾದ ಮೂಗು, ಹತ್ತಿಕ್ಕಿದಂತೆ ಕಾಣುವ ಮೂಗು – ಹೀಗೆ ವೈಚಿತ್ರ್ಯಗಳು ವಿಸ್ತಾರವಾಗುತ್ತ ಹೋಗುತ್ತವೆ. ಬಹುಶಃ ಅವರವರ ಪೂರ್ವಜರ ಇತಿಹಾಸದ ಮೇಲೆ ಅವರ ಮೂಗಿನ ವಿನ್ಯಾಸ ಅವಲಂಬಿಸಿರಬೇಕು. ಏಕೆಂದರೆ, ಗಿಣಿಯ ಮೂಗು ರೋಮನ್‌ರಿಂದ ಬಂದ ಬಳುವಳಿಯಂತೆ, ಸೀದಾ ಇರೋದು ಗ್ರೀಕರ ಕೊಡುಗೆಯಂತೆ ಮತ್ತು ಅಗಲವಾಗಿರೋದು ಮತ್ತು ದಪ್ಪವಾಗಿರೋದು ಈಜಿಪ್ತರ ದೇಣಿಗೆಯಂತೆ.

ದೇವರ ಲೀಲೆ ಅಪರಂಪಾರ. ನಮ್ಮ ಮೂಗಿನ ರಚನೆ, ವಿನ್ಯಾಸಗಳನ್ನು ನೋಡಿದರೆ ನಾವೆಲ್ಲ ದೇವರಿಗೆ ಸಾವಿರ ಸಾವಿರ ನಮನಗಳನ್ನು ಸಲ್ಲಿಸಲೇಬೇಕು. ಯಾಕೆ ಅಂತೀರಾ ? ಒಂದು ಸಲ ವಿಚಾರ ಮಾಡಿ ನೋಡಿ : ಯಾವುದೇ ವಿನ್ಯಾಸದ ಮೂಗಿದ್ದರೂ ಮೂಗಿನ ಹಿಂದೆ ಎಲುಬಿನ ತುಕಡಿಯನ್ನಿಟ್ಟು ತುದಿಯನ್ನು ಮಾತ್ರ ನುಣ್ಣಗೆ ಮೃದುವಾಗಿ ಹೊಯ್ದಾಡುವ ರಬ್ಬರಿನಂತೆ ಮೆತ್ತಗೆ ಮಾಡಿ ಮುಂದಿಟ್ಟಿದ್ದಾನೆ. ಇಲ್ಲವಾದರೆ ಅದೆಷ್ಟು ಪ್ರೇಮಿಗಳು ದೇವರಿಗೆ ಶಾಪ ಹಾಕುತ್ತಿದ್ದರೋ ? ಮೂಗಿನಿಂದ ಹೊರಬರುವ ಹಾಲಿನ ಹೊಳೆಯನ್ನು ಸಂಗ್ರಹಿಸಲು ಒಂದು ಚೀಲ ಕಟ್ಟಬೇಕಾಗಿತ್ತೇನೋ ? ಮೂಗೇ ಆಯುಧವಾಗಿಬಿಡುತ್ತಿತ್ತೇನೋ ? ಇರಲಿ, ಸದ್ಯ ಆ ಸಂಕಟ ನಮಗಿಲ್ಲವಲ್ಲ!

ನಮ್ಮ ಮೂಗು ಬಹು ಉಪಯೋಗಿ ಸಾಧನ. ಅದು ಹೇಗೆ ಅಂತೀರಾ ? ಎಲ್ಲರ ಚಾಳೀಸಿಗೆ ಮೂಗೇ ಆಸರೆ. ಮೂಗೇ ಇಲ್ಲದಿದ್ದರೆ ಚಾಳೀಸಿನ ವಿನ್ಯಾಸವನ್ನೇ ಬದಲಿಸಬೇಕಿತ್ತು. ಕಾಂಟ್ಯಾಕ್ಟ್ ಲೆನ್ಸ್ ಬಂದು ಈ ಭಾರ ಈಗ ಕಡಿಮೆಯಾಗಿದೆ ಅನ್ನಿ. ನಮ್ಮ ಹೆಂಗೆಳೆಯರ ಮುಖದಲ್ಲಿ ಮೂಗೇ ಪ್ರಮುಖವಾಗಿ ಎದ್ದು ಕಾಣೋದು. ಯಾಕೆಂದರೆ ಅವರ ಮೂಗಿನಲ್ಲಿ ತರಹೇವಾರಿ ಮೂಗುತಿಗಳು ಮಿನುಗುತ್ತಿರುತ್ತವೆ. ಅಷ್ಟೇ ಅಲ್ಲ, ಹೆಂಗಸರು ತಮ್ಮ ಮೂಗನ್ನು ಒಮ್ಮೆ ಎಡಕ್ಕೆ ಮತ್ತೊಮ್ಮೆ ಬಲಕ್ಕೆ ಮುರಿದು ಮತ್ತೊಬ್ಬರನ್ನು ಹೀಗಳೆಯುವುದನ್ನು ನೋಡಬೇಕು. ನಮ್ಮ ಸಂವಹನ ಕ್ರಿಯೆಯಲ್ಲಿಯೂ ನಮ್ಮ ಮೂಗು ನಮಗರಿವಿಲ್ಲದಂತೆ ಭಾಗವಹಿಸುವುದು. ನಾವು ಮಾತನಾಡುವಾಗ ಮೂಗು ತುರಿಸಿದರೆ ಏನೋ ಮುಚ್ಚಿಡುತ್ತೇವೆ ಎಂದು ಮತ್ತೊಬ್ಬರಿಗೆ ಸುಲಭವಾಗಿ ತಿಳಿದುಬಿಡುತ್ತದೆ.

ನೆಪೋಲಿಯನ್ ಬೊನಾಪಾರ್ಟೆ ಒಮ್ಮೆ ಹೇಳಿದ್ದನಂತೆ: ''ಏನಾದರೂ ಒಂದು ಮಹತ್ಕಾರ್ಯ ಮಾಡುವುದಿದ್ದರೆ, ಯಾವಾಗಲೂ ನಾನು ಒಬ್ಬ ಉದ್ದ ಮೂಗಿನ ಮನುಷ್ಯನನ್ನು ಆರಿಸುತ್ತೇನೆ'' ಎಂದು. ಇದನ್ನು ನಮ್ಮ ಆಫ್ರಿಕಾ ಮತ್ತು ಏಶಿಯಾ ದೇಶಗಳ ಅಜ್ಜಿಯರು ಕೇಳಿಸಿಕೊಂಡಿರಬೇಕು. ಅದಕ್ಕೆಂತಲೇ ನಮಗಿಂತ ನಮ್ಮ ಅಜ್ಜಿಯರಿಗೆ ಮೂಗು ಸುಂದರವಾಗಿರಬೇಕು ಎಂಬ ಹೆಬ್ಬಯಕೆ ಹುಟ್ಟಿಕೊಂಡಿರಬೇಕು. ಅದೂ ಅವರ ಮೂಗಲ್ಲ!! ಅವರ ಮೊಮ್ಮಗನದೋ ಅಥವಾ ಅವರ ಮೊಮ್ಮಗಳದೋ. ಅದಕ್ಕೆಂತಲೇ ಆಫ್ರಿಕಾ ಮತ್ತು ಏಶಿಯಾ ದೇಶದ ಅಜ್ಜಿಯರು ಮೊಮ್ಮಕ್ಕಳ ಮೂಗನ್ನು ಹುಟ್ಟಿದಾಗಿಂದಲೇ ತಿಕ್ಕಿ, ತೀಡಿ ಸುಂದರವಾಗಿ ಮಾಡಲೋ ಅಥವಾ ಉದ್ದವಾಗಿ ಜಗ್ಗಲೋ ಪ್ರಯತ್ನಿಸುತ್ತಾರೆ.

ಮೂಗು ಒಂದು ದೇಶದ ಅರ್ಥ ವ್ಯವಸ್ಥೆಯ ಒಂದು ಭಾಗವಾಗಬಹುದು ಎಂದರೆ ಆಶ್ಚರ್ಯವಲ್ಲವೆ ? ಹೌದು, ಅದು ವ್ಯಾಪಾರೋದ್ಯಮದಲ್ಲಿ ಪ್ರಮುಖ ಪಾತ್ರ ವಹಿಸಬಲ್ಲದು ಎಂಬುದು ಮೂಗಿಗೆ ಸಂಬಂಧಿಸಿದ ವ್ಯವಹಾರಗಳ ಅಂಕಿಸಂಖ್ಯೆಗಳನ್ನು ಗಮನಿಸಿದರೆ ಅದರ ಅರಿವಾಗುತ್ತದೆ. ಅಮೆರಿಕೆಯಲ್ಲಿ ಪ್ರತಿ ವರ್ಷ ಸುಗಂಧ ದ್ರವ್ಯಕ್ಕಾಗಿಯೇ ೯ ಬಿಲಿಯನ್ ಡಾಲರ್ ಹಣವನ್ನು ಅಲ್ಲಿಯ ಜನ ಖರ್ಚು ಮಾಡುತ್ತಾರಂತೆ. ಅತ್ತಿತ್ತಲಾಗಿ ಬೆಳೆದ ಮೂಗಿನ ಪ್ಲಾಸ್ಟಿಕ್ ಸರ್ಜರಿಗಾಗಿ ಒಂದು ಬಿಲಿಯನ್ ಡಾಲರ್ ವೆಚ್ಚವಂತೆ. ವರ್ಷದಲ್ಲಿ ಸುಮಾರು ೩೭ ಮಿಲಿಯನ್ ಅಮೆರಿಕನ್ನರು ಸೈಯಿನಸ್ ತೊಂದರೆಯಿಂದ ಬಳಲುವರಂತೆ. ಇವರಿಂದ ಫಾರ್ಮಾಸುಟಿಕಲ್ ಉದ್ಯಮದಲ್ಲಿ ೪೫ ಬಿಲಿಯನ್ ಡಾಲರ್ ವ್ಯಾಪಾರವಾಗುವುದಂತೆ. ಮೂಗಿಗಾಗಿ ವೆಚ್ಚ ಮಾಡುವ ಜಾಡು ಇತ್ತೀಚೆಗೆ ನಮ್ಮ ದೇಶಕ್ಕೂ ಮೆಲ್ಲಗೆ ಕಾಲಿಡುತ್ತಿದೆ.

ಮೂಗಿನ ಸುತ್ತ ಅನೇಕ ಗಾದೆಗಳೂ ಹುಟ್ಟಿಕೊಂಡಿವೆ. ತಮ್ಮ ಕಾರ್ಯ ಚಟುವಟಿಕೆಗಳಲ್ಲಿ ಬೇರೊಬ್ಬರು ತಮ್ಮ ಮೂಗು ತೂರಿಸದಂತೆ ಎಚ್ಚರಿಕೆ ವಹಿಸುವುದೇ ರಾಜಕೀಯವಂತೆ. ಪ್ರಬುದ್ಧ ರಾಯಭಾರಿಗಳಿಗೆ ಉದ್ದ ಮೂಗು ದೇವರ ದೇಣಿಗೆಯಂತೆ. ಅದಕ್ಕೆಂತಲೇ ಅವರು ತಮ್ಮ ಮೂಗಿನ ತುದಿಯಾಚೆ ನೋಡಬಯಸುವುದಿಲ್ಲವಂತೆ. ಅಮೆರಿಕೆಯ ತತ್ವಜ್ಞಾನಿ ಬೆಂಜಮಿನ್ ಫ್ರಾಂಕ್ಲಿನ್ ''ಯಾವಾಗಲೂ ಪ್ರವಾಸ ಮಾಡಬೇಕಾದವರಿಗೆ ಹಂದಿಯ ಮೂಗು, ಚಿಗರೆಯ ಕಾಲು, ಕತ್ತೆಯ ಬೆನ್ನು'' ಇರಬೇಕೆಂದು ಹೇಳಿದ್ದಾನೆ. ಬೆನ್ನುಹಚ್ಚಿ ಬಿದ್ದವನ ಮೂಗು ಉಜ್ಜಿದರೆ ಅವನನ್ನು ಬದ್‌ನಸೀಬಿ ಎಂದು ಹೇಳುವುದುಂಟು. ಅಮೆರಿಕೆಯ ಸಾಹಿತಿ ಗ್ಯಾರಿಸನ್ ಕೆಲ್ಲರ್ ಪತ್ರಕರ್ತರ ಒಂದು ಸಂದರ್ಶನದಲ್ಲಿ ''ನನ್ನ ಬಾಲ್ಯ ಜೀವನದ ನೆನಪಿಡುವ ಸಂಗತಿ ಎಂದರೆ ನನ್ನ ಸಹೋದರ ತಿಂದ ಆಹಾರ ಅವನ ಮೂಗಿನಿಂದ ಹೊರಬರುವಂತೆ ಅವನನ್ನು ನಗಿಸಿದ್ದು'' ಎಂದು ಹೇಳಿದನಂತೆ.

ಅಂತೂ ಮೂಗು ಚಿಕ್ಕದಾದರೂ ಅದರ ಕೀರ್ತಿ ದೊಡ್ಡದು ಎಂದಂತಾಯಿತು. ಆಧುನಿಕ ವಿದ್ಯುನ್ಮಾನ ತಂತ್ರಜ್ಞರು ಮಾನವರ ಕಣ್ಣುಗಳಿಗಿಂತ ಹೆಚ್ಚು ಸಾಮರ್ಥ್ಯವುಳ್ಳ ಸೂಕ್ಷ್ಮಾತಿಸೂಕ್ಷ್ಮ ಕ್ಯಾಮರಾಗಳನ್ನು ವಿನ್ಯಾಸಗೊಳಿಸಿದ್ದಾರೆ. ವಿದ್ಯುನ್ಮಾನ ಮೆದುಳನ್ನು ರೋಬೋಗಳಲ್ಲಿ ಜೋಡಿಸಲು ಸಮರ್ಥರಾಗಿದ್ದಾರೆ. ಆದರೆ ಮೂಗು ಮಾತ್ರ ಇನ್ನೂ ಅವರಿಗೆ ಒಂದು ಸವಾಲಾಗೇ ಉಳಿದಿದೆ. ವಾಸನೆಯನ್ನು ಗ್ರಹಿಸಲು ಮಾನವರ ಮೂಗಿನಲ್ಲಿ ಒಂದು ನೂರು ಮಿಲಿಯನ್ ಸೂಕ್ಷ್ಮಾತಿಸೂಕ್ಷ್ಮ ರಂಧ್ರಗಳಿವೆಯಂತೆ. ಅವು ಬರುವ ವಾಸನೆಯ ವಿವಿಧ ಕಣಗಳನ್ನು ವಿಂಗಡಿಸಿ ಕ್ಷಣ ಮಾತ್ರದಲ್ಲಿ ನಿಜವಾದ ವಾಸನೆಯ ಗ್ರಹಿಕೆಯನ್ನು ಮೆದುಳಿಗೆ ತಲುಪಿಸುತ್ತವೆ ಎನ್ನುತ್ತಾರೆ. ಆದರೆ ಬ್ರಿಟನ್ನಿನ ವಾರಿಕ್ ಮತ್ತು ಲೆಸ್ಟರ್ ವಿಶ್ವವಿದ್ಯಾಲಯದಲ್ಲಿ ಸುಮಾರು ೧೨ ರಾಸಾಯನಿಕಗಳ ಪದರುಗಳನ್ನು ಬಳಸಿ ಕಂಪ್ಯೂಟರ್ ನ್ಯೂರಲ್ ನೆಟ್ವರ್ಕ್ ಮೂಲಕ ಕೆಲವೇ ವಾಸನೆಗಳನ್ನು ಗ್ರಹಿಸಬಲ್ಲ ವಿದ್ಯುನ್ಮಾನ ಮೂಗನ್ನು ವಿನ್ಯಾಸಗೊಳಿಸಲು ಸಮರ್ಥರಾಗಿದ್ದಾರಂತೆ.

ಆಯಿತು, ನೀವೇಕೆ ನಿಮ್ಮ ಮೂಗನ್ನು ಮುಟ್ಟನೋಡ್ಕೋತಿದ್ದೀರಿ ? ನಿಮ್ಮ ಪೂರ್ವಜರು ಯಾವ ಖಂಡದಿಂದ ಬಂದವರು ಎಂದು ತಿಳಿಯಲಿಕ್ಕೋ ? ಅಥವಾ ಮೆತ್ತಗಿದೆಯೋ ಇಲ್ಲವೋ ಎಂತಲೋ ? ಸದ್ಯಕ್ಕೆ ಮೂಗಿಗಾಗಿ ಖರ್ಚು ಮಾಡಬೇಕಾಗಿಲ್ಲ ಎಂಬ ಸಮಾಧಾನವೋ ? ಇರಲಿ ಒಳ್ಳೆಯದು. ಅಂತೂ ನಮ್ಮ ನಿಮ್ಮ ಮೂಗು ಅನಾದಿ ಕಾಲದಿಂದ ಆಧುನಿಕ ವಿಜ್ಞಾನಿಗಳವರೆಗೆ ಸವಾಲಾಗಿದ್ದಂತೂ ನಿಜ. ಸಮಸ್ಯೆಗಳ ಪರಿಹಾರಕ್ಕೆ ನಾವೆಲ್ಲರೂ ಪ್ರಯತ್ನಿಸಲು ಸಾಕಷ್ಟು ಅವಕಾಶಗಳಿವೆ. ಪ್ರಯತ್ನ ಸಾಗಲಿ.

**ಪ್ರೊ|| ಆರ್. ಪಿ. ಪುನಗಿನ**
೯೮೩, ಮಹಾವೀರನಗರ, ಬೆಳಗಾವಿ - ೫೯೦ ೦೧೪

**ಈ** ತಿಂಗಳೂ ರಜೆ, ಬಿಡುವು ಇವೆರಡೂ ಸಿಗೋದು ಬಹಳ ಕಷ್ಟಾರಿ! ಹೇಳಿ ಕೇಳಿ ಚುನಾವಣೆ. ಕ್ಷೇತ್ರ ಪುನರ್‌ವಿಂಗಡನೆಯಾದ ಮೇಲೆ ಕಾಲಿಡ್ತಿರೋ ಮೊದಲ ಚುನಾವಣೆ ಬೇರೆ. ಕೇಳಬೇಕಾ ಮಾಧ್ಯಮದವರ ತಾಡು ! ಚುಣಾವಣಾ ಪ್ರಚಾರ ಭಾಷಣ ಜಕಾಕಶವಾಗಿಯುಂದ ಬಿತ್ತರವಾಗಬೇಕೂಂದ್ರೆ ಸುಮ್ಕೇನಾ ? ಅದೆಷ್ಟು ಕಟ್ಟುನಿಟ್ಟು, ಕಾಳಜಿ, ಕರ್ತವ್ಯಪ್ರಜ್ಞೆ. ಹೆಚ್ಚು ಹೊರೆ ಹೊತ್ತ ಉದ್ಯೋಗಸ್ಥ ಮಹಿಳೆ ನಾನಾದೆ. ಕಾರ್ಮಿಕಳು, ಗೃಹಿಣಿ ಎರಡೂ ಆದ ನನಗೆ ತಲೆಕೂದಲಷ್ಟು ಬಳಗ, ಶೋಕೇಸ್ ತುಂಬಾ ಮದುವೆ, ಮುಂಜಿ ಗೃಹಪ್ರವೇಶ ಇವುಗಳ ಮಮತೆಯ ಕರೆಯೋಲೆಗಳೂ ತುಂಬಿ ತುಳುಕುತ್ತಿವೆ. ಸಹಕಾರನಗರದ ನಿವಾಸಿಗಳಾದ ನಮ್ಮನ್ನ ಹುಡುಕಿ ಬಂದು ಕರೆದ್ರೂ ಅಂದ್ರೆ, ಹೋಗದೆ ಇರೋಕೆ ಆಗುತ್ತಾ, ಹೇಳಿ. ಮೇಲಧಿಕಾರಿ ಈ ಸಂದರ್ಭದಲ್ಲಿ ಈ ಫೀಮೇಲ್ ಅಧಿಕಾರಿಗೆ ರಜೆ ಮಂಜೂರು ಮಾಡೋಲ್ಲಾಂತ ಹೇಳಿಯೂ ಆಗಿತ್ತು. ಸಂದೀಲಿ ಸಮಾರಾಧನೆ, ಕೆಲವಕ್ಕೆ ಸಂಜೆ, ಕೆಲವಕ್ಕೆ ಮಧ್ಯಾಹ್ನ ಅಂತಾ ಯೋಜನೆ ತಯಾರಿಸಿ, ಕವರ್‌ಗಳಲ್ಲಿ ನಗದು ರೂಪದಲ್ಲಿದ್ದ ಉಡುಗೊರೆ ತುಂಬಿಸಿ, ಹೆಸರು ಬರೆದಿಟ್ಟಿದ್ದು ಆಯಿತು, ಅನ್ನಿ. ಬೆಂಗಳೂರಿನ ಸದಾ ಸಂಚಾರದಟ್ಟಣೆ ನೆನೆದು ತಲ್ಲಣವೂ ಶುರುವಾಯಿತು. ಎಲ್ಲೆಡೆ ಯಜಮಾನರೊಬ್ಬರೇ ಹೋದರೆ ತರವಲ್ಲ. ಅವರು ತಾಂಬೂಲ ಸ್ವೀಕರಿಸದೆಯೇ ಬಂದುಬಿಡುತ್ತಾರೆ. ಅದರಿಂದ ಕಲ್ಪವೃಕ್ಷದ ನಷ್ಟ.

ಶಾಮಣ್ಣ ನಮ್ಮವರ ದೊಡ್ಡಪ್ಪನ ಮಗ, ಅರ್ಥಾತ್ ಅಣ್ಣ. ಬಿ.ಟಿ.ಎಂ. ಬಡಾವಣೆಯ ೮ನೇ ಹಂತದಿಂದ ಬಂದು ಕರೆದಾಗಿದೆ. ಸರಿ, ಮಧ್ಯಾಹ್ನ ನಾನು ಹೊರಟೆ. ಬೆಳಿಗ್ಗೆಯೇ, ಈ ತಮ್ಮ ಆಫೀಸಿಗೆ ನನ್ನನ್ನು ತಲುಪಿಸಿ, ಛತ್ರ ಮುಟ್ಟಿಯಾಗಿತ್ತು.

ಚಿತ್ತ ನಕ್ಷತ್ರದ, ಚಿತ್ತವಿದ್ರಾವಕ ಸುಡುಬಿಸಿಲಲ್ಲಿ ಆಟೋ ಪ್ರಯಾಣ. ನರಸಿಂಹರಾಜಾ ಕಾಲೋನಿಯ ರಾಮಮಂದಿರವೇ ಉಪನಯನದ ಸ್ಥಳ. ಡ್ಯೂಪ್ಲೆಕ್ಸ್ ಛತ್ರ, ಮಧ್ಯಮ ದರ್ಜೆಯವರಿಗೆ ಒದಗಿಬರುವ, ಸುಲಭ ಎನ್ನಬಹುದಾದ ಸ್ಥಳ. ಸುತ್ತೆಲ್ಲಾ ತಾಜಾ ತರಕಾರಿ, ಹಣ್ಣು, ಹೂವಿನ ಗಾಡಿಗಳ ಆಕರ್ಷಣೆ ಬೇರೆ. ಕಣ್ಣಸಕ್ಕೆ ಹಬ್ಬ. ಸಮಯ ಸಿಕ್ಕರೆ ಒಂದು ಸಣ್ಣ ಶಾಪಿಂಗ್. ಚಿಕ್ಕ ಬ್ಯಾಗಲ್ಲಿ ಮುಗಿಸುವಂತಹ ಸೌಕರ್ಯ.

ಛತ್ರದ ಹೊರಗೆ ನನ್ನನ್ನು ಇದಿರುಗೊಂಡ ನನ್ನ ಸಂಬಂಧಿ, ಕಸ್ಟಮ್ಸ್ ಅಧಿಕಾರಿ ಸತ್ಯ ನಗುಮೊಗದಿಂದ ಬಾಂಬ್ ಸಿಡಿಸಿಯೇ ಬಿಟ್ಟರು.

''ಈಗ ಬರ್ತಿದೀರಾ ? ಹನ್ನೆರಡೂವರೆಗೆ ಫಸ್ಟ್ ಬ್ಯಾಚ್ ಊಟ ಆಗಿ, ೩ನೇ ಬ್ಯಾಚ್‌ಗೆ ಕೂತ ನಮಗೆ ಸಿಕ್ಕಿದ್ದು ಬರೀ ಸಾರು, ಅನ್ನ. ಅದೂ ಪಲ್ಯ ಸ್ವಲ್ಪ. ಬೇಗ ಹೋಗಿ. ಆಮೇಲೆ ಅದೂ ಮುಗಿದುಹೋದ್ರೆ ಕಷ್ಟ. ಅಂದಹಾಗೆ ಸಾರು ತುಂಬಾ ಚೆನ್ನಾಗಿದೆ.''

''ಥ್ಯಾಂಕ್ ಯು ಸತ್ಯ. ಆಫೀಸ್‌ನಲ್ಲಿ ಎಲೆಕ್ಷನ್ ಕೆಲಸ. ಹಾಗಾಗಿ ಲೇಟ್ ಆಯ್ತು. ಏನು, ಈ ನಡುವೆ ಸಾರ್ವಜನಿಕ ಸಮಾರಂಭಗಳಲ್ಲಿ ನೀವು ತುಂಬಾ ಕಾಣಿಸಿಕೊಂಡಿದ್ದೀರಿ ಅಂತಾ ಗೊತ್ತಾಯ್ತು. ಅಂದ ಮೇಲೆ, ಆಫೀಸ್‌ಲ್ಲಿ ಆರಾಮು ಇರಬೇಕು'' ಎಂದು ಚುಡಾಯಿಸಿ ದಡದಡ ಒಳಗೆ ಹೋದೆ. ಹೊರಗೆ ಗೋಡೆ ಕಡೆ ಮುಖ ಮಾಡಿ, ಮೊಬೈಲ್‌ಲ್ಲಿ ಸಂಭಾಷಿಸುತ್ತಿದ್ದ ನಾಲ್ಕಾರು ಮಂದಿಯಲ್ಲಿ ನನ್ನವರೂ ಇದ್ದರು. ನಾನು ಬಂದದ್ದು ಅವರ ಕಣ್ತಪ್ಪಿತ್ತು.

ಸೀದಾ ಊಟದ ಹಾಲ್‌ಗೆ ಹೋದೆ. ಅಲ್ಲೊಂದು ಇಪ್ಪತ್ತು ಬಡಿಸಿದ ಎಲೆಗಳು. ನಾಲ್ಕೈದು ಬಿಡಿಸಿದ ಖಾಲಿ ಎಲೆಗಳು. ಊಟ ಸಾಗಿತ್ತು. ಬಹುಶಃ ಅಡುಗೆಯವರಿಗೂ ಇರಬೇಕು ಎಂದುಕೊಂಡೆ. ಪ್ರವೇಶಿಸಿ ತಕ್ಷಣ ಎದುರಾದವರು, ನನ್ನ ಬಾಲ್ಯದ ಗೆಳತಿ ಸರಸ್ವತಿಯ ಅತ್ತೆ ಭಾಗೀರಥಮ್ಮ. ಮುಗಳುನಕ್ಕು ಪ್ರೀತಿಯಿಂದ ಮಾತನಾಡಿಸಿ ''ಮೊದಲು ಊಟಕ್ಕೆ ಕೂತುಕೋ, ಆಮೇಲೆ ಮಾತಾಡೋಣ'' ಎಂದು ಉಪಚರಿಸಿದರು. ಕೈ ತೊಳೆದು ಎಲೆಯ ಬಳಿ ಬಂದ ನನಗೆ ವಿಪರೀತ ಹಸಿವು. ಬಾಳೆಲೆ ತುಂಬಾ ಅದೆಷ್ಟು ರೀತಿಯ ಅಡುಗೆಗಳು.

ಸತ್ಯ ಬರೀ ಸಾರು ಅಂತಾ ಸುಳ್ಳು ಹೇಳಿರಬೇಕು ಅಥವಾ ಈ ಪಂಕ್ತಿಗಾಗಿಯೇ ಪುನಃ

# 'ಕರೆಯದೆ ಹೋದರೂ...'

■ ಸಾಯಿಲಕ್ಷ್ಮಿ ಎಸ್.



ಇವೆಲ್ಲಾ ತಯಾರಿಸಿರಬೇಕು. ನನ್ನ ಅದೃಷ್ಟ ಎಂದು ಭಾವಿಸಿ ಪಾಯಸ ಚಪ್ಪರಿಸತೊಡಗಿದೆ. ಅಷ್ಟರಲ್ಲಿ ಕಣ್ಣ ತುದಿ ನೋಟದಲ್ಲಿ ಸುತ್ತಲಿನವರ ಪರಿಚಯವನ್ನು ಒರೆಗೆ ಹಚ್ಚಲಾರಂಭಿಸಿದೆ. ಊಹೂಂ, ಒಬ್ಬರೂ ತಿಳಿದವರಲ್ಲ, ಆ ತುದಿಗೆ ಕುಳಿತು ಭೋಜನ ಸವಿಯುತ್ತಿದ್ದ ಸರಸ್ವತಿಯ ಅತ್ತೆ ಭಾಗೀರಥಮ್ಮನವರನ್ನು ಬಿಟ್ಟು. ಹೃದಯ ಕೈಗೆ ಬಂದ ಭಾವ. ತಪ್ಪಿ ಬಂದಿದ್ದು ಖಾತ್ರಿಯಾಗಿ ಜೀವ ಹಿಡಿಯಾಯಿತು. ತೆಲುಗು ಸಿನಿಮಾದಲ್ಲಿನ ದೇವರಂತೆ ಸಹೃದಯನಂತಿದ್ದ ಬಾಣಸಿಗನೊಬ್ಬ ಕಂಡು ಕರೆದೆ, ಕಿವಿಯಲ್ಲಿ ಮೊರೆದೆ ''ಇಲ್ಲಿ ಏನಪ್ಪಾ ಸಮಾರಂಭ ?'' ''ಇಲ್ಲಿ ಮದುವೆ'' ಎಂದ. ''ಮತ್ತೆ ಉಪನಯನ ?'' ಎಂದು ಪ್ರಶ್ನಾರ್ಥಕವಾಗಿ ದೃಷ್ಟಿಸಿದೆ. ಅದೇ ವಿನೀತ ಭಾವದಲ್ಲಿ ಅವ ಹೇಳಿದ ''ಅದು ಮೇಲಿನ ಹಾಲ್‌ನಲ್ಲಿ''. ಸಂಕೋಚದ ಅಲೆಯಲ್ಲಿ ಕೊಚ್ಚಿಹೋಗುವಂತಾಯಿತು. ಆದರೆ ಅವನು ಮಾತ್ರ ಏಳಲು ಹೊರಟ ನನಗೆ ಉಪಚರಿಸಿದ. ''ಮುಂಜಿಗೆ ಬಂದ್ರೆ ಏನಂತೆ ? ಎರಡೂ ಒಂದೇ ಛತ್ರದಲ್ಲಿ ತಾನೆ. ಮೇಲೆ ಕೆಳಗೆ ಅಷ್ಟೇ ವ್ಯತ್ಯಾಸ. ಊಟ ಮಾಡಿ ನಿಧಾನವಾಗಿ.'' ಮನದಲ್ಲೇ ಅವನಿಗೆ ಧನ್ಯವಾದ ಅರ್ಪಿಸಿ, ಅನ್ನಪೂರ್ಣೆಯನ್ನು ಉದರದಂಗಳಕ್ಕೆ ಆಹ್ವಾನಿಸತೊಡಗಿದೆ. ಅಬ್ಬಾ! ಆ ಭಯಂಕರ ಬಿಸಿಲ ರಣ ಹಸಿವು. ರುದ್ರ ತಾಂಡವ. ಒಂದೊಂದಕ್ಕೂ ಅಮೋಘ ರುಚಿ. ವಿಧ ವಿಧ ತರಕಾರಿಯ ಕೂಟದ ಬೇಳೆ ಕೂಟು, ಉದುರು ಬದರು ಮಲ್ಲಿಗೆ ಬಣ್ಣದ ಸುವಾಸನೆಯ ಅನ್ನ, ಪುಟ್ಟ ಚಂದ್ರನಂತಹ ಹಪ್ಪಳ, ಕುಂಬಳ, ಹೋಳಾಗಿ ತೇಲಾಡುವ ಮಜ್ಜಿಗೆ ಹುಳಿ, ಪಲ್ಯ, ಕೊತ್ತಂಬರಿ ಅಲಂಕಾರದಲ್ಲಿ ಕೋಸಂಬರಿ ಅಬ್ಬಬ್ಬಾ! ಎಡತುದಿಗೆ ಚಿತ್ರಾನ್ನ. ನಮ್ಮ ಭಾರತೀಯ ಸಸ್ಯಾಹಾರಿ ಊಟದ ಬಡಿಸುವಿಕೆಯಲ್ಲಿನ ಅಚ್ಚುಕಟ್ಟುತನಕ್ಕೆ ಭೇಷ್ ಎಂದುಕೊಂಡೆ. ಧ್ಯಾನಸ್ಥಿತಿ ಮುಟ್ಟಿದ್ದೆ. ಪರವಶಳಾಗಿ ಬಿಟ್ಟಿದ್ದೆ. ಆಗ ಮೊಬೈಲ್ 'ವಾತಾಪಿ ಗಣಪತಿಂ ಭಜೇ' ಕೃತಿ ಹಾಡಿತು. ಅದಕ್ಕಂತೂ ಹೊತ್ತುಗೊತ್ತು ಒಂದೂ ಇಲ್ಲ. ಶೌಚಾಲಯದಲ್ಲೂ ಬಿಡದೆ ಹಾಡುತ್ತೆ. ಇನ್ನು ಭೋಜನಾಲಯದಲ್ಲಿ ತೆಪ್ಪಗಿದ್ದೀತೇ! ಅದಕ್ಕೆ ಕಿವಿ ಗೊಟ್ಟರೆ ಸಾಕ್ಷಾತ್ ಪತಿದೇವರು, ದನಿಯಲ್ಲಿ ಇನ್ನೂ ಛತ್ರ ತಲುಪದಿದ್ದಕ್ಕೆ ರೇಗು. ''ಎಲ್ಲಿದ್ದೀಯಾ ? ಏನ್ ಮಾಡತಿದೀಯಾ ?'' ಎಂದೆಲ್ಲಾ ಪ್ರಶ್ನೆಗಳು. ಎಲ್ಲಿದ್ದೇನೆ ಎಂದು ಹೇಳುವಂತಿಲ್ಲದಿದ್ದರೂ, ಏನು ಮಾಡುತ್ತಿದ್ದೇನೆ ಎಂದು ಧಾರಾಳವಾಗಿ ಹೇಳಬಹುದಲ್ಲ, ಆದರೂ ಮೆಲ್ಲಗೆ ಉಸುರಿದೆ. ''ಊಟಕ್ಕೆ ಕೂತಿದ್ದೀನಿ, ಬರತೀನಿ!'' ಎರಡೇ ಮಾತು ಎಲ್ಲ ಅರ್ಥ. ಹೇಳಿದರೆ ಹೇಳಲಿ ಎಂದು ನುಡಿದು ಮೊಬೈಲ್ ಆಫ್ ಮಾಡಿಬಿಟ್ಟೆ. ಮರುಪ್ರಶ್ನೆಗೆ ಅವಕಾಶವೇ ಇಲ್ಲ. ಅಡುಗೆ ಭಟ್ಟ, ಬೇಳೆ ಹೋಳಿಗೆ ಬಡಿಸಿ, ಹಾಲು, ತುಪ್ಪ ಹಾಕಿ ಉಪಚರಿಸಿದ. ಸಾಕ್ಷಾತ್ ಅಮ್ಮನ ಹಾಗೆ ಕಂಡ. ಕಣ್ಣಲ್ಲೇ ವಂದನೆ ಸಲ್ಲಿಸಿ ದೈವೀಕ ಸ್ವಾದದ ಆ ಒಬ್ಬಟ್ಟು ಮುಗಿಸಿದೆ. ''ಮದುವೆ ಮನೆ, ಸ್ಟೀಲ್ ಡಬ್ಬಿಯೋ, ಬ್ಲೌಸ್ ಪೀಸೋ, ಬೇಸನ್ನೋ ಕೊಡದೆ ಇದ್ದರೆ ಸಾಕು. ಮರು ಉಡುಗೊರೆಯ ಆ ಹಂಗಿಗೆ ಬೀಳಬಾರದು'' ಎಂದು ಕಪಟ ನಾಟಕ ಸೂತ್ರಧಾರಿಯಲ್ಲಿ ಬೇಡಿಕೊಂಡೆ.

ಕೈ ತೊಳೆದು ಬರುವಾಗ ಭಾಗೀರಥಮ್ಮನವರಿಗೆ ಕಿವಿಯಲ್ಲಿ ನಾನು ದಾರಿ ತಪ್ಪಿ ಬಂದು, ಉಂಡಿದ್ದು ಅರುಹಿಬಿಟ್ಟೆ. ಅದಕ್ಕವರು ''ಇಲ್ಲಾ, ನೀನು ತಪ್ಪಿ ಬಂದಿಲ್ಲಾ, ಸರಿಯಾಗೇ ಬಂದಿದೀಯಾ, ನನ್ನ ನಿನ್ನ ಭೇಟಿ ಇಷ್ಟು ವರ್ಷದ ಮೇಲೆ ಇಲ್ಲಿ ಆಗಬೇಕೂಂತ ದೈವ ಸಂಕಲ್ಪ ಇತ್ತು. ನನಗಂತೂ ತುಂಬಾ ಸಂತೋಷ ಆಯ್ತು. ನಿನ್ನ ಫೋನ್ ನಂಬರ್ ಈ ಡೈರೀಲಿ ಬರಿ. ಸರಸ್ವತೀನೂ ಜ್ಞಾಪಿಸಿಕೋತಾ ಇರ್‍ತಾಳೆ. ಕನಸಲ್ಲಿ ನೋಡಿದ ಹಾಗಿತ್ತು ನಿನ್ನ. ನನ್ನ ತಮ್ಮನ ಮೊಮ್ಮಗಳೇ ಹುಡುಗಿ. ಇವತ್ತು ಈಗ ದೇವರ ಸಮಾರಾಧನೆ ಊಟ. ಸಂಜೆ ವರಪೂಜೆ, ನಾಳೆ ಧಾರೆ, ಆರತಕ್ಷತೆ. ಯಜಮಾನರು, ಮಕ್ಕಳನ್ನ ಕರಕೊಂಡು ತಪ್ಪದೆ ಬಾ'' ಎಂದರು. ಆಕೆಯ ಕಣ್ಣಲ್ಲಿ ಆತ್ಮೀಯತೆಯ ದಿವ್ಯ ಸಿಂಚನ. ಬಾಲ್ಯದ ಗೆಳೆತನದ ನೆನಪು ಮೆರವಣಿಗೆಯಾಗಿ ಬಂತು. ಸರಸ್ವತಿ ಅವಳ ವಿವಾಹದ ನಂತರವೂ ನನ್ನ ತೌರಿನ ಬಳಿಯೇ ಮನೆ ಕಟ್ಟಿದ್ದಳು. ಯಾವುದೋ ನಷ್ಟಕ್ಕೆ ಒಳಗಾಗಿ ಮನೆ ಮಾರಿಕೊಂಡು, ಅವರು ಬಹುದೂರ ವಲಸೆ ಹೋಗಿದ್ದರು. ನನ್ನನ್ನು ಕಂಡಿದ್ದು ಆಕೆಗೆ ನಿಧಿ ಸಿಕ್ಕಂತಹ ಅನುಭವ. ಪರಸ್ಪರರ ದೂರವಾಣಿ ನಂಬರು, ವಿಳಾಸ ವಿನಿಮಯವಾಗಿ ನಾನು ವಿದಾಯ ಬೇಡಿ, ಅಂತಿಮವಾಗಿ ಹೊರಟೆ. ಮಹಡಿ ಏರಿದೆ. ಅಲ್ಲಿ ಯಜಮಾನರ ಬಂಧು ಬಳಗದವರಿಗೆಲ್ಲಾ ಆಗಲೇ ಗೊತ್ತಾಗಿಹೋಗಿತ್ತು, ನಾನು ಕೆಳಗಿನ ಛತ್ರದಲ್ಲಿ ಜರುಗುತ್ತಿದ್ದ ಸಮಾರಂಭದಲ್ಲಿ ಭೋಜನ ಸ್ವೀಕರಿಸಿದ್ದು. ಅದಕ್ಕೆ ಪುಷ್ಟಿ ನೀಡಿದವನು ನನ್ನ ಮೈದುನ. ''ಇನ್ನೂ ಪತ್ನಿ ಬಂದಿಲ್ಲ'' ಎಂದು ಕಂಗಾಲಾಗಿದ್ದ ಅಣ್ಣನಿಗೆ ಅವನು ಧೈರ್ಯ ತುಂಬಿದ್ದ ''ಬರತಾರೆ ಬಿಡು'' ಎಂದು. ಫೋನ್‌ನಲ್ಲಿ ''ನಾನು ಊಟ ಮಾಡತಿದ್ದೀನಿ, ಬರತೀನಿ'' ಎಂದಾಗ ಅವನೇ ಅರ್ಥೈಸಿದ್ದ ''ಅವರು ಕೆಳಗೆ ಹೋಗಿ ಊಟ ಮಾಡತಿರಬೇಕೂಂತ.''

''ಏನು, ಅಲ್ಲೇ ಊಟ ಮಾಡಿಬಿಟ್ಟರಂತೆ'' ಎಲ್ಲರ ಒಕ್ಕೊರಲ ಪ್ರಶ್ನೆಯೊಂದಿಗೆ ಸ್ವಾಗತ ಸಿಕ್ಕಾಗ ಹೇಗಾಗ ಬೇಡ! ಆದರೂ ಸೋಲದೆ ಪಾರಾದೆ. ''ಅದೂ ಪರಿಚಯದವರ ಮನೆ ಮದುವೇನೇ. ಬಲವಂತ ಮಾಡಿ, ಊಟಕ್ಕೆ ಎಬ್ಬಿಸಿಬಿಟ್ರು. ಬಿಡಲೇ ಇಲ್ಲ ಸಾರ್'' ಎನ್ನುತ್ತ, ಹೋಗಲಿ, ಕಾಫಿನಾದ್ರೂ ಇಲ್ಲೇ ಕುಡಿ ಎಂದು ಹೇಳಲು ಕೆಲವರು ಮರೆಯಲಿಲ್ಲ.

ಶಾಮಣ್ಣ, ವಟುವಿನ ಅಪ್ಪ, ಹೇಳೇ ಹೇಳಿದರು ''ಜಹಂಗೀರ್ ತೆಗೊಳ್ಳಿ, ಬಹಳ ಚೆನ್ನಾಗಿದೆ'' ಎಂದು.

''ಅದೆಲ್ಲೋ ಇದೆ, ಆಗಲೇ ಮುಗೀತು'' ಎಂದರು ನನ್ನ ನಾದಿನಿ.

ಇಲ್ಲಿ ಎಲ್ಲ ಮುಗಿದರೂ ಅಲ್ಲಿ ಎಲೆ ತುಂಬಾ ಹರಡಿದ್ದ ವೈವಿಧ್ಯಮಯ ಊಟ ನನ್ನ ಹಸಿವು ತಣಿಸಿ, ಉತ್ಸಾಹ ಇಮ್ಮಡಿಸಿ, ಕಾಫಿ ನಿರೀಕ್ಷೆಯಲ್ಲಿ ಅಲ್ಲೇ ನಿಲ್ಲುವಂತೆ ಮಾಡಿತ್ತು. ಇನ್ನು ಮೇಲೆ ಇಂತಹ ಡ್ಯೂಪ್ಲೆಕ್ಸ್ ಛತ್ರದಲ್ಲಿ ಏರ್ಪಡಿಸುವ ಸಮಾರಂಭ ತಪ್ಪಿಸಲೇಬಾರದು ಎಂಬ ಸಂಕಲ್ಪ ನನ್ನದಾಯಿತು.

ಸಾಯಿಲಕ್ಷ್ಮಿ ಎಸ್.
ಕಾರ್ಯಕ್ರಮ ಅಧಿಕಾರಿ, ಆಕಾಶವಾಣಿ, ರಾಜಭವನ ರಸ್ತೆ
ಬೆಂಗಳೂರು - ೫೬೦೦೦೧

## ಸುದ್ದಿಚಿತ್ರ



ಚಿಕ್ಕಬಳ್ಳಾಪುರದಲ್ಲಿ ಇತ್ತೀಚೆಗೆ ನವಕರ್ನಾಟಕದ ಪುಸ್ತಕ ಪ್ರದರ್ಶನ ಮತ್ತು ಮಾರಾಟಮಳಿಗೆಯ ಉದ್ಘಾಟನೆ ನಡೆಯಿತು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಬೆಳ್ಳಿಶೆಟ್ಟಿಯವರು ಪುಸ್ತಕ ಪ್ರದರ್ಶನವನ್ನು ಉದ್ಘಾಟಿಸಿದರು.

# 'ತೇರು' :

'ತೇರು' ರಾಘವೇಂದ್ರ ಪಾಟೀಲರ ಕೃತಿ. ಅನುಭವದಿಂದ ಅರಳಿದ ಕೃತಿ. ಪ್ರಧಾನ ನಿರೂಪಕ ಪಾತ್ರವಾಗಿ ಕೂಡ ಬರುವ ಪತ್ರಿಕಾ ಸಂಪಾದಕ ಪಾಟೀಲರು ತಮ್ಮ ಪ್ರಗತಿಪರ ಚಿಂತನೆಗಳನ್ನು ಅಲ್ಲಲ್ಲಿ ಬಿತ್ತಿದ್ದಾರೆ. "ಮುಖ್ಯ ನಿರೂಪಕನ ವಸ್ತುನಿಷ್ಠ ಧ್ವನಿ, ಸ್ವಾಮಪ್ಪನ ಹಳಹಳಿಕೆಯ ಹಾಗೂ ಕಳಕಳಿಯ ಧ್ವನಿ, ಗೊಂದಲಿಗರ ಶೈಲೀಕೃತ ಹಾಗೂ ಕಥನೋತ್ಸಾಹದ ಧ್ವನಿ, ಕೊನೆಯ ತಲೆಮಾರಿನ ದ್ಯಾವಪ್ಪನ ಹತಾಶ ಧ್ವನಿ... ಇವೆಲ್ಲವೂ ಒಂದೆಡೆ ಬಂದು, ನಿರೂಪಣೆಯ ನೆಲೆಯಲ್ಲಿ ಮೌಲಿಕ ಬಹುಧ್ವನಿತ್ವ 'ತೇರು' ಕೃತಿಗೆ ಲಭಿಸಿದೆ. ಚರಿತ್ರೆಯ ಘಟನೆಯೊಂದು ಕಾಲದ ಚಕ್ರಗತಿಯಲ್ಲಿ ಉರುಳಿ ಉರುಳಿ ಹೇಗೆ ಆದೊಂದು ಪುರಾಣವಾಗಿ ಬೆಳೆಯಿತೆಂಬುದನ್ನು ಅರ್ಥಗರ್ಭಿತವಾಗೇ ಕಟ್ಟಿಕೊಡುವ ಕಾದಂಬರಿಕಾರರು ಧರಮನಟ್ಟಿಯ ಧರ್ಮ ಪತನಮುಖಿ ನೆಲೆಯಲ್ಲಿ ಸಾಗುತ್ತಿರುವ ಸೂಚನೆಯನ್ನು ಸೂಚಿಸುತ್ತಾರೆ.




ಎಚ್. ಕೆ. ವೆಂಕಟೇಶ.

# ದೇವರ ವಿರುದ್ಧ ನನ್ನ ಬಂಡಾಯವಿದೆ

ಆಧುನಿಕ ಪುರಾಣ ಎಂಬ ಉಪ ತಲೆಬರಹವನ್ನು ಒಳುವಳಿಯಾಗಿ ಪಡೆದ (ಯಶವಂತ ಚಿತ್ತಾಲರಿಂದ) 'ತೇರು' ಕನ್ನಡ ಸಾರಸ್ವತ ಲೋಕಕ್ಕೆ ಹೊಸತೊಂದು ಕೊಡುಗೆ. ರಾಘವೇಂದ್ರ ಪಾಟೀಲರ ಫಲವತ್ತಾದ ಪ್ರತಿಭಾಶಕ್ತಿಯ ಹೊಲದಿಂದ ಜಗಿದು ಬಂದ 'ಹಸಿರು ಕ್ರಾಂತಿಯ' ಬೆಳೆ 'ತೇರು'. ಈಗಾಗಲೆ ಕಥೆ, ಕಾದಂಬರಿ, ವಿಮರ್ಶೆ ಪ್ರವಾಸಕಥನಗಳ ಮೂಲಕ ವೈವಿಧ್ಯಮಯ ಬೆಳೆ ಬೆಳೆದ ಪಾಟೀಲರು, ಇಲ್ಲಿ ತಮ್ಮ ಸಾಹಿತ್ಯ ಕೃಷಿಯ ಅಪಾರ ಅನುಭವದ ಮೂಸೆಯಲ್ಲಿ ಚಿನ್ನದ ಬೆಳೆಯಾಗಿ 'ತೇರ'ನ್ನು ಹೊರತಂದಿದ್ದಾರೆ.

ಪರಂಪರೆಯನ್ನು ಪಾಲಿಸಿ, ಪೂಜಿಸಿ, ಹಿಂಬಾಲಕರಂತೆ ಸುತ್ತಿ, ತಲೆಗೊತ್ತಿ ಸ್ವಂತಿಕೆಯನ್ನೇ ಮರೆತು ನಡೆಯುವುದು ಒಂದು ಬಗೆಯಾದರೆ, ಪರಂಪರೆಯನ್ನು ಪ್ರತಿಭಟಿಸಿ ಸಿಡಿದುನಿಂತು, ತಲೆ ಎತ್ತಿ, ಎದೆ ಎತ್ತಿ ಅಡ್ಡ ಬಂದ ಬೆಟ್ಟವನ್ನೂ ಕುಟ್ಟಿ ಪುಡಿ ಪುಡಿ ಮಾಡಿ ನೆಟ್ಟ ನೇರ ದಿಟ್ಟ ಧೀರ ನಿಲುವಿನಲ್ಲಿ ನಡೆಯುವವರದು ಮತ್ತೊಂದು ಬಗೆ. 'ತೇರು' ಕಾದಂಬರಿಯಲ್ಲಿ ಈ ಎರಡೂ ನೆಲೆಯ ಪ್ರತಿನಿಧಿಗಳಿದ್ದಾರೆ. ಹಿರಿಯ ದ್ಯಾವಪ್ಪನ ''ನೋಡೂ... ದೈವ ಹಿಂತಾ ಸೇವಾ ಮಾಡೂದನ್ನ ನಮ್ಮ ಮನಿತನಕ್ಕ ಕೊಟ್ಟೈತಿ'' ಎಂಬ ನಡೆ-ನುಡಿಯು ಅವರ ಪರಂಪರೆಯ ನಿಷ್ಠತೆಯ ನಿಲುವಾಗಿದೆ. ಹೊಸತಲೆಮಾರಿನ ತರುಣ ದ್ಯಾವಪ್ಪನ ''ದೇವರೂ ದಿಂಡರೂ ಎಲ್ಲಾ ಔಟ್ ಆಫ್ ಡೇಟ್ ಆಗ್ಯಾವರೀ...! ಔಷಧದ ಬಾಟಲೀ ಮ್ಯಾಗ ಹಾಕಿರತಾರ ನೋಡರಿ... ಎಕ್ಸ್‌ಪೈರೀ ಡೇಟು... ಹಂಗೇ... ಗೂಗೀಕೊಳ್ಳದಾಗ ಈಗ ಯಾವ ಸಿದ್ದರೂ ಕಾಣೂದಿಲ್ಲ, ಅಲ್ಲಿ ಈಗ ಕಳ್ಳರು ಅಡಗಿಕೊಂಡಿರತಾರರಿ...'' (ತೇರು ಪು. ೭೪) ಎಂಬ ಮಾತುಗಳು ಪರಂಪರೆಯನ್ನು ಪ್ರಶ್ನಿಸುವ, ವಿಮರ್ಶಿಸಿ ನೋಡುವ ಹೊಸನೋಟವಾಗಿದೆ. ನಿಂತ ನೀರಿಗೆ ನೆಲೆ ಬೆಲೆ ಇರುವುದಿಲ್ಲ. ಅಂತೆಯೇ ಸಮಾಜದಲ್ಲಿ ಜಡ್ಡುಗಟ್ಟಿ ನಿಂತ ಕೊಳೆತ ನೀರಿಗೆ ಸೋಡಾ ಚೀಟಿ ಕೊಟ್ಟು, ಹರಿವ ನೀರಿನಂತೆ ಹೊಸದಾಗಿ ಚಿಂತಿಸುವ, ಆಲೋಚಿಸುವ, ಪರಂಪರೆಯನ್ನು ಪ್ರತಿಭಟಿಸುವ ತರುಣ ದ್ಯಾವಪ್ಪ ನಮಗೆ ಮುಖ್ಯವಾಗುತ್ತಾನೆ, ಹಾಗೆ ಆಗಬೇಕು ಕೂಡ, ಸಮಾಜದ ಒಳಿತಿಗಾಗಿ.

ಕಾರಂತರ 'ಮರಳಿ ಮಣ್ಣಿಗೆ' ಮೂರು ತಲೆಮಾರುಗಳ ಬದುಕನ್ನು ತೆರೆದಿಡುವ ಕಾದಂಬರಿ. ತೇರು ಕೂಡ ಇದೇ ದಾರಿಯಲ್ಲಿ ಸಾಗಿ ಮೂರ್‍ನಾಲ್ಕು ತಲೆಮಾರುಗಳ ಜೀವನಗತಿಯ ಶ್ರುತಿಯನ್ನು ಮಿಡಿಯುತ್ತದೆ. 'ತಲೆಮಾರುಗಳ ಅಂತರ'ದಿಂದಾಗಿ ಅವರು ಬದುಕುವ ರೀತಿ-ನೀತಿ-ಪ್ರೀತಿ, ಅವರು ಆಲೋಚಿಸುವ, ಚಿಂತಿಸುವ ಧಾಟಿಯೂ ಬೇರೆ ಬೇರೆಯಾಗೇ ತೋರುತ್ತದೆ. ಸಂವಾದಕ್ಕಿಂತ ಇಲ್ಲಿ ಸಂಘರ್ಷ ಕಾಣಿಸಿ ಕೊಳ್ಳುತ್ತದೆ. ವಾದ ಸಂವಾದಗಳು ಸಂಘರ್ಷವಾಗಿ ಬೆಳೆದು ಅನುಸಂಧಾನದಲ್ಲಿ ಪರಿಸಮಾಪ್ತಿಗೊಳ್ಳುತ್ತವೆ.

ತೇರುವಿನ ಮೊದಲ ತಿರುವಿನಲ್ಲಿ ಮೊದಲ ತಲೆಮಾರಿನ ದ್ಯಾವಪ್ಪನ ಬದುಕು ಎದುರಾಗುತ್ತದೆ. ದ್ಯಾವಪ್ಪನದು ದೈವನಿಷ್ಠೆಯ ಬದುಕು. ದೇವರಿಗಾಗಿ ಸರ್ವಸ್ವವನ್ನೂ ಧಾರೆ ಎರೆಯಲು ಸಿದ್ಧ ಎಂಬ ತತ್ವಕ್ಕೆ ಬದ್ಧನಾಗಿರುವುದು ಅವನ ಶ್ರದ್ಧೆ. ಅಜ್ಞಾನದ ಅಂಧಕಾರದಲ್ಲಿ ಸರ್ವದಾ ನೆಲೆಸಿರುವ ಅವನು ಊರಿಗಾಗಿ, ತೇರಿಗಾಗಿ ತ್ಯಾಗ ಮಾಡಬೇಕೆಂಬ ಕುರುಡುಕಣ್ಣುಳ್ಳವನು. ಪಟ್ಟಭದ್ರ ಹಿತಾಸಕ್ತಿಗಳ, ಪುರೋಹಿತ ವರ್ಗದ ಕುಟಿಲತೆಯನ್ನು ಕಂಡರಿಯುವಷ್ಟೂ ಪ್ರಜ್ಞೆ ಇರದ ಅವನು ತಾಯ ಕರುಳಿನ ಗೋಳನ್ನು ಲೆಕ್ಕಿಸದೆ ಮಗನನ್ನು ತೇರಿಗೆ ಬಲಿಕೊಟ್ಟು ಬೀಗುತ್ತಾನೆ. ತೇರಿಗೆ ಬಲಿಯಾಗುವ ಮಗನ ಮೇಲಿನ ಮಮತೆಯಿಂದ ಅವನನ್ನು ಉಳಿಸಿಕೊಳ್ಳಲು ಲಗಮವ್ವ ಮುನ್ನುಗ್ಗಿದಾಗ ಪೂಜಾರಿ ಹೇಳುವ:

''ಏ ಮುಡಚಟ್ಟು... ಮುಡಚಟ್ಟು! ಮೈಲಿಗೆ ಆಗುತ್ತೈತಿ... ಆಕಿನ್ನ ಹಿಡಕೋರಿ... ಎಳಕೋರೀ...'' ಎನ್ನುವ ಪ್ರಸಂಗ ಮಾತಿಗೆ ಮೀರಿದ ಅರ್ಥ ಕಕ್ಕುತ್ತದೆ. ಹೆತ್ತತಾಯಿಗೆ ಮಗನನ್ನೇ ಕೊಡದೆ ಮಡಿ ಎಂದು ದೂರತಳ್ಳುವ ವ್ಯವಸ್ಥೆಯನ್ನು ಕಣ್ಣಿದ್ದೂ ನೋಡದೆ ಕುರುಡನಾಗಿ ಮೂಕಪ್ರೇಕ್ಷಕ ಮತಿಹೀನನಾಗಿ ತೋರುತ್ತಾನೆ ದ್ಯಾವಪ್ಪ. 'ಮನುಸ ಕಟ್ಟಿದ ತೇರಿಗೆ ಮನಸ್ಯಾನ ಬಲಿ'ಯಾಗುವುದು ಮಾತ್ರ ದೊಡ್ಡ ದುರಂತ. ಇಂಥಲ್ಲೆಲ್ಲ ಕಾದಂಬರಿಕಾರರು ಸೂಕ್ಷ್ಮ ಕಣ್ಣಿಂದ ಎಲ್ಲವನ್ನೂ ನೋಡಿ ತಿಳಿಯುವ ನಿಲುವು ಸಮಾಜದಲ್ಲಿರುವ ಅಂತರದ ಅಂತರಂಗವನ್ನು ಕಾಣಿಸುತ್ತದೆ. ಮೇಲ್ವರ್ಗದವರ ಮೋಸ, ಜನತೆಯ ಬಡಬದುಕಿನ ಅನಾವರಣವಾಗುತ್ತದೆ.

''ಪೂಜಾರಿ ಅಂದನ ದೇವರ ಮಾತಾಡಿಸಬೇಕು... ದೇವರ ಮಾತಾಡಿಸಿ ಅವನ ಮನಸ್ನ್ಯಾಗ ಏನೈತಿ ಅಂತ'' ಹೇಳುವ ಮೀಡಿಯಮೇಟರ್ ಮಹಾಶಯರು ಈ ಪೂಜಾರಿಗಳು. ಯಾವ ಕಾಲಕ್ಕೂ ತಮ್ಮ ಒಕ್ಕಲಿಗೆ ಧಕ್ಕೆಯಾಗದಂತೆ ನೀತಿನಿಯಮ ನಿರೂಪಿಸುವ ಮಹಾನೀತಿವಂತರು ಅವರು! ತಮಗೆ ಶಕ್ಯವಾದ ಎಲ್ಲವನ್ನೂ ತಿರುಚಿ ಹೇಳುವ ತಿಗಣೆಗಳು. ಸಮಾಜದ ರಕ್ತಹೀರುವ ಮಹಾ ತಿಗಣೆಗಳು ಅವರು!

ಸ್ವಾಮೀಗೆ ಬೇಕಂತೆ ನರಮನುಸ ಬಲಿಯು
ಕಾಟುಕರ ಜಾತಿಯ ಬಲಿಯು ಬೇಕಲ್ಲೋ (ತೇರು, ಪು. ೨೦)

ಗುಡಿಯಿಂದ ದೇವರನ್ನು ಅಟ್ಟಿ ತಾವೇ ದಿಟದ ದೇವರಾಗಿ ಮೆರೆಯುವ ಶಾಸ್ತ್ರದವರು ತೀರ್ಮಾನಿಸುವುದು ಹೀಗೆ:

ಹೆಣ್ಣು ಗಂಡೆಂಬುವ ಭೇದ ಇಲ್ಲ - ಸಣ್ಣವರು ದೊಡ್ಡವರು ಅಂಬುವ
ವಯಸ್ಸಿನ ನಿರ್ಬಂಧ ಇಲ್ಲ. ಫಕ್ತ ಉತ್ತಮರ ಕುಲದವರು ಮಾತ್ರ ಬ್ಯಾಡ.
ಉತ್ತಮ ಕುಲದವರನ್ನ ಬಿಟ್ಟು ಯಾವುದಾದರೂ ಕಾಟುಕ ಕುಲದ
ಒಂದು ಇಸಮನ್ನ
ಹಿಡಿದು ತೇರಿಗ ಬಲಿಗೆ ತರಬೇಕು...'' (ತೇರು, ಪು. ೨೪)

ಡಣ್ಣಾಯಕನ ಹೆಂಡತಿಯು ಹೆಣ್ಣಾಗಿದ್ದೂ ಹಾಲೂಡುವ ನೆವದಲ್ಲಿ ಹಾಲಾಹಲವಿಕ್ಕುವ ಘಟನೆ ಸಿಡಿಲಿನಂತೆ ಎರಗಿಬಿಡುತ್ತದೆ. ಗಂಡು - ಹೆಣ್ಣೆಂಬ ಭೇದವಿರದ ವ್ಯವಸ್ಥೆಯು ಎಲ್ಲರೂ ಉಡದ ಹಿಡಿತದಲ್ಲಿ ಕೆಳಸ್ತರದ ಜನರನ್ನು ಹಿಂಡಿಬಿಡುತ್ತಾರೆ ಎಂಬುದಕ್ಕೆ ಸಾಕ್ಷಿಯಾಗುತ್ತದೆ.

ಇತಿಹಾಸವನ್ನು ಹೊಕ್ಕಿ ನೋಡಿದರೂ ಅದು ಹೇಳುವುದು ಉತ್ತಮರ ಬದುಕಿಗಾಗಿ ಸಾಮಾನ್ಯರ ಬಲಿಯ ಚರಿತ್ರೆಯನ್ನೇ. ಸತಿಯಾಗುವವರು, ದೇವದಾಸಿಯಾಗುವವರು, ಕೆರೆಗೆ ಹಾರವಾಗುವವರು, ಕೊಂಡ ಹಾಯುವವರು, ಬಲಿಯಾಗುವವರು... ಇವರೆಲ್ಲ ದುರ್ಬಲರು, ದರಿದ್ರರು, ದಲಿತರು ಮತ್ತು ಪದದಲಿತರು.

ಕಾಲ ಕೈಕಟ್ಟಿ ಕೂರುವುದಿಲ್ಲ. ಕಾಲಚಕ್ರ ಎಂಬುದೇ ಅದರ ಚಕ್ರಗತಿ, ಚಲನ ಸ್ಥಿತಿಗಳನ್ನು ಧ್ವನಿಸುತ್ತದೆ. 'ತೇರು' ಸ್ಥಿತ್ಯಂತರದ ಬದುಕನ್ನು ಯಶಸ್ವಿಯಾಗಿ ಕಟ್ಟಿಕೊಡುತ್ತದೆ. ಹಿರಿಯ ದ್ಯಾವಪ್ಪ ತೆಪ್ಪಗಿದ್ದರೇನಂತೆ? ತರುಣ ದ್ಯಾವಪ್ಪ ಇಲ್ಲಿ ಬಂಡಾಯದ ಕಿಡಿಯಾಗಿ ಮೂಡಿಬರುತ್ತಾನೆ. ಪರಂಪರೆಯನ್ನು ಪ್ರಶ್ನಿಸುವ, ಪ್ರತಿಭಟಿಸುವ, ಕೊಳೆತ ಸಮಾಜದ ವಿರುದ್ಧ ಬಂಡೇಳುವ ಶಕ್ತಿ, ಆಸಕ್ತಿ ತುಂಬುವುದು ಅಕ್ಷರವಿದ್ಯೆ. ಇಲ್ಲಿನ ತರುಣ ದ್ಯಾವಪ್ಪ ಅಕ್ಷರ ಕಲಿತವ, ಲೋಕಜ್ಞಾನ ಇರುವವ, ಯಾವುದು ಸರಿ - ಯಾವುದು ತಪ್ಪು ಎಂದು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ತೀರ್ಮಾನಿಸುವವ. 'ಕ್ರಾಂತಿಗೆ ಒಬ್ಬನs ಸಾಕು' ಎಂದು ಕ್ರಾಂತಿಯ ಕೆನ್ನೀರಿನಲ್ಲಿ ಈಜುವ ಅಸಮ ಸಾಹಸಿ. ಗತಕಾಲದ ಇತಿಹಾಸದ ಪುಟಗಳನ್ನು ಮರಳಿ ಬರೆಯುವ ಛಲ ಇರುವವ. ಅಂತರಂಗದಲ್ಲಿ ಪ್ರೀತಿ ತುಂಬಿಕೊಂಡಿರುವವನು. ಪ್ರಾಮಾಣಿಕ ಶ್ರದ್ಧಾಳು. ಈ ತರುಣ ದ್ಯಾವಪ್ಪ ತೇಜಸ್ವಿಯವರ ಕ್ರಾಂತಿಗೆ ತುಡಿಯುವ ಪಾತ್ರಗಳ ಆಪ್ತ ಸಂಗಾತಿಯಂತೆ ತೋರಿಬರುತ್ತಾನೆ.

''ನಮ್ಮದು ಪುಣ್ಯ ಭೂಮಿ... ನಮ್ಮ ಪೂರ್ವಿಕರೆಲ್ಲಾ ಅವತಾರೀ ಪುರುಷರೂ... ಹಂಗs- ಹಿಂಗs ಅಂತ... ತೆಲೀ ಚಿಟ್ಟ ಹಿಡದ ಹೋತರೀ... ಹಿಂದಿಂದ ತಗೊಂಡು ಹಿತ್ತಲದಾಗ ಅತ್ತರಂತ!... ಅಲ್ಲರೀ ನಮ್ಮ ವ್ಯವಸ್ಥಾದಾಗ ಬಡವರು ಮರ್ಯಾದಿಂದ ಬದಕೂ ಹಾದಿ ಹೇಳರಿ... ಹಳ್ಳಾಗಿನ ಗೌಡರೂ-ಕುಲಕರ್ಣ್ಯಾರೂ - ಜಮೀನುದಾರರೂ ಮತ್ತೆ ಜಾತ್ಯಸ್ಥರು ಮಾಡತಿರೋ ಹಂತಾ ದಂಡಾವರ್ತೀ ಬಗ್ಗೆ ವಿಚಾರ ಮಾಡರಿ...'' (ತೇರು, ಪು. ೬೮)

ತರುಣ ದ್ಯಾವಪ್ಪನ ಬಂಡಾಯ ಇರುವುದು ಧರ್ಮದ ವಿರುದ್ಧ, ದೇವರ ವಿರುದ್ಧ, ದೇವರನ್ನು ದಾಳವಾಗಿ ಮಾಡಿಟ್ಟುಕೊಂಡಿರುವ ಪುರೋಹಿತ ವರ್ಗದವರ ವಿರುದ್ಧ, ದೇವರ ಹೆಸರ ಹೇಳಿಕೊಂಡು ದುರ್ಬಲರ, ದಲಿತರ ಮೇಲೆ ಅತ್ಯಾಚಾರಗೈಯುವ ಪುರೋಹಿತ ವರ್ಗವನ್ನು ಕಂಡರೆ ಕೆಂಡವಾಗುತ್ತಾನೆ ತರುಣ ದ್ಯಾವಪ್ಪ. ದೇವರ ವಿರುದ್ಧದ ಅವನ ಆಕ್ರೋಶ, ಸಿಟ್ಟು ಅವನದೇ 'ಪ್ರೇಮಪತ್ರ'ದಲ್ಲಿ ಬಹಿರಂಗವಾಗಿ ಕಾಣಿಸಿಕೊಳ್ಳುತ್ತದೆ. ''ದೇವರು ಅನ್ನುವುದು ಇದ್ದರೆ ಅದರ ವಿರುದ್ಧ ನನ್ನ ಬಂಡಾಯವಿದೆ. ಅದರ ವಿರುದ್ಧ ನನ್ನ ಧಿಕ್ಕಾರವಿದೆ. ಅದರ ವಿರುದ್ಧ ನನ್ನ ಸತ್ಯಾಗ್ರಹವಿದೆ.'' (ತೇರು, ಪು.೧೨೫) ''ವರ್ಷದ ಹನ್ನೆರಡೂ ತಿಂಗಳು- ಒಟ್ಟು ತಪ್ಪಸದ ಹರ್‍ಯಾಗs ಮತ್ತ ಸಂಜೀ ಮಂದ ಇಲ್ಲಿ ಈ ಉದ್ದವನ್ನ ಪೂಜೀ ಮಾಡತೀಲಾs ಇದೂ... ಬರೇ ಕಲ್ಲ ಹೌದಲ್ಲೋ?'' (ತೇರು, ಪು. ೯೯) ಎಂಬ ತೀರ್ಮಾನಕ್ಕೆ ಬರುತ್ತಾನೆ. ಜ್ಞಾನದ ಕಣ್ಣಿಂದ ಪುರೋಹಿತಶಾಹಿಗಳ ಪ್ರತಿನಡೆಯನ್ನೂ ಅನುಮಾನದಿಂದ ನೋಡುವ ತರುಣ ದ್ಯಾವಪ್ಪ ಹೊಸ ಒಳನೋಟದ ಸಂಕೇತವಾಗಿ ಗೋಚರಿಸುತ್ತಾನೆ. ದೇವರ ವಿರುದ್ಧದ ದ್ಯಾವಪ್ಪನ ಸಿಟ್ಟಿಗೆ ಕಾರಣವೂ ಇದೆ. 'ತೇರು' ದೇವರಿಗಾಗಿಯೇ ನಡೆಯುತ್ತದೆ. ಆದ್ದರಿಂದ ಕಾದಂಬರಿಯುದ್ದಕ್ಕೂ ದೇವರು ವರ್ತುಲಾಕಾರದಲ್ಲಿ ಸುತ್ತುತ್ತಲೇ ಇರುತ್ತಾನೆ. ಇಂಥ ಕೆಲಸವಿಲ್ಲದೆ ಗಸ್ತು ಸುತ್ತುವ ದೇವರಿಗೆ ತನ್ನ ಪೂರ್ವಜರ ಬಲಿಯಾದುದು ದ್ಯಾವಪ್ಪನ ಆಕ್ರೋಶಕ್ಕೆ ಸ್ಪಷ್ಟ ಕಾರಣ. ಅದು ಸಾಲದೆಂಬಂತೆ ವರ್ಷ ವರ್ಷವೂ 'ರಕ್ತ ತಿಲಕ' ಸೇವೆಯ ಹೆಸರಲ್ಲಿ ರಕ್ತ ಹೀರುವ ದೇವರು ಈಗ ದೆವ್ವವಾಗಿತ್ತು ದ್ಯಾವಪ್ಪನ ಪಾಲಿಗೆ. ವಿಧವೆಯ ಬಾಳಿಗೆ ಆಸರೆಯಾಗಲು ದ್ಯಾವಪ್ಪ ಮುಂದಾದಾಗ ಅಲ್ಲೂ ಅಡ್ಡಗಾಲು ಹಾಕುವ ದೇವರು 'ಪದ್ದವ್ವ'. ಬದುಕಿನಲ್ಲಿ ಹೆಜ್ಜೆ ಹೆಜ್ಜೆಗೂ ಒಂದು ಭೂತದಂತೆ ಕಾಡುವ ಇಂಥ ದೇವರನ್ನೇ ದೂರ ತಳ್ಳುತ್ತಾನೆ. ದೇವರ ವಿರುದ್ಧವೇ ಬಂಡಾಯ ಸಾರುತ್ತಾನೆ ತರುಣ ದ್ಯಾವಪ್ಪ ಜೆ.ಪಿ. ಚಳುವಳಿಯ ಹುಚ್ಚು ಹತ್ತಿಸಿಕೊಂಡು ಹೊಸತನದರೆಡೆಗೆ ದಾಂಗುಡಿಯಿಟ್ಟು, ಜೈಲು ಸವಿಯನ್ನೂ ಉಂಡು, ವಿಧವೆಯೊಬ್ಬಳ ಬದುಕಿಗೆ ಬೆಂಬಲವಾಗಿ ನಿಂತು, ಕೊನೆಗೆ ವೈಯಕ್ತಿಕ ಬದುಕನ್ನೇ ಅದುಮಿ ಹಿಡಿದು ಬಾಬಾ ಆಮ್ಟೆಯವರ ಆಶ್ರಮದಲ್ಲಿ ಸಮಾಜ ಸೇವೆಗೆ ಜೀವಮಾನವನ್ನೇ ಪಣವಾಗಿಡುವ ತರುಣ ದ್ಯಾವಪ್ಪ ನಿತ್ಯ ಬದಲಾವಣೆಯೆಡೆಗೆ ತುಡಿಯುವ ಚೇತನವಾಗಿ ತೋರುತ್ತಾನೆ.

ಸ್ವಾಂವಜ್ಜನ ಸಾತ್ವಿಕಗುಣ ಇಲ್ಲಿ ಮನಸೆಳೆಯುತ್ತದೆ. 'ತೇರಿ'ನಲ್ಲಿ ತೀರ ಸೆಕ್ಯೂಲರ್ ಆಗಿ ಕಾಣಿಸಿಕೊಳ್ಳುವ ಸ್ವಾಂವಜ್ಜನ ಬದುಕು ತಿಳಿಗೊಳದಂತಿದೆ. ಸ್ವಾಂವಜ್ಜ ಧರಮನಟ್ಟಿಯ ಜನರ ವಿವೇಕ ಪ್ರಜ್ಞೆಯಂತಿದ್ದ... ಆದರೆ 'ಧರಮನಟ್ಟಿಯ ಜನ ಯಾವತ್ತಿಗೂ ಅವನನ್ನು ಸರಿಯಾಗಿ ಅರ್ಥಮಾಡಿಕೊಳ್ಳಲೇ ಇಲ್ಲ..' ಇದು ಎಲ್ಲ ಕಾಲದ ಸಾತ್ವಿಕ ಗುಣದವರಿಗೆ ಸಮಾಜದ ದುಷ್ಟತನ ಕೊಡುವ ಬೆಲೆ. ನಗರ - ಗ್ರಾಮಗಳ ಬೃಹದಂತರವನ್ನು ಒಡೆದು ತೋರುವಲ್ಲಿ ಕಾದಂಬರಿಕಾರರು ದೃಷ್ಟಿ ಬೀರಿರುವ ಪರಿ ಇದು: ''ಈ ಬೆಂಗಳೂರಿನ್ಯಾಗ ಎಲ್ಲಾ ಕಡೆ ಝಗ-ಮಗ ಅಂತ ಬೆಳಕು ಚೆಲ್ಲ್ಯಾಡಿ ಹಾದೀಗುಂಟ ಹರೀತೈತ... ಇಡೀ ಊರಿಗೆ ಊರs ಚಲಿಸಕತ್ತೈತಿ ಅನ್ನೂ ಹಂಗ ರಸ್ತಾದ ತುಂಬ ಬಸ್ಸೂ-ಕಾರಗಾಡೀ ಮತ್ತ ಮೋಟರ ಸೈಕಲ್ಲಗೋಳು ಭರಂಡೀ ಹೋಗತಾವು... ಅಲ್ಲಿ ನಮ್ಮ ಊರಗೋಳೊಳಗ ನಿಮಗs ಗೊತ್ತ ಐತಲ್ಲರೀ... ಅಲ್ಲಿ ಕತ್ತಲಿ ತುಂಬೈತಿ... ಚಿಮಣೀ ಬುಡ್ಡಿಗೆ ತಟಕ ಎಣ್ಣಿ ಸಿಗೂದಿಲ್ಲ... ಇಡೀ ಊರಿಗೆ ಊರs ಕುಂಟ ಬಿದ್ದದಾವು...'' (ತೇರು, ಪು. ೭೩)

'ತೇರು' ರಾಘವೇಂದ್ರ ಪಾಟೀಲರ ಪ್ರತಿಭೆ, ಅನುಭವದಿಂದ ಅರಳಿದ ಕೃತಿ. ಪ್ರಧಾನ ನಿರೂಪಕ ಪಾತ್ರವಾಗಿ ಕೂಡ ಬರುವ ಪತ್ರಿಕಾ ಸಂಪಾದಕ ಪಾಟೀಲರು ತಮ್ಮ ಪ್ರಗತಿಪರ ಚಿಂತನೆಗಳನ್ನು ಅಲ್ಲಲ್ಲಿ ಬಿತ್ತಿದ್ದಾರೆ. ''ಮುಖ್ಯ ನಿರೂಪಕನ ವಸ್ತುನಿಷ್ಠ ಧ್ವನಿ, ಸ್ವಾಂವಜ್ಜನ ಹಳಹಳಿಕೆಯ ಹಾಗೂ ಕಳಕಳಿಯ ಧ್ವನಿ, ಗೊಂದಲಿಗರ ಶೈಲೀಕೃತ ಹಾಗೂ ಕಥನೋತ್ಸಾಹದ ಧ್ವನಿ, ಕೊನೆಯ ತಲೆಮಾರಿನ ದ್ಯಾವಪ್ಪನ ಹತಾಶ ಧ್ವನಿ... ಇವೆಲ್ಲವೂ ಒಂದೆಡೆ ಬಂದು, ನಿರೂಪಣೆಯ ನೆಲೆಯಲ್ಲಿ ಮೌಲಿಕ ಬಹುಧ್ವನಿತ್ವ 'ತೇರು' ಕೃತಿಗೆ ಲಭಿಸಿದೆ. ಚರಿತ್ರೆಯ ಘಟನೆಯೊಂದು ಕಾಲದ ಚಕ್ರಗತಿಯಲ್ಲಿ ಉರುಳಿ ಉರುಳಿ ಹೇಗೆ ಅದೊಂದು ಪುರಾಣವಾಗಿ ಬೆಳೆಯಿತೆಂಬುದನ್ನು ಅರ್ಥಗರ್ಭಿತವಾಗೇ ಕಟ್ಟಿಕೊಡುವ ಕಾದಂಬರಿಕಾರರು ಧರಮನಟ್ಟಿಯ ಧರ್ಮ ಪತನಮುಖಿ ನೆಲೆಯಲ್ಲಿ ಸಾಗುತ್ತಿರುವ ಸೂಚನೆಯನ್ನು ಸೂಚಿಸುತ್ತಾರೆ. 'ಗೊಂದಲಿಗರ ಕಥನ ಶೈಲಿ'ಯ ಕಥನತಂತ್ರವನ್ನು ಕಥೆಗೆ ಪೂರಕವಾಗಿ ಪೋಣಿಸಿದ ಪಾಟೀಲರು ಕಾದಂಬರಿಯುದ್ದಕ್ಕೂ ಜೀವಂತಗತಿಯನ್ನು ಕಾಯ್ದುಕೊಂಡಿರುವರು. ರಮ್ಯವಾಗಿ ಸೊಗಸಾಗಿ ಪ್ರಾರಂಭವಾಗುವ ಕಥೆ ವಿಷಾದದ ಛಾಯೆಯಲ್ಲಿ ಮುಗಿದಾಗ ಮಾತು ಮೌನವಾಗುತ್ತದೆ. ಕಣ್ಣು ಹನಿಗೂಡುತ್ತವೆ. ಕಥೆ ಹೇಳುವ ಶೈಲಿಯಲ್ಲಿ ಮಾಸ್ತಿಯವರನ್ನು, ಕಾವ್ಯಧ್ವನಿ ಹೊಮ್ಮಿಸುವ ವೇಳೆಯಲ್ಲಿ ಬೇಂದ್ರೆಯವರನ್ನು ನೆನಪಿಸುತ್ತಾರೆ ಪಾಟೀಲರು. ಈ ಕೃತಿ ಕಥನಾತ್ಮಕವಾಗಿ, ಕಾವ್ಯಾತ್ಮಕವಾಗಿ ಅರಳಿರುವುದು ಕೂಡ ಒಂದು ವೈಶಿಷ್ಟ್ಯ.'' ''ಕಾಲಕಾಲಕ್ಕೆ ಸಂಭವಿಸುವ ಸಾಮಾಜಿಕ-ಸಾಂಸ್ಕೃತಿಕ-ರಾಜಕೀಯ ಪಲ್ಲಟಗಳು ಮನುಷ್ಯಜೀವಿತದ ಗುಣಾತ್ಮಕತೆಯ ಮೇಲೆ ಬೀರುವ ಅಪರಿಹಾರ್ಯವೆನಿಸುವ ಪ್ರಭಾವಗಳನ್ನು ರೂಪಕಾತ್ಮಕ ನೆಲೆಯಲ್ಲಿ ಕಟ್ಟಿಕೊಡುವುದು 'ತೇರು' - ಕಾದಂಬರಿಯ ವೈಶಿಷ್ಟ್ಯ.''

ಆಧಾರ:


೧. ಸಿ.ಎನ್. ರಾಮಚಂದ್ರನ್, ತೇರು, ಮುನ್ನುಡಿ. ಪು. xix
೨. ಎಚ್. ಎಸ್. ವೆಂಕಟೇಶ ಮೂರ್ತಿ - ಬೆನ್ನುಡಿ



**ಎಚ್. ಕೆ. ವೆಂಕಟೇಶ**
ಸಂಶೋಧಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು - ೬



ಉತ್ತಮ ಶಿಕ್ಷಕನನ್ನು ಎಲ್ಲ ಕಾಲದ ಎಲ್ಲ ದೇಶಗಳ ಎಲ್ಲ ಸಮಾಜಗಳೂ ಗೌರವದಿಂದ ಕಂಡಿವೆ. ಇಂದಿಗೂ ತರಗತಿಗಳಲ್ಲಿ ಚೆನ್ನಾಗಿ ಪಾಠ ಹೇಳುವ, ವಿದ್ಯಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನ ನೀಡುವ ಶಿಕ್ಷಕರನ್ನು ವಿದ್ಯಾರ್ಥಿಗಳು ಹಾಗೂ ಹೆತ್ತವರು ಮತ್ತು ಇಡೀ ಸಮುದಾಯ ಶ್ರದ್ಧಾ ಭಕ್ತಿಗಳಿಂದ ಗೌರವಿಸುವುದುಂಟು. ಅಧಿಕಾರ, ಸ್ಥಾನಮಾನ ಗಳಲ್ಲಿ ಕೊರತೆಯಿದ್ದರೂ ಒಳ್ಳೆಯ ಶಿಕ್ಷಕನ ಬಗ್ಗೆ ಸರ್ವತ್ರ ಆದರವಿದೆ ಎಂಬುದನ್ನು ನಾನು ಗಮನಿಸಿದ್ದೇನೆ. ಸಮಾಜದಲ್ಲಿ ಶಿಕ್ಷಕರ ಬಗ್ಗೆ ಅಲ್ಲಲ್ಲಿ ಉಪೇಕ್ಷೆ, ಅಸಡ್ಡೆ, ತಾತ್ಸಾರಗಳು ಕಂಡುಬಂದಿದ್ದರೆ ಅದಕ್ಕೆ ನಿರ್ಲಕ್ಷ್ಯ ಮನೋಭಾವದ ಶಿಕ್ಷಕರ ಒಂದು ಸಣ್ಣ ಗುಂಪು ಕಾರಣ.

# ಶಿಕ್ಷಕರ ಬದ್ಧತೆಗಳನ್ನು ಕುರಿತು...

ಈಗೀಗ ಶಿಕ್ಷಕರಲ್ಲಿ ವೃತ್ತಿಪರತೆ, ಬದ್ಧತೆ ಕಡಿಮೆಯಾಗಿದೆ. ಅಧ್ಯಾಪನ ವೃತ್ತಿಯಲ್ಲಿ ತೊಡಗಿರುವ ಶಿಕ್ಷಕರು ಅದನ್ನೊಂದು ಕೇವಲ ಹೊಟ್ಟೆಪಾಡಿನ ಉದ್ಯೋಗವೆಂದು ಭಾವಿಸದೆ ಅರ್ಪಣಾಭಾವದಿಂದ ದುಡಿಯಬೇಕು. ಶಿಕ್ಷಕ ತನ್ನ ವೃತ್ತಿಗೆ ಬದ್ಧನಾಗಿರಬೇಕು. ವೃತ್ತಿಗೌರವ ಹಾಗೂ ವೃತ್ತಿ ಪ್ರೀತಿಯನ್ನು ರೂಢಿಸಿಕೊಂಡು ವೃತ್ತಿಯಲ್ಲಿ ಸಂತೃಪ್ತಿಯನ್ನು ಕಂಡುಕೊಳ್ಳಬೇಕು. ವಿದ್ಯಾರ್ಥಿಗಳನ್ನು ತನ್ನ 'ಅಭಿಮಾನಿ ದೇವತೆ'ಗಳೆಂದು ಭಾವಿಸಿ ಅವರಿಗೆ ಬದ್ಧನಾಗಿರಬೇಕು. ಕಲಿಸುವ ವಿಷಯದಲ್ಲಿ ಬದ್ಧತೆ ಹೊಂದಿ ಇತ್ತೀಚಿನ ವಿಚಾರಗಳನ್ನು ತಿಳಿದುಕೊಂಡು ಸದಾ ವಿದ್ಯಾರ್ಥಿಯಾಗಿರಬೇಕು. ಬೋಧನೆಯು ಕಾಟಾಚಾರದ ಕ್ರಿಯೆಯಾಗದಂತೆ ನೋಡಿಕೊಂಡು ಗುಣಶ್ರೇಷ್ಠತೆಯನ್ನು ಸಾಧಿಸುವ ಬದ್ಧತೆ ಹೊಂದಿರಬೇಕು. ಕರುಣೆ, ಅನುಕಂಪ, ಪ್ರೀತಿವಾತ್ಸಲ್ಯ, ಅನುಭೂತಿ, ಸಾಮರಸ್ಯ, ಮತಭೇದಗಳ ಬಗ್ಗೆ ಸಹಿಷ್ಣುತೆ, ಕ್ಲುಪ್ತತೆ, ಸಮಯ ಪರಿಪಾಲನೆ, ಜ್ಞಾನದಾಹ, ಬೌದ್ಧಿಕ ಪ್ರಾಮಾಣಿಕತೆ ಮೊದಲಾದ ಮೌಲ್ಯಗಳಿಗೆ ಬದ್ಧನಾಗಿರಬೇಕು. ಶಿಕ್ಷಕನಾದವನು ತಾನು ದುಡಿಯುತ್ತಿರುವ ಸಂಸ್ಥೆಯ ಏಳಿಗೆಗೆ ಬದ್ಧನಾಗಿರಬೇಕು. ಸುತ್ತಲಿನ ಸಮುದಾಯದ ಬಗೆಗೆ ಕಳಕಳಿ ಉಳ್ಳವನಾಗಿರಬೇಕು. ಹೊಸ ಶೈಕ್ಷಣಿಕ ಆವಿಷ್ಕಾರಗಳು, ಸಂಶೋಧನೆ, ಬದಲಾವಣೆಯ ಹಂಬಲ, ಸೃಜನಶೀಲತೆ ಇತ್ಯಾದಿಗಳಿಗೆ ಬದ್ಧನಾಗಿರಬೇಕು ಎಂದೆಲ್ಲ ಪಂಡಿತರು ಶಿಕ್ಷಕರ ಕಾರ್ಯಾಗಾರಗಳಲ್ಲಿ ಮನವರಿಕೆ ಮಾಡಿಕೊಡುತ್ತಾರೆ. ಕೇಂದ್ರ ಸರಕಾರ ಕೂಡ ಶಿಕ್ಷಕರಿಂದ ಬಯಸುವುದು ಈ ಬಗೆಯ ಬದ್ಧತೆಯನ್ನೇ.

'ಶಿಕ್ಷಕರ ಬದ್ಧತೆ' ಬಗೆಗೆ ಮೇಲೆ ಹೇಳಿದ ವಿಚಾರಗಳೆಲ್ಲ ಸರಿ. ಆದರೆ ಇವೆಲ್ಲ ಬರಿ ಆದರ್ಶದ ಬೊಗಳೆಗಳು. ಇಂದಿನ ಶಿಕ್ಷಕರ ಸಾಮಾಜಿಕ ಆರ್ಥಿಕ ವಾಸ್ತವಕ್ಕೆ ಕುರುಡಾಗಿ ಇಂಥ ವಿಚಾರಗಳನ್ನು ಪ್ರತಿಪಾದಿಸಲಾಗುತ್ತಿದೆ ಎಂದು ತರುಣ ಪೀಳಿಗೆಯ ಪ್ರಜ್ಞಾವಂತರಾದ ಕೆಲವು ಶಿಕ್ಷಕರು ಮೂಗುಮುರಿಯುವುದನ್ನು ಗಮನಿಸಿದ್ದೇನೆ.

ಶಿಕ್ಷಕರ ವ್ಯಕ್ತಿತ್ವ ಆದರ್ಶವಾಗಿರಬೇಕು ಎಂಬುದೇನೋ ನಿಜ. ಆದರೆ ಇಂದು ಅನೇಕ ಕಡೆಗಳಲ್ಲಿ ಶಿಕ್ಷಕರನ್ನು ಶೋಷಣೆ ಮಾಡಲಾಗುತ್ತಿದೆ. ಗೌರವಾರ್ಹ ವೇತನವನ್ನು ನೀಡುತ್ತಿಲ್ಲ. ಸೇವಾ ಭದ್ರತೆಯಿಲ್ಲ. ಹೀಗಿರುವಾಗ ವೃತ್ತಿತೃಪ್ತಿ, ವೃತ್ತಿಪ್ರೀತಿ ಮೂಡುವುದಾದರೂ ಹೇಗೆ ಸಾಧ್ಯ? ಕೇವಲ ಮೂರು ನಾಲ್ಕು ಸಾವಿರ ರೂ.ಗಳಿಗೆ ದುಡಿಯುವ ಸ್ಥಿತಿಯು ಬದ್ಧತೆ ಬಗ್ಗೆ ಮಾತಾಡುವವರಿಗೆ ಬಂದಿದ್ದರೆ ಆಗ ಪ್ರಾಯಃ ಅಂಥ ಮಾತುಗಳು ಅವರ ಬಾಯಿಯಿಂದ ಬರುತ್ತಿರಲಿಲ್ಲವೋ ಏನೋ ಎಂದು ಇಂಥವರು ನುಡಿಯುತ್ತಾರೆ.

ಶಿಕ್ಷಕರಲ್ಲಿ ಇಂದು ಸಂಘಟಿತ ಹಾಗೂ ಅಸಂಘಟಿತ ಎಂಬ ಎರಡು ವರ್ಗಗಳಿವೆ. ಮುಖ್ಯವಾಗಿ ಅಸಂಘಟಿತ ವಲಯದ ಶಿಕ್ಷಕರು ಖಾಸಗಿ ಶಾಲೆಗಳಲ್ಲಿ ದುಡಿಯುವವರು. ಇವರ ವೇತನ, ಸೇವಾಭದ್ರತೆ ತೀರ ನಿರಾಶಾದಾಯಕ ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಶಿಕ್ಷಕ ಸಂಘಟನೆಗಳು ಈ ವಲಯದ ಶಿಕ್ಷಕರ ಏಳ್ಗೆಯ ಬಗ್ಗೆ ವಿಶೇಷ ಹೋರಾಟ ಮಾಡಿಲ್ಲ ಎಂಬುದು ನಿಜ. ಸರಕಾರಗಳು, ಸಚಿವರು ಕಾಲದಿಂದ ಕಾಲಕ್ಕೆ ತುಟಿಮರುಕದ ಮಾತುಗಳನ್ನಾಡುತ್ತಾರೆಯೇ ಹೊರತು ವಿಧಾಯಕವಾದ ಕ್ರಮಗಳನ್ನು ಜಾರಿಗೊಳಿಸಿಲ್ಲ. ವೇತನ ಹೆಚ್ಚಿಸಬೇಕು, ಸೇವಾ ಭದ್ರತೆ ಒದಗಿಸಬೇಕು ಎಂಬುದು ನಿರ್ವಿವಾದವಾದರೂ ಅದಕ್ಕೂ ಬದ್ಧತೆಗೂ ಹೊಂದಿಕೆ ಮಾಡುವುದು ತರವಲ್ಲ. 'ಕಡಿಮೆ ಸಂಬಳಕ್ಕೆ ಕಡಿಮೆ ಬದ್ಧತೆ, ಅಧಿಕ ವೇತನಕ್ಕೆ ಅಧಿಕ ಬದ್ಧತೆ' ಎಂಬ ಸೂತ್ರ ಎಲ್ಲೂ ಇಲ್ಲ. ಅದು ವಾಸ್ತವಿಕವೂ ಅಲ್ಲ. ಮೂರು ನಾಲ್ಕು ಸಾವಿರ ರೂ. ಸಂಬಳ ತೆಗೆದುಕೊಂಡು ಮಕ್ಕಳನ್ನೇ ದೇವರೆಂದು ಭಾವಿಸಿ ದುಡಿಯುವ ಶಿಕ್ಷಕರಿದ್ದಾರೆ. ಅಂತೆಯೇ ತಿಂಗಳಿಗೆ ಮೂವತ್ತು ನಲ್ವತ್ತು ಸಾವಿರ ರೂ. ಸಂಬಳ ತೆಗೆದುಕೊಳ್ಳುತ್ತ ಆ ಸೆಮಿನಾರು ಈ ಸೆಮಿನಾರು ಎಂದು ಅಡ್ಡಾಡುತ್ತ, ರಾಜಕೀಯ ಮಾಡುತ್ತಾ ತರಗತಿಗಳಿಗೇ ಹಾಜರಾಗದೆ ವಿದ್ಯಾರ್ಥಿಗಳಿಗೆ ವಂಚನೆ ಮಾಡುವ ಪ್ರಾಧ್ಯಾಪಕರೂ ಇದ್ದಾರೆ. ಆದುದರಿಂದ ದಕ್ಷತೆ ಮತ್ತು ಬದ್ಧತೆಯನ್ನು ವಾಯುಭಾರಮಾಪಕ ಅಥವಾ ಉಷ್ಣತಾ ಮಾಪಕದಲ್ಲಿ ಅಳೆಯುವ ಹಾಗೆ ಅಳೆಯಲು ಬರುವುದಿಲ್ಲ.

ನಿಜ ಹೇಳಬೇಕೆಂದರೆ ನಾನು ೧೯೭೪ರಲ್ಲಿ ಕೇವಲ ರೂ. ೧೩೦ರ ವೇತನ ಶ್ರೇಣಿಯಲ್ಲಿ ಶಿಕ್ಷಕ ವೃತ್ತಿಯನ್ನು ಆಶ್ರಯಿಸಿದವನು. ಐದು ವರ್ಷಗಳ ಸೇವೆಯ ಬಳಿಕ ಆಕಾಶವಾಣಿಯಲ್ಲಿ ಪ್ರಸಾರಾಧಿಕಾರಿಯಾದೆ. ಮೂರು ವರ್ಷಗಳ ಬಳಿಕ ಶಿಕ್ಷಕ ವೃತ್ತಿಯೇ ಲೇಸೆಂದು ಮತ್ತೆ ಕಾಲೇಜನ್ನು ಸೇರಿಕೊಂಡೆ. ಆಕಾಶವಾಣಿಯ ವೃತ್ತಿಯಲ್ಲೇ ಮುಂದುವರಿದಿದ್ದರೆ ಈಗ ನಾನು ಉನ್ನತ ಹುದ್ದೆಯಲ್ಲಿ ಇರಬಹುದಿತ್ತೋ ಏನೋ. ಹಣ, ಕಾರು, ಅಧಿಕಾರ ಇಂತಹ್ತು ಆಕರ್ಷಣೆಗಳಿಗಿಂತ ಬೋಧನೆಯ ಪರಮಸುಖಕ್ಕಾಗಿ ಮತ್ತೆ ನಾನು ಶಿಕ್ಷಕ ವೃತ್ತಿಯನ್ನು ಅಪ್ಪಿಕೊಂಡೆ. ಆ ಬಗ್ಗೆ ನನಗೆ ಯಾವ ಪಶ್ಚಾತ್ತಾಪವೂ ಇಲ್ಲ. ಸೇವಾ ನಿವೃತ್ತಿಗೆ ಸಮೀಪಗತನಾಗಿರುವ ನನಗೆ

**ಡಾ|| ಮಹಾಬಲೇಶ್ವರ ರಾವ್**

'ಮುಂದೊಂದು ಜನ್ಮ ಇರುವುದಾದರೆ' ಆಗಲೂ ನನ್ನ ಆಯ್ಕೆ ಶಿಕ್ಷಕವೃತ್ತಿಯೇ!

ನನ್ನ ಮಾತುಗಳ ಅರ್ಥ ಶಿಕ್ಷಕರು ಅಲ್ಪವೇತನಕ್ಕೆ ತೃಪ್ತರಾಗಬೇಕು ಎಂದಲ್ಲ. ತಮ್ಮ ಸೇವಾಭದ್ರತೆ, ವೇತನ, ಸೇವಾನಿಯಮಗಳು ಇತ್ಯಾದಿಗಳ ಬಗ್ಗೆ ಕಾಲಕಾಲಕ್ಕೆ ಶಿಕ್ಷಕರು ಸಂಘಟಿತರಾಗಿ ಹೋರಾಡಲೇಬೇಕು. ಶಿಕ್ಷಕರ ಹೋರಾಟಗಳಿಂದಾಗಿಯೇ ಸಂಘಟಿತ ವಲಯದ ಶಿಕ್ಷಕರ ಸ್ಥಿತಿಗತಿಗಳು ಸುಧಾರಿಸಿವೆ. ಓರ್ವ ಶಿಕ್ಷಕ ಲೇಖಕನಾಗಿ ಕಳೆದ ಎರಡೂವರೆ ದಶಕಗಳಿಂದಲೂ ಶಿಕ್ಷಕರ ಸ್ಥಿತಿಗತಿಗಳ ಸುಧಾರಣೆಗಳ ಬಗ್ಗೆ ಕಾಲಕಾಲಕ್ಕೆ ನಾನು ದನಿ ಎತ್ತಿದ್ದೇನೆ. ವಿವಿಧ ವೇದಿಕೆಗಳಿಂದ ಆಡಳಿತ ಮಂಡಳಿಗಳು ಹಾಗೂ ಸರಕಾರಗಳು ಶಿಕ್ಷಕರನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿರುವುದನ್ನು ಟೀಕಿಸಿದ್ದೇನೆ. ಇಷ್ಟಾದರೂ ಅಧ್ಯಾಪನ ವೃತ್ತಿಯಲ್ಲಿ, ಶಿಕ್ಷಕರ ತಲೆಯಲ್ಲಿ ಸದಾ ಸಂಬಳದ ಚಕ್ರವೇ ತಿರುಗುತ್ತಿರಬಾರದು ಎಂದು ನಂಬಿರುವವನು ನಾನು.

ಶಿಕ್ಷಕರು ಬದ್ಧತೆಯಿಂದ ದುಡಿಯಬೇಕು, ನಿಜ. ಆದರೆ ಈ ಸಮಾಜ ಶಿಕ್ಷಕರ ಬಗ್ಗೆ ಯಾವ ಬದ್ಧತೆಯನ್ನು ಹೊಂದಿದೆ? ಹಿಂದೆಲ್ಲ ಹಳ್ಳಿಗಳಲ್ಲಿ ಶಿಕ್ಷಕರನ್ನು ಪೂಜ್ಯ ಭಾವನೆಯಿಂದ ನೋಡುತ್ತಿದ್ದರು. ಶಿಕ್ಷಕರ ಮನೆಗಳಲ್ಲಿ ಶುಭಕಾರ್ಯ ನೆರವೇರಿದರೆ ಜನ ಸಹಾಯಹಸ್ತ ಚಾಚುತ್ತಿದ್ದರು, ಧನಧಾನ್ಯ ಇತ್ಯಾದಿ ಪೂರೈಸುತ್ತಿದ್ದರು. ಆದರೆ ಇಂದು ಈ ಪ್ರವೃತ್ತಿ ಕಣ್ಮರೆಯಾಗಿದೆ. ತಮ್ಮ ಮಕ್ಕಳ ಹಿತಚಿಂತನೆ ಮಾಡುವ ಶಿಕ್ಷಕರಿಗೆ ಸಮಾಜ ಬದ್ಧವಾಗಿರಬೇಡವೇ, ಎಂಬ ಪ್ರಶ್ನೆಗಳೂ ಕೇಳಿಬರುತ್ತಿವೆ.

ಉತ್ತಮ ಶಿಕ್ಷಕನನ್ನು ಎಲ್ಲ ಕಾಲದ ಎಲ್ಲ ದೇಶಗಳ ಎಲ್ಲ ಸಮಾಜಗಳೂ ಗೌರವದಿಂದ ಕಂಡಿವೆ. ಇಂದಿಗೂ ತರಗತಿಗಳಲ್ಲಿ ಚೆನ್ನಾಗಿ ಪಾಠ ಹೇಳುವ, ವಿದ್ಯಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನ ನೀಡುವ ಶಿಕ್ಷಕರನ್ನು ವಿದ್ಯಾರ್ಥಿಗಳು ಹಾಗೂ ಹೆತ್ತವರು ಮತ್ತು ಇಡೀ ಸಮುದಾಯ ಶ್ರದ್ಧಾ ಭಕ್ತಿಗಳಿಂದ ಗೌರವಿಸುವುದುಂಟು. ಅಧಿಕಾರ, ಸ್ಥಾನಮಾನಗಳಲ್ಲಿ ಕೊರತೆಯಿದ್ದರೂ ಒಳ್ಳೆಯ ಶಿಕ್ಷಕನ ಬಗ್ಗೆ ಸರ್ವತ್ರ ಆದರವಿದೆ ಎಂಬುದನ್ನು ನಾನು ಗಮನಿಸಿದ್ದೇನೆ. ಸಮಾಜದಲ್ಲಿ ಶಿಕ್ಷಕರ ಬಗ್ಗೆ ಅಲ್ಲಲ್ಲಿ ಉಪೇಕ್ಷೆ, ಅಸಡ್ಡೆ, ತಾತ್ಸಾರಗಳು ಕಂಡುಬಂದಿದ್ದರೆ ಅದಕ್ಕೆ ನಿರ್ಲಕ್ಷ್ಯ ಮನೋಭಾವದ ಶಿಕ್ಷಕರ ಒಂದು ಸಣ್ಣ ಗುಂಪು ಕಾರಣ.

ಹಿಂದಣ ಸಮಾಜಗಳು ಸಾವಯವ ಸಂಘಟಿತ ಸಮಾಜಗಳಾಗಿದ್ದವು. ಈಗ ಒಟ್ಟು ವ್ಯವಸ್ಥೆ ಛಿದ್ರಗೊಂಡಿದೆ. ಜನ ತಮ್ಮ ಪಾಡನ್ನಷ್ಟೇ ಚಿಂತಿಸುತ್ತಾರೆ. ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ ಸಿಕ್ಕಿದರೆ ಸಾಕು. ಅದು ಹೇಗೆ ಸಿಗಬೇಕು ಎಂಬ ಬಗ್ಗೆ ಅಥವಾ ಅಂಥ ಶಿಕ್ಷಣ ನೀಡುವವರ ಸ್ಥಿತಿಗತಿಗಳ ಬಗ್ಗೆ ಚಿಂತೆಯಿಲ್ಲ. ಹೆತ್ತವರು ಶಿಕ್ಷಕರ ಬಗ್ಗೆ ಚಿಂತಿಸಬೇಕು ಎಂದು ನಿರೀಕ್ಷಿಸುವುದೂ ಸರಿಯಲ್ಲ, ವೈದ್ಯರಾಗಲಿ, ವಕೀಲರಾಗಲಿ, ಸರಕಾರಿ ನೌಕರರಾಗಲಿ ಸಮಾಜ ನಮ್ಮ ಬಗ್ಗೆ ಕಳಕಳಿ ತೋರಬೇಕು ಎಂದು ಹೇಳುವುದಿಲ್ಲ. ಇಷ್ಟಕ್ಕೂ ನಾವು ಹೋಟೆಲ್ ಮಾಣಿಗಳ ಬಗ್ಗೆ, ಕೂಲಿ ಕಾರ್ಮಿಕರ ಬಗ್ಗೆ, ರೈತರ ಬಗ್ಗೆ, ಅಂಗನವಾಡಿ ಸೇವಿಕೆಯರ ಬಗ್ಗೆ ಎಷ್ಟು ಬದ್ಧತೆ ತೋರಿಸುತ್ತೇವೆ?

ಹಿಂದಿನ ಕಾಲದಲ್ಲಿ ಜನ ಶಿಕ್ಷಕರ ಮನೆಗಳಿಗೆ ತರಕಾರಿ ಅಥವಾ ಇತರ ದವಸಧಾನ್ಯ ಸರಬರಾಜು ಮಾಡಿದಂತೆ ಈ ಕಾಲದಲ್ಲಿ ಮಾಡಿದರೆ ಕೂಡಲೆ ಭ್ರಷ್ಟಾಚಾರದ ಪುಕಾರು ಹುಟ್ಟಿಕೊಳ್ಳುತ್ತದೆ! ಶಿಕ್ಷಕರು ಪಾಲಕರಿಂದ ಸೇವೆ ಪಡೆದು ಅವರ ಮಕ್ಕಳಿಗೆ ಅಂಕಗಳನ್ನು, ಗ್ರೇಡ್‌ಗಳನ್ನು ಮಾರಾಟ ಮಾಡುತ್ತಿದ್ದಾರೆ ಎಂದು ಗುಲ್ಲೆಬ್ಬಿಸಲಾಗುತ್ತದೆ! ಆದುದರಿಂದ ಶಿಕ್ಷಕರು ಸಮಾಜದಿಂದ ಏನನ್ನೂ ನಿರೀಕ್ಷಿಸಬಾರದು. ನಿರೀಕ್ಷೆಗಳನ್ನಿಟ್ಟುಕೊಂಡು ದುಡಿಯುವುದು ಸ್ವಾರ್ಥಪರ ಚಿಂತನವಾದೀತು.

ಈ ಕಾಲದಲ್ಲಿ ಶಿಕ್ಷಕರ ಕೊರತೆಗಳನ್ನು, ಅವರ ದೌರ್ಬಲ್ಯಗಳನ್ನು ಮತ್ತು ದೌರ್ಜನ್ಯಗಳನ್ನು ಎತ್ತಿ ಹೇಳಲಾಗುತ್ತಿದೆ. ಒಟ್ಟು ಶಿಕ್ಷಕ ಸಮುದಾಯದ ಒಂದು ಸಣ್ಣ ಗುಂಪು ವಿಕೃತವಾಗಿ ವರ್ತಿಸುವುದನ್ನೇ ಮಾಧ್ಯಮಗಳು ಭೂತಾಕಾರವಾಗಿ ಬಿಂಬಿಸಿ ವಿಪರೀತ ಪ್ರಚಾರ ಕೊಡುತ್ತಿವೆ. ಸಾರ್ವಜನಿಕರು ಕೂಡ ''ಶಿಕ್ಷಕರು ಕೆಟ್ಟುಹೋಗಿದ್ದಾರೆ'' ಎಂದು ವಾಚಾಮಗೋಚರ ಟೀಕಿಸುತ್ತಾರೆ. ಆದರೆ ಸಾವಿರಾರು ಸಂಖ್ಯೆಯಲ್ಲಿರುವ ಒಳ್ಳೆಯ ಶಿಕ್ಷಕರ ಬಗ್ಗೆ ಯಾರೂ ಮಾತನಾಡುವುದಿಲ್ಲ. ಒಳ್ಳೆಯ ಶಿಕ್ಷಕರ ಸಾಧನೆಗಳಿಗೆ ಪ್ರಚಾರ ಸಿಗುತ್ತಿಲ್ಲ ಎಂದು ಬದ್ಧತೆಯ ವಿಚಾರಗಳಿಗೆ ಅಡ್ಡ ಮಾತು ಹೇಳುವವರಿದ್ದಾರೆ.

ಒಂದು ಕಾಲಕ್ಕೆ ಶಿಕ್ಷಕರು ಅಂತಲ್ಲ – ಯಾರು ಏನು ಮಾಡಿದರೂ ಸಾಮಾಜಿಕರು ಸಹಿಸಿಕೊಳ್ಳುತ್ತಿದ್ದರು. ''ದೇವರೇ, ಅವರಿಗೆ ಒಳ್ಳೆಯ ಬುದ್ಧಿ ಕೊಡಪ್ಪಾ'' ಎಂದು ಹೇಳಿ ಸುಮ್ಮನಾಗುತ್ತಿದ್ದರು. ಆದರೆ ಆಧುನಿಕ ವಿದ್ಯಾಭ್ಯಾಸದ ದೆಸೆಯಿಂದಾಗಿ ಜನ ಹಕ್ಕುಗಳ ಬಗ್ಗೆ ಜಾಗೃತರಾಗಿದ್ದಾರೆ. ಆತ್ಮಗೌರವ-ಪ್ರತಿಷ್ಠೆಯ ಭಾವನೆಗಳು ಉಕ್ಕಿ ಹರಿಯುತ್ತಿವೆ. ಅನ್ಯಾಯವನ್ನು ಸಣ್ಣ ರೀತಿಯಲ್ಲಾದರೂ ಪ್ರತಿಭಟಿಸಬೇಕು ಎಂಬ ತುಡಿತ ಮೂಡಿದೆ. ಮಾಧ್ಯಮದವರಿಗೂ 'ಬಕಾಸುರನ ಹೊಟ್ಟೆಗೆ' ಹಾಕುವುದಕ್ಕೆ ಆಹಾರ ಬೇಕಾಗಿದೆ. ಹೀಗಾಗಿ ಶಿಕ್ಷಕರ ದುರ್ವರ್ತನೆಗಳಿಗೆ ಕನ್ನಡಿ ಹಿಡಿಯಲಾಗುತ್ತಿದೆ. ಮಕ್ಕಳನ್ನು ಪೊರೆಯಬೇಕಾದ ಶಿಕ್ಷಕರೇ ವಿಪರೀತಮತಿಗಳಾದರೆ ಸಮಾಜ ಸಹಿಸಿಕೊಳ್ಳುವುದಿಲ್ಲ. ಆದುದರಿಂದ ಶಿಕ್ಷಕರ ಭ್ರಷ್ಟತೆಯ ಪ್ರಕರಣಗಳು ಬಯಲಿಗೆ ಬರುತ್ತಿವೆ. ಹಾಗಂತ ನಾವು ಮಾಡುವ ಕೆಲಸಕ್ಕೆ ಪ್ರಚಾರ ಕೊಡಿ ಎಂದು ಬಯಸುವುದು ತಪ್ಪಲ್ಲವೆ? ತನ್ನ ಪಾಲಿನ ಕರ್ತವ್ಯವನ್ನು ಚೆನ್ನಾಗಿ ನಿಭಾಯಿಸುವುದು ಮುಖ್ಯವಾಗಬೇಕೇ ಹೊರತು ಪ್ರಚಾರವಲ್ಲ. ಪ್ರಚಾರಕ್ಕಾಗಿ ಇರುವ ವೃತ್ತಿ ಅಧ್ಯಾಪಕನದ್ದಲ್ಲ. ಓರ್ವ ಶಿಕ್ಷಕ ಚೆನ್ನಾಗಿ ಕೆಲಸ ಮಾಡಿದರೆ ಆತನಿಗೆ ಸಿಗುವಷ್ಟು ಪ್ರಚಾರ ಉಳಿದ ಉದ್ಯೋಗಿಗಳಿಗೆ ಸಿಗುವುದಿಲ್ಲ. ವಿದ್ಯಾರ್ಥಿಗಳು, ಹೆತ್ತವರು, ಸಾಮಾಜಿಕರು ಎಲ್ಲರೂ ಆ ಶಿಕ್ಷಕನನ್ನು ಕೊಂಡಾಡುತ್ತಾರೆ. 'ಇಂಥ ಸಂಸ್ಥೆಯಲ್ಲಿ ಇಂಥ ಆದರ್ಶ ಶಿಕ್ಷಕರಿದ್ದಾರೆ' ಎಂಬ ಸುದ್ದಿ ಬಾಯಿಂದ ಬಾಯಿಗೆ ಹರಡುತ್ತದೆ. ಹೀಗೆ ಹರಡಿದ ಸುದ್ದಿ ಪತ್ರಿಕೆಯಲ್ಲಿ ಮೂಡಿ ಮರೆಯಾಗುವ ಕೊನೆ ಪ್ರಕರಣದ ಸುದ್ದಿಯಂತಲ್ಲ. ಶಿಕ್ಷಕನ ಗುಣಗಾನ ತಲೆಮಾರುಗಳ ತನಕ, ಆತ ಅಳಿದ ಮೇಲೂ ಮುಂದುವರಿಯುತ್ತದೆ. ''ಈ ಕಾಲೇಜಿನಲ್ಲಿ ಶೇಕ್ಸ್‌ಪಿಯರ್ ಸುಂದರ್ ರಾವ್ ಅನ್ನುವ ಪ್ರೊಫೆಸರ್ ಇದ್ದರು. ಅವರು ಶೇಕ್ಸ್‌ಪಿಯರ್ ನಾಟಕಗಳ ಬೋಧನೆಯಲ್ಲಿ ಸಿದ್ಧಹಸ್ತರು'' ಎಂಬ ಪ್ರತೀತಿ ಸುಂದರರಾಯರು ಅಳಿದ ಮೇಲೂ ಮುಂದುವರಿದಿದೆ! ರಾಧಾಕೃಷ್ಣನ್ ಅವರನ್ನು ಸಾರೋಟಿನಲ್ಲಿ ಕುಳ್ಳಿರಿಸಿ ಶಿಷ್ಯರು ಅದನ್ನು ರೈಲು ನಿಲ್ದಾಣದವರೆಗೆ ಎಳೆದುಕೊಂಡುಹೋದ ಘಟನೆ ಈಗಲೂ ಪ್ರಚಲಿತದಲ್ಲಿದೆಯಲ್ಲವೆ?

ಪತ್ರಿಕೆಗಳು, ಮಾಧ್ಯಮಗಳು, ಸ್ವಯಂಸೇವಾ ಸಂಸ್ಥೆಗಳು ಹಾಗೂ ಸರಕಾರಗಳು ಒಳ್ಳೆಯ ಶಿಕ್ಷಕರನ್ನು ಗುರುತಿಸಿ ಗೌರವಿಸುತ್ತಿಲ್ಲವೆ! ಶಿಕ್ಷಕರ ನಿವೃತ್ತಿಯ ಸಂದರ್ಭದಲ್ಲಿ ವಿದ್ಯಾಸಂಸ್ಥೆಯವರು, ಆಡಳಿತ ಮಂಡಳಿ, ಶಿಕ್ಷಕ ರಕ್ಷಕ ಸಂಘ, ಹಳೆ ವಿದ್ಯಾರ್ಥಿಗಳು ಹಾಗೂ ಸಮುದಾಯದವರು ಸೇರಿ ಸನ್ಮಾನ ಮಾಡುವ ಪರಂಪರೆ ಹಲವು ಊರುಗಳಲ್ಲಿದೆ. ಶಿಕ್ಷಕ ದಿನಾಚರಣೆಯಂದು ಸರಕಾರಗಳು ನೂರಾರು ಪ್ರವೃತ್ತ/ನಿವೃತ್ತ ಶಿಕ್ಷಕರನ್ನು ಸನ್ಮಾನಿಸುತ್ತಿವೆ. ಆದರ್ಶ ಶಿಕ್ಷಕರನ್ನು ರಾಜ್ಯ ಮಟ್ಟದಲ್ಲಿ ರಾಷ್ಟ್ರ ಮಟ್ಟದಲ್ಲಿ ಗುರುತಿಸಿ ಪ್ರಶಸ್ತಿಗಳನ್ನು ಸರಕಾರಗಳು ವಿತರಣೆ ಮಾಡುತ್ತಿವೆ. 'ಪ್ರಶಸ್ತಿ ರಾಜಕಾರಣ'ದ ಹೊರತಾಗಿಯೂ ಹಲವು ಉತ್ತಮ ಶಿಕ್ಷಕರಿಗೆ ಈ ಪ್ರಶಸ್ತಿಗಳು ಲಭಿಸುತ್ತಿವೆ. ಸಂಶೋಧನ ಪ್ರಬಂಧಗಳನ್ನು ಮಂಡಿಸಿದವರನ್ನು ಎನ್‌ಸಿಇಆರ್‌ಟಿ ಗುರುತಿಸಿ ಪುರಸ್ಕರಿಸುತ್ತಿದೆ. ಪತ್ರಿಕೆಗಳಲ್ಲಿ ಇಂಥ ಶಿಕ್ಷಕರ ಸಂದರ್ಶನಗಳು ಪ್ರಕಟವಾಗುತ್ತಿವೆ. ಸ್ವಂತ ಸಂಬಳದಿಂದ ಉಚಿತ ಸಮವಸ್ತ್ರ ಹಂಚಿದ, ಮಕ್ಕಳಿಗೆ ಸಾರಿಗೆ ವ್ಯವಸ್ಥೆ ಮಾಡಿದ, ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದ ಶಿಕ್ಷಕರ ಬಗ್ಗೆ ಪತ್ರಿಕೆಗಳಲ್ಲಿ ವರದಿಗಳು ಪ್ರಕಟವಾಗುತ್ತವೆ. ಪ್ರಜಾವಾಣಿ ಪತ್ರಿಕೆ ಮಾದರಿ ಶಾಲೆ - ಮಾದರಿ ಶಿಕ್ಷಕರ ಬಗ್ಗೆ ಒಂದೆರಡು ವರ್ಷಗಳ ಕಾಲ ಸತತವಾಗಿ ಚಿತ್ರ-ಲೇಖನಗಳನ್ನು ಪ್ರಕಟಿಸಿದೆ. ಸಾಹಿತ್ಯ ಸಮುದಾಯದಲ್ಲಿ ಹೆಚ್ಚು ಕಡಿಮೆ ಶೇ. ೫೦ರಷ್ಟು ಮಂದಿ ಶಿಕ್ಷಕರೇ ಇದ್ದು, ಅವರ ಕೃತಿಗಳ ಪ್ರಕಟಣೆ, ವಿಮರ್ಶೆಗಳು ನಿರಂತರ ನಡೆದೇ ಇವೆ. ಇದಕ್ಕಿಂತ ಇನ್ನೇನು ಪ್ರಚಾರ ಬೇಕು?

ಸ್ವಯಂ ನಿರ್ದೇಶನ, ಸ್ವಯಂ ನಿಯಂತ್ರಣ, ಸ್ವಾಧ್ಯಾಯ, ನಿರಂತರ ಅಧ್ಯಯನ, ಸ್ವಯಂ ಶಿಸ್ತು, ಸ್ವಯಂ ಅಭಿಪ್ರೇರಣೆ ಹಾಗೂ ಸ್ವಯಂ ಶೋಧ – ಇವು ವೃತ್ತಿಪರತೆಯ ಸೂತ್ರಗಳು. ಒಂದು ಆದರ್ಶ ಸನ್ನಿವೇಶವನ್ನು ಒದಗಿಸಿಕೊಟ್ಟರೆ ನಾನು ಇದನ್ನೆಲ್ಲ ಸಾಧಿಸುತ್ತೇನೆ ಎಂಬುದು ಹುಂಬುತನದ ಮಾತು. ಏಕೆಂದರೆ ಎಷ್ಟೇ ಉತ್ತಮವಾದ ಸಂಸ್ಥೆಯಾದರೂ ಅದು ಅತ್ಯಂತ ಆದರ್ಶಮಯ ಎನ್ನಲಾಗದು; ನ್ಯೂನತೆಗಳು ಇದ್ದೇ ಇರುತ್ತವೆ. ಆದುದರಿಂದ ''ವಿದ್ಯಾರ್ಥಿಗಳು ಹೇಗಿರುವರೋ ಹಾಗೆಯೆ ಅವರನ್ನು ಸ್ವೀಕರಿಸಬೇಕು'' ಎಂಬ ತತ್ವದಂತೆ ನಮಗೆ ದತ್ತವಾದ ಸನ್ನಿವೇಶದಲ್ಲಿ ಎಡರು ತೊಡರುಗಳ ನಡುವೆಯೇ ಈ ಗುಣಗಳನ್ನು ಸಾಧಿಸಬೇಕು; ದಾರಿ ಮಾಡಿಕೊಂಡು ಮುನ್ನಡೆಯಬೇಕು. ವೃತ್ತಿ ತೃಪ್ತಿಯನ್ನು ಗಳಿಸುವುದಕ್ಕೆ ಅಗತ್ಯವಾದ ಸನ್ನಿವೇಶಗಳನ್ನು ಸಾಮೂಹಿಕವಾಗಿ ಸೃಷ್ಟಿಸುವವರು ನಾವೇ ಆದುದರಿಂದ ನಮಗೆ ನಾವೇ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರಗಳನ್ನು ಕಂಡುಕೊಳ್ಳಲು ಮುಂದಾಗಬೇಕು. ಒಂದೆಡೆಯಲ್ಲಿ ಹೋರಾಟಗಳನ್ನು ನಡೆಸುತ್ತಲೇ ಮಗದೊಂದೆಡೆಯಲ್ಲಿ ನಮ್ಮ ಸಾಮರ್ಥ್ಯಗಳನ್ನು ಸುಧಾರಿಸಿಕೊಳ್ಳುತ್ತಾ ನಿರೀಕ್ಷಿಸಿದ್ದಕ್ಕಿಂತ ಅಧಿಕವಾದುದನ್ನು ನೀಡುತ್ತಾ ಮುಂದುವರಿಯುವುದು ಶ್ರೇಯಸ್ಕರ.

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು
ಉಡುಪಿ - ೫೭೬ ೧೦೨

# ಉಸಿರಾಗಲಿ ಕನ್ನಡ... ಹಸಿರಾಗಲಿ ಇಂಗ್ಲಿಷ್

ಪರಮೇಶ್ವರಯ್ಯ ಸೊಪ್ಪಿಮಠ

ಕನ್ನಡದ ಮೂಲಕ ಇಂಗ್ಲಿಷ್‌ಗೆ ಹೋಗಬೇಕು. ಆದುದರಿಂದ ಒಂದನೇ ತರಗತಿಯಲ್ಲಿ ಕನ್ನಡದ ಕಲಿಕೆ ಸರಿಯಾಗಿ ಆಗಬೇಕು. ಎರಡನೇ ತರಗತಿಯಲ್ಲಿ ಪೂರ್ವ ಪರಿಚಿತ ಸಡಿಲ ಇಂಗ್ಲಿಷ್ ಶಬ್ದಗಳು ಸ್ಪಷ್ಟವಾಗಬೇಕು. ಪ್ರಾಸ ಪದ್ಯಗಳೊಂದಿಗೆ ಇಂಗ್ಲಿಷ್‌ನ ಅಕ್ಷರಗಳು ಬಾಯಿಪಾಠವಾಗಬೇಕು. ಮೂರನೇ ತರಗತಿಯಲ್ಲಿ ಮತ್ತೆ ಹಿಂದಿನ ತರಗತಿ ಪುನರಾವರ್ತನೆಯೊಂದಿಗೆ ದಿನ, ತಿಂಗಳು, ಸಂಖ್ಯೆಗಳು, ಕಾಗುಣಿತ ಸಹಿತವಾಗಿ ಕಿವಿಶಬ್ದವಾಗಿ ಕಲಿಯಬೇಕು. ನಾಲ್ಕನೇ ತರಗತಿಯಲ್ಲಿ ಈ ಎಲ್ಲದರ ಪುನರಾವರ್ತನೆ ಜೊತೆಗೆ ಬರಹ ಕ್ರಿಯೆ ನಡೆಯಬೇಕು. ಈ ಹಂತದವರೆಗೆ ಇಂಗ್ಲಿಷ್ ಕಿಟಕಿ ಮಾತ್ರ ಆಗಬೇಕು, ಬಾಗಿಲಾಗಬಾರದು. ಇಂಗ್ಲಿಷ್‌ನಂತಹ ಭಾಷೆಯನ್ನು ಕಲಿಸುವಾಗ ಸಾಂಸ್ಕೃತಿಕ ಎಚ್ಚರಿಕೆ ತೀರಾ ಅಗತ್ಯ.

ಬಾಳಿ ಬದುಕಬೇಕಾದ ಕನ್ನಡಿಗರಲ್ಲಿ ವಿರಸ ಬೇಡ. ಸಮರಸವೇ ಜೀವನ ವಿರಸವೇ ಮರಣ ಎಂಬ ದಿವ್ಯಮಂತ್ರ ನೆನಪಿಸಿಕೊಳ್ಳುತ್ತಾ ಕನ್ನಡತನದ ಮೂಲಕ ಇಂಗ್ಲಿಷ್‌ಗೆ ಹೋಗೋಣ. ನಮ್ಮ ಮುದ್ದು ಕನ್ನಡದ ಕಂದಮ್ಮಗಳಿಗೆ ಎರಡು ಭಾಷೆಗಳನ್ನು ಕಲಿಯುವುದು ಹೊರೆಯೇ ಅನಿಸಬಹುದು. ಆದರೆ ಆಧುನಿಕ ಬದುಕಿನ ಭವಿಷ್ಯ ರೂಪಿಸಿಕೊಳ್ಳುವ ಈ ಸಂದರ್ಭದಲ್ಲಿ ಇಂಗ್ಲಿಷ್ ಕಲಿಯದಿದ್ದರೆ ಬದುಕು ಹೊರೆಯಾಗುತ್ತದೆ ಎನ್ನುವುದು ಅಷ್ಟೇ ಸತ್ಯ.

ಆಂಗ್ಲಭಾಷೆಯನ್ನು ಪ್ರಾಥಮಿಕ ಶಾಲೆಯ ಒಂದನೇ ತರಗತಿಯಿಂದಲೇ ಕಲಿಸಬೇಕು ಎಂಬ ವಿಷಯ ಈಗ ಭಾಷಾತಜ್ಞರಿಗೆ, ಭಾಷಾ ವಿಜ್ಞಾನಿಗಳಿಗೆ ಸಂಬಂಧಿಸಿದ್ದಲ್ಲ. ಅದು ಭಾಷಾ ಸಿದ್ಧಾಂತಗಳ ಪರಿಧಿಯ ಆಚೆಗೆ ಸಂದಿದೆ. ಭಾಷೆ ಕೇವಲ ಸಂವಹನ ಮಾಧ್ಯಮವಾಗಿದ್ದರೆ ಇಷ್ಟೊಂದು ಘರ್ಷಣೆ, ಜಿಜ್ಞಾಸೆಗಳು ನಡೆಯುತ್ತಿರಲಿಲ್ಲ. ಇಂಗ್ಲಿಷ್ ಭಾಷಾ ಕಲಿಕೆಯೊಂದಿಗೆ ಜಾಗತಿಕ ಮಾರುಕಟ್ಟೆಯ ಲಾಭ, ನಷ್ಟಗಳು, ಜನರ ಸಾಮಾಜಿಕ ಸ್ಥಾನಮಾನ ಸಂಚಲನದ ಪ್ರಶ್ನೆಗಳು, ಸಾಂಸ್ಕೃತಿಕ ಪರಂಪರೆಯನ್ನು ಭಾರತದ ಆಚೆಯ ಜನರಿಗೆ ಭಾಷಾಂತರಿಸುವ ಮಹತ್ವಾಕಾಂಕ್ಷೆಯ ಉದ್ದೇಶಗಳು ತಳುಕುಹಾಕಿಕೊಂಡು ವಿಷಯ ಜಟಿಲವಾಗಿದೆ. ಹಾಗಾಗಿ ಈ ವಿಷಯದ ಸಾಧಕ-ಬಾಧಕಗಳನ್ನು ಗಮನಿಸಬೇಕಾದುದು ಇಂದು ಅತ್ಯಗತ್ಯವಾಗಿದೆ.

**ಸಾಧಕ ಅಂಶಗಳು**

ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸಲು ಸರ್ಕಾರ ಹೊರಟಿರುವುದು ಗ್ರಾಮೀಣ ಮಕ್ಕಳಿಗೆ ವರದಾನ. ಅವಕಾಶವಂಚಿತ ಮಕ್ಕಳೆಲ್ಲ ಮೂಕರಂತಾಗಿದ್ದರು, ಈಗ ಅವರಿಗೆ ಬಾಯಿ ಬಂದಂತಾಗಿದೆ. ಗ್ರಾಮೀಣ ಪರಿಸರದ ಕನ್ನಡಿಗರು ತಮ್ಮ ಮಕ್ಕಳಿಗೆ ಇಂಗ್ಲಿಷ್ ಎಂಬ ಗುಮ್ಮನನ್ನು ಮೆಟ್ಟಿನಿಲ್ಲುವ ಸದವಕಾಶ ಒದಗಿಬಂದಿದೆ. ಅವರಿಗೆ ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ದೊಡ್ಡದೊಂದು ಆಶಾಕಿರಣ ಮೂಡಿದೆ.

ಸ್ವಾತಂತ್ರ್ಯ ಬಂದಾಗಿನಿಂದ ಇಂಗ್ಲಿಷ್ ವಿದೇಶಿ ಭಾಷೆ ಎಂದು ನಂಬಿಸಿ ಬಹುಪಾಲು ಹಳ್ಳಿಗರು ಮತ್ತು ಬಡವರು ಹಿಂದುಳಿಯುವಂತೆ ಮಾಡಲಾಗಿದೆ. ಈ ಹೊತ್ತಿಗೆ ಜಾಗತೀಕರಣದ ಕಬಂಧ ಬಾಹುಗಳಿಂದ ಕನ್ನಡ ಕಂದಮ್ಮಗಳನ್ನು ನೈಜತೆಯ ಕಡೆಗೆ, ವೈಜ್ಞಾನಿಕತೆಯೆಡೆಗೆ ಮುಂದುವರೆಯಲು ಸಜ್ಜುಗೊಳಿಸಲು ಇಂಗ್ಲಿಷ್ ಅತ್ಯಗತ್ಯ.

ಯಾವ ವ್ಯಕ್ತಿ, ರಾಜ್ಯ ಭಾಷೆ ಬದಲಾವಣೆಗೆ ಸ್ಪಂದಿಸುವುದಿಲ್ಲವೊ ಅವುಗಳ ಪ್ರಗತಿಯಲ್ಲಿ ಕುಂಠಿತ ಕಂಡುಬರುತ್ತದೆ. ಇವತ್ತಿನ ಕಂಪ್ಯೂಟರ್ ಯುಗದಲ್ಲಿ ಹಾಗೂ ಜಾಗತೀಕರಣದ ಸಂಧಿಕಾಲದಲ್ಲಿ ನಾವು ಇನ್ನೂ ಇಂಗ್ಲಿಷ್ ಕಲಿಸುವ ಬಗ್ಗೆ ಮೀನಾಮೇಷ ಎಣಿಸುತ್ತಾ ಕುಳಿತರೆ ನಮ್ಮ ಮಕ್ಕಳ ಭವಿಷ್ಯಕ್ಕೆ ತೊಂದರೆಯಾಗುತ್ತದೆ. ಹಾಗಾಗಿ ಸರ್ಕಾರ ಈಗ ತೆಗೆದುಕೊಂಡಿರುವ ನಿರ್ಧಾರ ಒಂದು ದಿಟ್ಟ ಪ್ರಗತಿಪರ ನಿಲುವು ಎನ್ನಬಹುದು.

ಆರ್ಥಿಕವಾಗಿ ಹಿಂದುಳಿದ ಎಲ್ಲ ಜಾತಿ, ಧರ್ಮದ ಅಧಿಕ ಮಕ್ಕಳು ಸರ್ಕಾರಿ ಕನ್ನಡ ಶಾಲೆಗಳಲ್ಲಿ ಓದುತ್ತಾರೆ. ಈ ಮಕ್ಕಳು ಭವಿಷ್ಯದಲ್ಲಿ ಇಂಗ್ಲಿಷ್ ಮಾಧ್ಯಮದ ಮಕ್ಕಳನ್ನು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಎದುರಿಸಬೇಕಾಗುತ್ತದೆ. ಅರ್ಧಂಬರ್ಧ ಇಂಗ್ಲಿಷ್ ಕಲಿತ ನಮ್ಮ ಬಹುತೇಕ ಕನ್ನಡ ಶಾಲಾ ಮಕ್ಕಳು ಕಡಿಮೆ ಅಂಕ ಗಳಿಸಿದರೆ, ಬೇಬಿಕ್ಲಾಸ್‌ನಿಂದ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತವರು ಅತೀ ಹೆಚ್ಚು ಅಂಕಗಳಿಸಿ ಡಾಕ್ಟರ್, ಇಂಜಿನಿಯರ್, ಸೈಂಟಿಸ್ಟ್, ಐ.ಟಿ., ಬಿ.ಟಿ., ಐ.ಎ.ಎಸ್., ಐ.ಪಿ.ಎಸ್.ಗೆ ಆಯ್ಕೆಯಾಗುತ್ತಾರೆ. ಹಾಗಾಗಿ ಕನ್ನಡ ಭಾಷೆ ಹೆಸರಿನಲ್ಲಿ ಬಡವರಿಗೆ ಅನ್ಯಾಯಮಾಡುವುದು ಎಷ್ಟು ಸಮಂಜಸ ?

ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ... ಮುಂತಾದ ರಂಗಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು, ಕನ್ನಡದಲ್ಲಿ, ಅವು ಬೆಳೆಯುತ್ತಿರುವ ವೇಗಕ್ಕೆ ಸಮಾನಾಂತರವಾಗಿ, ಭಾಷಾಂತರಿಸುವ ವ್ಯವಸ್ಥೆ ಇಲ್ಲ. ಸರ್ವರಿಗೂ ಇವು ತಕ್ಷಣ ತಲುಪಬೇಕಾದರೆ ಇಂಗ್ಲಿಷ್ ಕಲಿಕೆ ಅನಿವಾರ್ಯ. ಹಾಗಾಗಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ನಡುವಿನ ಹೋಲಿಕೆ, ವ್ಯತ್ಯಾಸಗಳು ಕಲಿಕೆಯನ್ನು ಹಗುರಗೊಳಿಸಬಲ್ಲವು.

ವಿಭಿನ್ನ ಹೊಸ ವಿಚಾರ, ತಂತ್ರಜ್ಞಾನ, ಆಧುನಿಕತೆ ಹಾಗೂ ಜಾಗತಿಕ ಸವಾಲುಗಳಿಗೆ ಇಂಗ್ಲಿಷ್ ಶಿಕ್ಷಣದ ಮೂಲಕ ತೆರೆದುಕೊಳ್ಳದಿದ್ದರೆ ಹಳ್ಳಿಯ ಕೆಳಹಂತದ ಸಮುದಾಯಗಳಿಗೆ ಭವಿಷ್ಯವೇ ಇಲ್ಲದಂತಾಗುತ್ತದೆ. ಅಲ್ಲದೆ ಜಗತ್ತಿನ ಎಲ್ಲಾ ಅನುಭವಗಳಿಗೆ ಹಳ್ಳಿಗಳು ಒಳಗಾಗುವ ಮೂಲಕವೇ ಅವು, ಅವುಗಳ ಸಂಸ್ಕೃತಿ, ಸಾಹಿತ್ಯ, ಭಾಷೆ, ಚರಿತ್ರೆ, ವಿಜ್ಞಾನ ಮುಂತಾದವುಗಳನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ. ತಳಹದಿಯು ಗಟ್ಟಿಯಾದರೆ ಹೆಚ್ಚಿನ ಜ್ಞಾನವನ್ನು ಸುಲಭವಾಗಿ ಪಡೆಯಬಹುದು.

ಇಂದು ಆಂಗ್ಲ ಭಾಷೆಯ ನಿರರ್ಗಳ ಬಳಕೆಯಲ್ಲಿ ಪ್ರಬುದ್ಧತೆಯನ್ನು ಪ್ರಾಥಮಿಕ ಹಂತದಲ್ಲಿ ಮೈಗೂಡಿಸಿಕೊಳ್ಳುವುದರಿಂದ ಆಗುವ ದೂರಗಾಮಿ ಲಾಭಗಳನ್ನು ಆಂಗ್ಲಮಾಧ್ಯಮ ಶಾಲೆಯ ಪ್ರಾಥಮಿಕ ಹಂತದ ವಿದ್ಯಾರ್ಥಿಗಳನ್ನು ಗಮನಿಸಿದರೆ ಸಾಕು, ಅವರ ಆತ್ಮಬಲದ ಪರಿಚಯವಾಗುತ್ತದೆ. ಇದನ್ನೇ ಮಾನದಂಡವಾಗಿ ಕನ್ನಡ ಮಾಧ್ಯಮ ಪ್ರೌಢಶಾಲಾ ವಿದ್ಯಾರ್ಥಿಗಳಲ್ಲಿ ಆ ಮಟ್ಟದ ಆಂಗ್ಲಭಾಷಾ ಪ್ರಬುದ್ಧತೆ ಕಾಣಲಿಕ್ಕೆ ಸಾಧ್ಯವಿಲ್ಲ. ಇದನ್ನು ನಗರದ ಶಿಷ್ಟಜನ ಮನಗಂಡು ಎಲ್ಲ ಅವಕಾಶಗಳನ್ನು ಎರಡೂ ಕೈಗಳಿಂದ ಬಾಚಿಕೊಳ್ಳುತ್ತಿದ್ದಾರೆ. ಅದರ ಪರಿಣಾಮವಾಗಿ ಸಣ್ಣಪುಟ್ಟ ನಗರಗಳಲ್ಲೂ ಇಂಗ್ಲಿಷ್ ಮಾಧ್ಯಮ ಶಾಲೆಗಳು ನಾಯಿಕೊಡೆಯಂತೆ ತಲೆ ಎತ್ತುತ್ತಿವೆ. ಈಗಲಾದರೂ ಎಚ್ಚೆತ್ತುಕೊಳ್ಳದಿದ್ದರೆ ಹೇಗೆ ?

ಪೋಷಕರು ಆಂಗ್ಲಮಾಧ್ಯಮ ಶಾಲೆ ಕಡೆಗೆ ಒಲವು ತೋರಿಸುತ್ತಾರೆ. ಯಾರಿಗೆ ತಾನೆ ತಮ್ಮ ಮಕ್ಕಳ ಭವಿಷ್ಯದ ಚಿಂತೆ ಇರುವುದಿಲ್ಲ? ಕನ್ನಡ ಉಳಿಸಲು ಹೋಗಿ ಮಕ್ಕಳ ಭವಿಷ್ಯ ಅಳಿಸಲು ಪ್ರಯತ್ನಿಸುವವರು ಯಾರಿದ್ದಾರೆ ಹೇಳಿ. ಇಂಗ್ಲಿಷ್ ಕಲಿಯುವುದರಿಂದ ಕನ್ನಡ ನಶಿಸುತ್ತದೆ ಎಂಬುದು ಶುದ್ಧ ತಪ್ಪು. ವಿದೇಶದ ಇಂಗ್ಲಿಷ್ ಪರಿಸರದಲ್ಲಿರುವ ಕನ್ನಡಿಗರಲ್ಲಿ ಕನ್ನಡ ಮಾತನಾಡಬೇಕೆಂದು ಕಾತುರದ ಭಾವನೆ ಅಳಿಸಲು ಸಾಧ್ಯವಿಲ್ಲ. ಅಲ್ಲಿನ ಕನ್ನಡಿಗರು ತಮ್ಮ ಮಾತೃಭಾಷೆ, ಕನ್ನಡ ಭಾಷೆ, ಸಂಸ್ಕೃತಿ ಬಹುಶಃ ಮರೆತಿರುವುದಿಲ್ಲ. ಅದಕ್ಕಾಗಿ ಅಂತರರಾಷ್ಟ್ರೀಯ

ಕನ್ನಡ ಸಮ್ಮೇಳನಗಳು ಯಶಸ್ವಿಯಾಗಿ ನಡೆಯುತ್ತಿವೆ.

ಪ್ರಾಥಮಿಕ ಹಂತದಲ್ಲಿ ಮಗುವಿನ ಮನಸ್ಸು ಹೆಚ್ಚು ಗ್ರಹಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ. ೩ರಿಂದ ೬ನೇ ವಯಸ್ಸಿನ ಅವಧಿಯಲ್ಲಿ ಮಕ್ಕಳು ಎರಡು ಅಥವಾ ಮೂರು ಭಾಷೆ ಕಲಿಯಬಲ್ಲರು. ಮಗುವಿನ ಏಳನೇ ವಯಸ್ಸಿನ ನಂತರ ಭಾಷಾ ಕಲಿಕೆ ಕಷ್ಟವಾಗುತ್ತದೆ ಎಂಬುದನ್ನು ಸಂಶೋಧನೆಗಳು ದೃಢಪಡಿಸಿವೆ. ಒಂದನೇ ತರಗತಿಗೆ ಬಂದ ಮಗುವಿನ ಮನಸ್ಸು ನಿರ್ಮಲ, ಸ್ಫೂರ್ತಿದಾಯಕವಾಗಿರುವುದರಿಂದ ಪ್ರಾರಂಭದಲ್ಲಿ ಅದು ಏನನ್ನು ಕಲಿಸಿದರೂ ತಕ್ಷಣ ಕಲಿಯುತ್ತದೆ. ಇಂಗ್ಲಿಷ್ ಅಲ್ಲಿ ಕಲಿಕೆಯಾದರೆ ಸುಲಭವಾಗಿ ಮನನಮಾಡಿಕೊಂಡು ಮುಂದಿನ ತರಗತಿಗೆ ಅನುಕೂಲವಾಗುತ್ತದೆ.

ಪ್ರಸ್ತುತ ನಮ್ಮಲ್ಲಿ ೫ನೇ ತರಗತಿಯಿಂದ ಇಂಗ್ಲಿಷ್ ಕಲಿಸುವ ವ್ಯವಸ್ಥೆ ಇದೆ. ಆದರೆ ಆ ತರಗತಿಯಲ್ಲಿ ಮಕ್ಕಳು ಗ್ರಹಿಸುವ ಸಾಮರ್ಥ್ಯ ಕಡಿಮೆ ಇರುತ್ತದೆ. ದೈಹಿಕವಾಗಿ ಮಗು ಬೆಳೆದಿದ್ದರೂ, ಮಾನಸಿಕವಾಗಿ ಆತ್ಮವಿಶ್ವಾಸದ ಹಾದಿಯನ್ನು ಪ್ರವೇಶ ಮಾಡುತ್ತದೆ, ಯೋಚಿಸುವ ಸಾಮರ್ಥ್ಯ ಬಂದಿರುತ್ತದೆ. ಭೇದ-ಭಾವ, ಹೆಚ್ಚು-ಕಡಿಮೆ, ಕೀಳರಿಮೆ ಮನೋಭಾವಗಳು ಬೆಳೆಯುವುದಕ್ಕಿಂತ ಮುಂಚೆ ಭಾಷೆಯ ಕಲಿಕೆಯಾಗಬೇಕು. ಆಗ ಮಾತ್ರ ಮಕ್ಕಳ ಮನಸ್ಸಿನಲ್ಲಿ ಉತ್ತಮ ಕಲಿಕೆಯಾಗುವುದರಲ್ಲಿ ಅನುಮಾನವಿಲ್ಲ.

ಹಿರಿಯ ಕನ್ನಡ ಸಾಹಿತಿಗಳು ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸುವ ಬಗ್ಗೆ ತಜ್ಞರ ಹಾಗೂ ಸಾಹಿತಿಗಳ ಸಮಿತಿ ರಚಿಸಲು ಸೂಚಿಸಿದ್ದಾರೆ. ಬಹಳ ವರ್ಷಗಳ ಹಿಂದಿನಿಂದ ನಗರಗಳಲ್ಲಿ ೧ನೇ ತರಗತಿಗಿಂತ ಮುಂಚೆಯೇ ಆಂಗ್ಲ ಮಾಧ್ಯಮದಲ್ಲಿ ಬೋಧಿಸುತ್ತಿದ್ದಾರೆ. ಇವರಿಗೂ ಮಕ್ಕಳಿಲ್ಲವೇ ? ಇವರಿಗೆ ಯಾವ ತಜ್ಞರ ಸಮಿತಿ ಶಿಫಾರಸು ಮಾಡಿ ಬೋಧಿಸಲು ತಿಳಿಸಿತ್ತು? ಆಂಗ್ಲಮಾಧ್ಯಮ ಶಾಲೆಗಳು ಎಲ್ಲೆಂದರಲ್ಲಿ ಹುಟ್ಟುತ್ತಿರುವಾಗ ಇವರ ಕನ್ನಡ ಪ್ರೇಮ ಎಲ್ಲಿತ್ತು ? ಈ ಪ್ರಶ್ನೆಗಳು ಸಹಜವಾಗಿ ಕಾಡುತ್ತವೆ.

ಕನ್ನಡ ಉಳಿಸುವುದು, ಬೆಳೆಸುವುದು ಕೇವಲ ಹಳ್ಳಿಗರ, ಬಡವರ, ಸಾಹಿತಿಗಳ ಕೆಲಸವಲ್ಲ, ಅದು ನಾಡಿನಲ್ಲಿರುವ ಎಲ್ಲರ ಜವಾಬ್ದಾರಿಯಾಗಬೇಕು. ಗ್ರಾಮೀಣ ಮಕ್ಕಳು ಬದುಕಿಗಾಗಿ, ಅನ್ನಕ್ಕಾಗಿ ಇಂಗ್ಲಿಷ್ ಕಲಿಯಬಾರದು ಎಂಬುದು ಸಮಂಜಸವಲ್ಲ. ಹಳ್ಳಿಗರು ಕನ್ನಡ ಉಳಿಸಬೇಕು, ಪೇಟೆಯವರು ಇಂಗ್ಲಿಷ್‌ನಲ್ಲಿ ಮೆರೆಯಬೇಕೆಂಬುದು ಯಾವ ನ್ಯಾಯ ? ಹಾಗಾಗಿ ಪ್ರಪಂಚವನ್ನು ಕಾಣಲು ಒಂದು ಕಣ್ಣು ಇಂಗ್ಲಿಷ್ ಆದರೆ, ಇನ್ನೊಂದು ಕಣ್ಣು ಮಾತೃಭಾಷೆ ಕನ್ನಡವಾಗಬೇಕು.

ಬೆಂಗಳೂರಿನ ಇಂಗ್ಲಿಷ್ ಪ್ರಾದೇಶಿಕ ಸಂಸ್ಥೆ ಒಂದು ಸಮೀಕ್ಷೆಯನ್ನು ನಡೆಸಿತು. ಅದರಲ್ಲಿ ಹೊರಬಂದ ಪ್ರಮುಖ ಅಂಶಗಳೆಂದರೆ, ಅತ್ಯಧಿಕ ಪಾಲಕರು ತಮ್ಮ ಮಕ್ಕಳಿಗೆ ಇಂಗ್ಲಿಷ್ ಕಲಿಕೆಗೆ ಅವಕಾಶವಿರಬೇಕು ಎಂದಿದ್ದಾರೆ. ಅದರಲ್ಲಿ ಶೇ. ೭೫ರಷ್ಟು ಜನರು ೧ನೇ ತರಗತಿಯಿಂದ ಇಂಗ್ಲಿಷ್ ಕಲಿಸಬೇಕೆಂದಿದ್ದಾರೆ. ಶೇ. ೧೩ರಷ್ಟು ಜನರು ೩ನೇ ತರಗತಿಯಿಂದ ಕಲಿಸ ಬೇಕೆಂದಿದ್ದಾರೆ. ಈಗಾಗಲೇ ನಮ್ಮ ಮಕ್ಕಳು ೨೪೮ ಇಂಗ್ಲಿಷ್ ಶಬ್ದಗಳನ್ನು ಬಳಸುತ್ತಿರುವುದು ಗೊತ್ತಾಗಿದೆ. ಅಂದಮೇಲೆ ಪಾಲಕರ ಅಪೇಕ್ಷೆಗೆ ಸ್ಪಂದಿಸುವುದು ಒಳ್ಳೆಯದು.

ಇಂಗ್ಲಿಷ್‌ಅನ್ನು ವ್ಯಾಕರಣ ರಹಿತವಾಗಿ ಒಂದಲ್ಲ ಒಂದು ರೀತಿಯಲ್ಲಿ ಹೇಳಿಕೊಡಬೇಕಾದದ್ದು ಸಾಮಾಜಿಕ ನ್ಯಾಯದ ಪ್ರಶ್ನೆ. ಅವಕಾಶಹೀನ ಸಮುದಾಯದ ಮಕ್ಕಳಿಗೆ ಶಿಕ್ಷಣದ ಆರಂಭದಲ್ಲಿ ವ್ಯಾಕರಣಬದ್ಧ ಇಂಗ್ಲಿಷ್ ಹೇಳಿಕೊಡುವ ಅಗತ್ಯ ಇಲ್ಲ. ಪಠ್ಯಪುಸ್ತಕದ ಅವಶ್ಯಕತೆ ಕನಿಷ್ಠ ಮೊದಲ ಮೂರು ವರ್ಷಗಳಲ್ಲಿ ಬೇಕಾಗಿಲ್ಲ. ಅವರಿಗೆ ಇಂಗ್ಲಿಷ್ ಭಾಷೆಯನ್ನು ಯಾವುದೇ ರೀತಿಯ ಪರೀಕ್ಷೆಗೆ ಒಳಪಡಿಸುವ ಅಗತ್ಯವೂ ಇಲ್ಲ. ಈ ರೀತಿ ಇಂಗ್ಲಿಷ್ ಕಲಿಕೆಯಿಂದ ಕನ್ನಡಕ್ಕೆ ಕುತ್ತಿಲ್ಲ.

**ಬಾಧಕ ಅಂಶಗಳು**

ಮಕ್ಕಳು ಚಿಕ್ಕ ವಯಸ್ಸಿನಲ್ಲಿ ಭಾಷೆಗಳನ್ನು ಅತ್ಯಂತ ಸುಲಭವಾಗಿ ಕಲಿತುಕೊಳ್ಳುತ್ತಾರೆ ಎಂದು ನೋಮ್ ಚೋಮ್‌ಸ್ಕಿ ಹೇಳಿದ್ದಾನೆ ಎಂಬ ಮಾತು ಪೂರ್ಣ ಸತ್ಯವಲ್ಲ. ಜೊತೆಗೆ ಅರ್ಧಸತ್ಯ ಯಾವಾಗಲೂ ಅಪಾಯಕಾರಿಯಾಗಿ ಇರುತ್ತದೆ. ನೋಮ್ ಚೋಮ್‌ಸ್ಕಿ ಲೋಕಪ್ರಸಿದ್ಧ ಭಾಷಾ ವಿಜ್ಞಾನಿಯಾಗಿರುವುದರಿಂದ ಅವನ ಮಾತನ್ನು ವಾದಕ್ಕೆ ತಂದರೆ ಬಲ ಬರುತ್ತದೆಂದು ನಂಬಿಕೆ ಇದೆ. ವಾಸ್ತವವಾಗಿ ಚೋಮ್‌ಸ್ಕಿ ಹೇಳುವುದೇನೆಂದರೆ ಚಿಕ್ಕ ಮಕ್ಕಳು (ಅಂದರೆ ಸುಮಾರು ೨-೫ ವರ್ಷದವರು) ಅವರು ಯಾವುದೇ ಪ್ರದೇಶಗಳಿಗೆ, ವರ್ಣಗಳಿಗೆ ಸೇರಿದವರಾಗಿರಲಿ ತಂತಮ್ಮ ಮನೆಯ ಪರಿಸರದ ಭಾಷೆಯನ್ನು ಯಾವುದೇ ಶಿಕ್ಷಣವಿಲ್ಲದೆ ಕಲಿತುಕೊಳ್ಳುತ್ತಾರೆ ಎಂದಷ್ಟೇ. ಹಾಗಾಗಿ ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸುವುದು ಸೂಕ್ತವಲ್ಲ.

ಸ್ವಾತಂತ್ರ್ಯಾನಂತರದ ಕೇಂದ್ರ ಸರ್ಕಾರ ರಚಿಸಿದ ಎಲ್ಲ

## ನೋಡು ಭಗವಂತ ನಿನ್ನ ಈ ಜಗದ ಸ್ಥಿತಿ



**ನೋ**ಡು ಭಗವಂತ, ನಿನ್ನ ಈ ಜಗದ ಸ್ಥಿತಿ ಏನಾಗಿದೆಯೆಂದು
ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ.
ಸೂರ್ಯ ಬದಲಾಗಲಿಲ್ಲ, ಚಂದ್ರ ಬದಲಾಗಲಿಲ್ಲ, ಆಕಾಶ ಬದಲಾಗಲಿಲ್ಲ
ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ.

ಬಂದಿದೆ ಬಹು ಕೆಟ್ಟಕಾಲ, ಇಂದು ಮನುಷ್ಯ ಲಫಂಗನಾಗಿದ್ದಾನೆ
ಇಲ್ಲಿ ಜಗಳ ಅಲ್ಲಿ ದೊಂಬಿ, ನರನು ನರ್ತಿಸುತ್ತಿದ್ದಾನೆ ನಗ್ನನಾಗಿ
ಕಪಟ ಕೈಗಳಿಂದ ಮಾರುತ್ತಿದ್ದಾನೆ ಸತ್ಯನಿಷ್ಠೆಯನ್ನು
ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ.

ರಾಮನ ಭಕ್ತರು ರಹೀಮನ ಸೇವಕರು ರಚಿಸುತ್ತಿದ್ದಾರೆ ಮೋಸದ ಜಾಲವನ್ನು
ಈ ಮತಾಂಧರು ಎಷ್ಟು ಕಪಟಿಗಳಾಗಿದ್ದಾರೆ, ನಾವು ನೋಡಿದೆವು ಇವರ ದಂಧೆಯನ್ನು
ಇವರ ಕುತಂತ್ರದಿಂದ ಈ ದೇಶವಾಯಿತು ಮಸಣ
ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ.

ನಾವು ನಮ್ಮನಮ್ಮಲ್ಲೇ ಜಗಳವಾಡದೇ ಹೋಗಿದ್ದಿದ್ದರೆ ನಮ್ಮ ಮನಗಳು ಹಾಳಾಗುತ್ತಿದ್ದವೇಕೆ,
ಲಕ್ಷಾಂತರ ಮನೆಗಳು ನಾಶವಾಗುತ್ತಿದ್ದವೇಕೆ, ಈ ಮಕ್ಕಳು ತಾಯಂದಿರಿಂದ ಅಗಲುತ್ತಿದ್ದರೇಕೆ,
ಪ್ರೀತಿಯ ಬಾಪುವಿನ ಪ್ರಾಣ ಬಿಕ್ಕಿ ಬಿಕ್ಕಿ ಅಳುತ್ತಿತ್ತೇಕೆ ?
ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ !

ಹಿಂದಿ ಮೂಲ : **ಪ್ರದೀಪ್** ಕನ್ನಡ ಭಾವಾನುವಾದ : **ಶ್ರೀನಿವಾಸ್ ವಿ. ಸುತ್ರಾವೆ**
೧೬೪೬/೧೮, ಮೊದಲ ಮಹಡಿ, ವಿದ್ಯಾನಗರ, ದಾವಣಗೆರೆ - ೫೭೭ ೦೦೫

ಸಮಿತಿಗಳು ಮತ್ತು ಆಚಾರ್ಯ ರಾಮಮೂರ್ತಿ ಸಮಿತಿ ಸೇರಿ, ಎಲ್ಲವೂ ಪ್ರಾಥಮಿಕ ಹಂತದಲ್ಲಿ ಎಂದರೆ, ೧-೪ನೇ ತರಗತಿಯವರೆಗೆ ಮಾತೃಭಾಷೆಯಲ್ಲೇ ಶಿಕ್ಷಣ ನೀಡಬೇಕೆಂದು ಸರ್ವಾನುಮತದ ಅಭಿಪ್ರಾಯ ನೀಡಿವೆ. ಈ ನಿಲುವನ್ನು ಉಚ್ಚ ನ್ಯಾಯಾಲಯವೂ ಪುರಸ್ಕರಿಸಿದೆ. ನಮ್ಮ ರಾಜ್ಯ ಸರಕಾರ ೧೯೯೪ರಲ್ಲಿ ನಿರ್ಣಯ ಮಾಡಿ ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯೊಂದರಲ್ಲೇ ವಿದ್ಯಾಭ್ಯಾಸ ನಡೆಯಬೇಕು ಎಂದಿದೆ. ಈಗ ಇದಕ್ಕೆ ವಿರುದ್ಧ ನಿರ್ಣಯ ಕೈಗೊಂಡು ಪ್ರಾಥಮಿಕ ಶಿಕ್ಷಣದ ವಿಷಯದಲ್ಲಿ ಈ ರೀತಿ ಚೆಲ್ಲಾಟವಾಡುತ್ತಿರುವುದು ರಾಷ್ಟ್ರದ ಹಿತದೃಷ್ಟಿಯಿಂದ ಕ್ಷೇಮಕರವಲ್ಲ. ಗೋಕಾಕ ಚಳುವಳಿ ರೀತಿಯಲ್ಲಿ ಇನ್ನೊಂದು ಪ್ರಭಾವಿ ಚಳುವಳಿಗೆ ಇದು ಎಡೆಮಾಡಿಕೊಟ್ಟರೆ ಆಶ್ಚರ್ಯವಿಲ್ಲ.

ಇಂದು ಕನ್ನಡ ಮಾಧ್ಯಮ ಶಿಕ್ಷಣ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳುತ್ತಿಲ್ಲ. ಕನ್ನಡ ಶಿಕ್ಷಕರ ಕೊರತೆ ಇದೆ. ಕನ್ನಡ ಭಾಷೆ ಹೇಳಿಕೊಡುವ ವಾಗ್ದಾನದ ಮೂಲಕ ಖಾಸಗಿ ಶಿಕ್ಷಣ ಸಂಸ್ಥೆಗಳು ಆಂಗ್ಲ ಮಾಧ್ಯಮ ಶಾಲೆಗಳನ್ನು ಆರಂಭಿಸಿ ಕನ್ನಡ ಹೇಳಿಕೊಟ್ಟಿಲ್ಲ. ಔಪಚಾರಿಕ ಶಿಕ್ಷಣದಲ್ಲಿ ಸಾಕಷ್ಟು ಸಮಸ್ಯೆಗಳಿದ್ದು ಮೊದಲು ಅವನ್ನು ಬಗೆಹರಿಸಬೇಕು. ಮುಂದಿನ ಶೈಕ್ಷಣಿಕ ವರ್ಷದಿಂದ ೧ನೇ ತರಗತಿಯಿಂದ ಇಂಗ್ಲಿಷ್ ಭಾಷೆ ಕಲಿಕೆ ಅನುಷ್ಠಾನಗೊಳಿಸಿದರೆ ಹೊರ ರೂಪದ ಬದಲಾವಣೆ ಆಗಬಹುದೇ ಹೊರತು ಆಂತರಿಕ ಬದಲಾವಣೆ ಆಗುವುದಿಲ್ಲ.

ಇಂಗ್ಲಿಷ್ ಕಲಿಕೆ ಜಾಗತೀಕರಣದ ಫಲ. ಇದು ನವ ವಸಾಹತುಶಾಹಿ ರೂಪದಲ್ಲಿ ನಮ್ಮ ಸಮಾಜವನ್ನು, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿ ಒಡೆದಾಳಲು ಪ್ರಯತ್ನಿಸುತ್ತದೆ. ಹೆಚ್ಚಿನ ಇಂಗ್ಲಿಷ್ ಪ್ರಾಧ್ಯಾಪಕರು ೧ನೇ ತರಗತಿಯಿಂದ ಇಂಗ್ಲಿಷ್ ಕಲಿಸಬಾರದೆನ್ನುತ್ತಾರೆ. ವಿದೇಶಗಳಲ್ಲಿ ಮೊದಲೆರಡು ವರ್ಷಗಳ ಶಿಕ್ಷಣದಲ್ಲಿ ವಿದೇಶಿ ಭಾಷಾ ಕಲಿಕೆ ಆರಂಭಿಸುವುದಿಲ್ಲ. ಅಷ್ಟೇಕೆ, ಜಪಾನಿನಲ್ಲಿ ಇಂಗ್ಲಿಷನ್ನು ೬ನೇ ತರಗತಿಯಿಂದ ಕಲಿಸುತ್ತಾರೆ. ೨೦೦೩ರ ಯುನೆಸ್ಕೊ ವರದಿಯಲ್ಲೂ ಮಾತೃಭಾಷಾ ಮಾಧ್ಯಮವನ್ನೇ ಪ್ರತಿಪಾದಿಸಿರುವಾಗ ನಮ್ಮಲ್ಲೇಕೆ ಈ ವಿಪರ್ಯಾಸ ?

ಈಗ ಎಲ್ಲೆಲ್ಲೂ ಇಂಗ್ಲಿಷ್ ಬೇಕು ಎಂಬ ಕೂಗು. ಇಂಗ್ಲಿಷ್ ಹುಳ ತಲೆ ಒಳಗೆ ಹೊಕ್ಕಿದೆ. ಅದನ್ನು ತೆಗೆದು ಹಾಕುವುದು ಅಷ್ಟು ಸುಲಭವಲ್ಲ. ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿತರೆ ತಮ್ಮ ಜೀವನದಲ್ಲಿ ಅಪೂರ್ವ ಅವಕಾಶ ತಮ್ಮದಾಗಿಸಿಕೊಳ್ಳುತ್ತಾರೆ ಎಂಬುದು ಬರೀ ಭ್ರಮೆ. ಇಂಗ್ಲಿಷ್ ಒಂದೇ ನಿರುದ್ಯೋಗ ಸಮಸ್ಯೆಯಂತಹ ಎಲ್ಲ ಸಮಸ್ಯೆಗಳಿಗೆ ಪರಿಹಾರವಾಗಬಲ್ಲದೆ ? ಐ.ಟಿ., ಬಿ.ಟಿ. ಹೊರತುಪಡಿಸಿ ಬೇರೆ ರಂಗಗಳಲ್ಲಿ ಇಂಗ್ಲಿಷ್ ಪಾಂಡಿತ್ಯವಿಲ್ಲದೆ ಪ್ರವೇಶಿಸಲು ಸಾಧ್ಯವಿಲ್ಲವೆ ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಇಂಗ್ಲಿಷ್ ಕಲಿಕೆಗೆ ವಿರೋಧವಿಲ್ಲ. ಆದರೆ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಹೇರುತ್ತಿರುವುದಕ್ಕೆ ವಿರೋಧವಿದೆ. ಇಂಗ್ಲಿಷ್ ಭಾಷೆ ಸಂವಹನ ದೃಷ್ಟಿಯಿಂದ ಅಗತ್ಯ. ಇದಕ್ಕಾಗಿ ಪ್ರಾಥಮಿಕ ಶಿಕ್ಷಣದಲ್ಲಿ ತರುವುದಕ್ಕಿಂತ ಭಾಷಾ ಸಂಸ್ಥೆಗಳಿಗೆ ಈ ಜವಾಬ್ದಾರಿ ನೀಡಿ ಅಭಿಯಾನ ನಡೆಸಬೇಕು. ಇಂಗ್ಲಿಷ್ ಭಾಷೆಯನ್ನು ಅತ್ಯಂತ ವೈಜ್ಞಾನಿಕ ವಿಧಾನದಲ್ಲಿ ಕೆಲವೇ ತಿಂಗಳಲ್ಲಿ ಕಲಿಸಿಕೊಡಬಹುದು. ಇಂತಹ ಪ್ರಯೋಗ ನಡೆಸಿ ಫಲಿತಾಂಶದ ಮೇಲೆ ಯೋಜನೆ ರೂಪಿಸಬೇಕು. ಇಂಗ್ಲಿಷ್ ಭಾಷೆಯ ಪ್ರಾವೀಣ್ಯ ಪಡೆಯಲು ಇದೇ ಸರಿಯಾದ ಮಾರ್ಗವಾಗಿದೆ.

**ಮುಂದೇನು...**

ಈಗ ಸಂಘರ್ಷ ನಡೆಸುತ್ತಿರುವ ಪರ-ವಿರೋಧ ಬಣಗಳಲ್ಲಿ ಶಿಕ್ಷಣ ಮಾಧ್ಯಮದ ಬಗ್ಗೆ ಒಮ್ಮತವಿದೆ. ಇಂಗ್ಲಿಷನ್ನು ಕಲಿಸಬೇಕು ಎಂಬುದರ ಬಗ್ಗೆ ಎರಡು ಮಾತಿಲ್ಲ. ಆದರೆ ಜಿಜ್ಞಾಸೆ ಇರುವುದು ಅದನ್ನು ಯಾವ ತರಗತಿಯಿಂದ ಕಲಿಸಬೇಕೆಂಬುದರ ಬಗ್ಗೆಯಷ್ಟೆ.

ಇಂಗ್ಲಿಷನ್ನು ಒಂದನೇ ತರಗತಿಯಿಂದ ಕಲಿಸಬೇಕೋ ನಂತರದ ತರಗತಿಗಳಿಂದಲೋ, ಎಂಬ ಪ್ರಶ್ನೆಗಿಂತ ನಾವು ಈಗ ಕನ್ನಡ ಸಮೇತವಾಗಿ ಏನನ್ನು ಕಲಿಸುತ್ತಿದ್ದೇವೆ, ಅದನ್ನು ಹೇಗೆ ಕಲಿಸುತ್ತಿದ್ದೇವೆ ಎಂಬುದರ ಬಗ್ಗೆ ಚರ್ಚೆಯಾಗಬೇಕು. ಇಂಗ್ಲಿಷ್‌ಮಟ್ಟಿಗಂತು ಇದು ಬಹಳ ಗುರುತರವಾದ ಪ್ರಶ್ನೆ. ಯಾಕೆಂದರೆ, ನಮ್ಮಲ್ಲಿರುವ ಶಿಕ್ಷಕರು ಸೇರಿದಂತೆ ಹಲವರಿಗೆ ಅದು ದ್ವಿತೀಯ ಭಾಷೆ. ಈ ಭಾಷೆಯನ್ನು ಒಂದು ಮಟ್ಟಿಗೆ ಸ್ವೀಕಾರಾರ್ಹವಾಗಿ ಕಲಿಸುವಂಥ ಪ್ರಾಥಮಿಕ ಶಾಲಾ ಶಿಕ್ಷಕರು ಎಷ್ಟು ಮಂದಿ ನಮಗೆ ಸಿಗಬಹುದು ? ಅಷ್ಟೊಂದು ಇಂಗ್ಲಿಷ್ ಬರುವವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಯಾಕಿರುತ್ತಾರೆ ? ಹಾಗಾಗಿ ಇಂಗ್ಲಿಷ್‌ಅನ್ನು ಎಲ್ಲಿ, ಯಾವಾಗ ಬೇಕಾದರೂ ಕಲಿಸಲಿ, ಅದನ್ನು ಸಮರ್ಥವಾಗಿ ಕಲಿಸುವವರೆಗೆ ಹೆಚ್ಚಿನ ಉಪಯೋಗವಿಲ್ಲ.

ಬಡವ ಬಲ್ಲಿದರ ಮಧ್ಯದ ಅಂತರ ಬೆಳೆದಂತೆ ಕನ್ನಡ-ಇಂಗ್ಲಿಷ್ ಓದಿದ ಮಕ್ಕಳ ನಡುವಿನ ವ್ಯತ್ಯಾಸ ಬೃಹದಾಕಾರವಾಗಿ ಬೆಳೆಯುತ್ತದೆ. ಈ ಅಂತರ ಕಡಿಮೆಯಾಗಬೇಕಾದರೆ ಸಮಾನ ಶಿಕ್ಷಣ ನೀತಿ ಜಾರಿಗೆ ಬರಬೇಕು. ಕನ್ನಡ ಉಳಿಸಿ ಮಕ್ಕಳ ಭವಿಷ್ಯ ಬೆಳಗಿಸಬೇಕಾದರೆ ಎಲ್ಲ ಶಾಲೆಗಳಲ್ಲಿ ಕನ್ನಡ ಕಡ್ಡಾಯ ಮಾಡಬೇಕು. ಕನ್ನಡ ಶಾಲೆಗಳಲ್ಲಿ ಗುಣಾತ್ಮಕವಾಗಿ ಆಂಗ್ಲ ಭಾಷೆ ಕಲಿಸಬೇಕು.

ಒಂದು ಮಗು ಸಲೀಸಾಗಿ ೬ ಭಾಷೆಗಳನ್ನು ಕಲಿಯಬಹುದಾಗಿದೆ. ಆದ್ದರಿಂದ ಮಕ್ಕಳಿಗೆ ಮಾತೃಭಾಷೆ ಕನ್ನಡ, ರಾಷ್ಟ್ರಭಾಷೆ ಹಿಂದಿ, ಅಂತರರಾಷ್ಟ್ರೀಯ ಭಾಷೆ ಇಂಗ್ಲಿಷ್ – ಮೂರನ್ನೂ ಕಲಿಸಿದರೆ ನಮ್ಮ ಮಕ್ಕಳ ಮತ್ತು ನಾಡಿನ ಭವಿಷ್ಯ ಉಜ್ವಲವಾಗುತ್ತದೆ ಎನ್ನುವವರೂ ಇದ್ದಾರೆ. ಹಾಗೇದು ಔಪಚಾರಿಕ ಶಿಕ್ಷಣದಲ್ಲಿ ಎಲ್ಲವನ್ನು ತರುತ್ತೇವೆ ಎನ್ನುವ ಹಠ ಸಲ್ಲದು. ಈ ಹಠ ಕನ್ನಡ ವಾತಾವರಣವನ್ನು ಕುಗ್ಗಿಸಬಾರದು. ಪ್ರಾಥಮಿಕ ಶಿಕ್ಷಣದಿಂದಲೇ ಇಂಗ್ಲಿಷ್ ಭಾಷೆ ಕಲಿಸುವ ಬದಲು ವೈಜ್ಞಾನಿಕ ವಿಧಾನದಿಂದ ಆಂಗ್ಲ ಭಾಷೆ ಕಲಿಸಬೇಕು ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ಪ್ರಸ್ತುತ, ನಮ್ಮ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕನ ಮೇಲೆ ಹೊರಲಾರದಷ್ಟು ಭಾರ ಹಾಕಲಾಗಿದೆ. ಸಾಕಷ್ಟು ಕೆಲಸಗಳಿಂದ ಹೈರಾಣಾಗಿಹೋಗಿರುವ ಶಿಕ್ಷಕನ ಮಾನಸಿಕ ಸ್ಥಿತಿ ಅರಿಯದೆ ಮತ್ತೊಂದು ಜವಾಬ್ದಾರಿಯನ್ನು ಸರ್ಕಾರ ಹೇರಿದೆ ಎಂಬ ಭಾವನೆ ಮೂಡಿದೆ. ಶಿಕ್ಷಕನ ಒತ್ತಡ ನಿವಾರಣಾ ಪ್ರಯತ್ನಗಳು ನಡೆಯುತ್ತಲೇ ಇಲ್ಲ ಎನ್ನಬಹುದು. ಹಳ್ಳಿಗಾಡಿನ ೫ ವರ್ಷದ ಮಗುವಿಗೆ ಅಪರಿಚಿತ ಭಾಷೆಯೊಂದನ್ನು ಕಲಿಸುವುದು ಶಿಕ್ಷಕನಿಗೆ ಒಂದು ಸವಾಲಾಗಿದೆ. ಮಾತೃಭಾಷೆಯಲ್ಲಿಯೇ ಹಿಡಿತ ಸಾಧಿಸದ ಮುಗ್ಧ ಮಗುವಿಗೆ ಇಂಗ್ಲಿಷ್ ಭಾಷೆ ಕಲಿಸಲು ಇನ್ನಿಲ್ಲದ ಸರ್ಕಸ್ ಮಾಡಬೇಕಿದೆ. ಮಕ್ಕಳ ನಾಲಿಗೆ ತಿರುಗಿಸಲು ಹರಸಾಹಸ ಪಡಬೇಕಿದೆ. ಸರ್ಕಾರ ವಿದ್ಯಾರ್ಥಿಗಳಿಗನುಗುಣವಾಗಿ ಶಿಕ್ಷಕರನ್ನು ನೇಮಿಸುತ್ತಿದೆ. ಅದರ ಜೊತೆಗೆ ತರಗತಿಗೆ ಅನುಗುಣವಾಗಿಯೂ ಶಿಕ್ಷಕರ ನೇಮಕವಾಗಬೇಕು.

ಇಂಗ್ಲಿಷ್ ವ್ಯಾಸಂಗದ ವ್ಯಾಮೋಹದಿಂದ ಕಡೆಗಣಿಸಲ್ಪಟ್ಟ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಕನಿಷ್ಠವೆಂದರೆ ಮೂಲ ಸೌಕರ್ಯಗಳಾದ ಕಟ್ಟಡ. ಪೀಠೋಪಕರಣ, ಗ್ರಂಥಾಲಯ, ಆಟದ ಮೈದಾನ, ಕ್ರೀಡಾಸಲಕರಣೆಗಳು ಮತ್ತು ಅವಶ್ಯ ಬೋಧಕ ಸಿಬ್ಬಂದಿ ಎಲ್ಲವೂ ಲಭ್ಯವಾದಲ್ಲಿ ವ್ಯಾಸಂಗದ ಮಟ್ಟ ತನ್ನಿಂದತಾನೆ ಸುಧಾರಿಸುತ್ತದೆ.

ಈಗ ಇಂಗ್ಲಿಷ್ ಭಾಷಾ ಕಲಿಕೆಗೆ ಅಗತ್ಯವಿರುವ ಪೂರ್ವಭಾವಿ ಸಿದ್ಧತೆ, ಇಂಗ್ಲಿಷ್ ಭಾಷಾ ಬೋಧನೆಯ ಉದ್ದೇಶ, ಬೋಧನಾ ವಿಧಾನ, ಪಠ್ಯಪುಸ್ತಕ, ಸೂಕ್ತ ತರಬೇತಿ ಪಡೆದ ಶಿಕ್ಷಕರು ಈ ಎಲ್ಲ ಅಂಶಗಳಿಗೂ ಈಗಿನಿಂದಲೇ ಸಿದ್ಧಮಾಡಿಕೊಳ್ಳುವ ಅತ್ಯಗತ್ಯವಿದೆ. ಇಂಗ್ಲಿಷನ್ನು ಯಾವ ಉದ್ದೇಶಕ್ಕೆ ಕಲಿಯಬೇಕು, ಕಲಿಸಬೇಕು ಎಂಬ ತೀರ್ಮಾನದ ಮೇಲೆ ಭಾಷಾ ಕೌಶಲ್ಯ, ಕಲಿಕಾ ತಂತ್ರ, ಪಠ್ಯಕ್ರಮಗಳು ರೂಪಗೊಳ್ಳಬೇಕು. ಮಾತುಗಾರಿಕೆಯ ಅಭಿವ್ಯಕ್ತಿಗಾಗಿಯೋ ಅಥವಾ ಜ್ಞಾನಗ್ರಹಣಕ್ಕೋ ಎಂಬುದರ ಬಗ್ಗೆ ನಮ್ಮಲ್ಲಿ ಗೊಂದಲಗಳಿರಬಾರದು.

ಇಂಗ್ಲಿಷ್ ಕಲಿಸಲೇ ಬೇಕೆಂದಾದಲ್ಲಿ ಶಾಲೆಗಳ ವೇಳಾಪಟ್ಟಿಯಲ್ಲಿ ಹೆಚ್ಚಿನ ಅವಧಿಗಳನ್ನು ಭಾಷಾ ಕಲಿಕೆಗೆ ವಿನಿಯೋಗಿಸಬೇಕು. ಶಿಕ್ಷಕರಿಗೆ ಇಂಗ್ಲಿಷ್ ಬೋಧನೆ ಬಗ್ಗೆ ತರಬೇತಿ ನೀಡಬೇಕು. ಕ್ರಮೇಣ ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಓದಿದ ಶಿಕ್ಷಕರನ್ನು ಪ್ರಾಥಮಿಕ ಶಾಲೆಗೆ ಶಿಕ್ಷಕರನ್ನಾಗಿ ನೇಮಿಸಿಕೊಳ್ಳಬೇಕು.

ಕನ್ನಡದ ಮೂಲಕ ಇಂಗ್ಲಿಷ್‌ಗೆ ಹೋಗಬೇಕು. ಆದುದರಿಂದ ಒಂದನೇ ತರಗತಿಯಲ್ಲಿ ಕನ್ನಡದ ಕಲಿಕೆ ಸರಿಯಾಗಿ ಆಗಬೇಕು. ಎರಡನೇ ತರಗತಿಯಲ್ಲಿ ಪೂರ್ವ ಪರಿಚಿತ ಸಡಿಲ ಇಂಗ್ಲಿಷ್ ಶಬ್ದಗಳು ಸ್ಪಷ್ಟವಾಗಬೇಕು. ಪ್ರಾಸ ಪದ್ಯಗಳೊಂದಿಗೆ ಇಂಗ್ಲಿಷ್‌ನ ಅಕ್ಷರಗಳು ಬಾಯಿಪಾಠವಾಗಬೇಕು. ಮೂರನೇ ತರಗತಿಯಲ್ಲಿ ಮತ್ತೆ ಹಿಂದಿನ ತರಗತಿ ಪುನರಾವರ್ತನೆಯೊಂದಿಗೆ ದಿನ, ತಿಂಗಳು, ಸಂಖ್ಯೆಗಳು, ಕಾಗುಣಿತ ಸಹಿತವಾಗಿ ಕಿವಿಶಬ್ದವಾಗಿ ಕಲಿಯಬೇಕು. ನಾಲ್ಕನೇ ತರಗತಿಯಲ್ಲಿ ಈ ಎಲ್ಲದರ ಪುನರಾವರ್ತನೆ ಜೊತೆಗೆ ಬರಹ ಕ್ರಿಯೆ ನಡೆಯಬೇಕು. ಈ ಹಂತದವರೆಗೆ ಇಂಗ್ಲಿಷ್ ಕಿಟಕಿ ಮಾತ್ರ ಆಗಬೇಕು, ಬಾಗಿಲಾಗಬಾರದು. ಇಂಗ್ಲಿಷ್‌ನಂತಹ ಭಾಷೆಯನ್ನು ಕಲಿಸುವಾಗ ಸಾಂಸ್ಕೃತಿಕ ಎಚ್ಚರಿಕೆ ತೀರಾ ಅಗತ್ಯ.

ಬಾಳಿ ಬದುಕಬೇಕಾದ ಕನ್ನಡಿಗರಲ್ಲಿ ವಿರಸ ಬೇಡ. ಸಮರಸವೇ ಜೀವನ ವಿರಸವೇ ಮರಣ ಎಂಬ ದಿವ್ಯಮಂತ್ರ ನೆನಪಿಸಿಕೊಳ್ಳುತ್ತಾ ಕನ್ನಡತನದ ಮೂಲಕ ಇಂಗ್ಲಿಷ್‌ಗೆ ಹೋಗೋಣ. ನಮ್ಮ ಮುದ್ದು ಕನ್ನಡದ ಕಂದಮ್ಮಗಳಿಗೆ ಎರಡು ಭಾಷೆಗಳನ್ನು ಕಲಿಯುವುದು ಹೊರೆಯೇ ಅನಿಸಬಹುದು. ಆದರೆ ಆಧುನಿಕ ಬದುಕಿನ ಭವಿಷ್ಯ ರೂಪಿಸಿಕೊಳ್ಳುವ ಈ ಸಂದರ್ಭದಲ್ಲಿ ಇಂಗ್ಲಿಷ್ ಕಲಿಯದಿದ್ದರೆ ಬದುಕು ಹೊರೆಯಾಗುತ್ತದೆ ಎನ್ನುವುದೂ ಅಷ್ಟೇ ಸತ್ಯ.

ಪರಮೇಶ್ವರಯ್ಯ ಸೊಪ್ಪಿಮಠ
ಶಿಕ್ಷಕರು, ಕೆ.ವಿ.ಓ.ಆರ್. ಕಾಲೋನಿ, ಹಗರಿಬೊಮ್ಮನಹಳ್ಳಿ
ತಾಲ್ಲೂಕು, ಬಳ್ಳಾರಿ ಜಿಲ್ಲೆ - ೫೮೩ ೨೧೨

# ಜಾಗತಿಕ ಅರ್ಥವ್ಯವಸ್ಥೆ – ಪರ್ಯಾಯ ವ್ಯವಸ್ಥೆಗೆ ಕಾಲ




ಜಾಗತಿಕ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ತಲೆದೋರುವ ಬಿಕ್ಕಟ್ಟು ಸರ್ವವ್ಯಾಪಿಯದ್ದಾಗಿರುತ್ತದೆ. ಅದು ಅರ್ಥವ್ಯವಸ್ಥೆಯನ್ನು ಮಾತ್ರವಲ್ಲದೆ ರಾಜಕೀಯ, ಸೈದ್ಧಾಂತಿಕ ಮತ್ತು ಜೀವನದ ಎಲ್ಲ ಕ್ಷೇತ್ರಗಳನ್ನು ಆವರಿಸುತ್ತದೆ. ಈ ಬಿಕ್ಕಟ್ಟು ಕ್ರಮಬದ್ಧವಾಗಿಯೋ ಎಂಬಂತೆ ಆಗಾಗ್ಗೆ ಸಂಭವಿಸುತ್ತಿರುತ್ತದೆ. ಅದರ ತೀವ್ರತೆ ಜಾಗತಿಕ ಅರ್ಥವ್ಯವಸ್ಥೆಯಲ್ಲಿ ಅವಲಂಬನೆ ಹೆಚ್ಚಾದಂತೆ ಅಧಿಕವಾಗಿದ್ದು ದುಷ್ಪರಿಣಾಮಗಳು ದೀರ್ಘಾವಧಿಯದ್ದಾಗಿರುತ್ತವೆ. ಕೈಗಾರಿಕಾಭಿವೃದ್ಧಿಯ ಬೆಳವಣಿಗೆ ಕುಸಿಯುತ್ತದೆ. ಹಣಕಾಸಿನ ವ್ಯವಸ್ಥೆಯಲ್ಲಿ ಅಲ್ಲೋಲಕಲ್ಲೋಲವಾಗುತ್ತದೆ. ವಿತ್ತೀಯ ಸಂಸ್ಥೆಗಳ ಅವ್ಯವಹಾರದಿಂದ ಅರಾಜಕತೆ ತಲೆದೋರುತ್ತದೆ. ಅಗತ್ಯ ವಸ್ತುಗಳ ಬೆಲೆ ಏರುವುದಲ್ಲದೆ, ನಿರುದ್ಯೋಗವೂ ಹೆಚ್ಚುತ್ತದೆ. ಬ್ಯಾಂಕುಗಳು, ಕಂಪನಿಗಳು ದಿವಾಳಿಯಾಗಿ, ಕಾರ್ಖಾನೆಗಳು ಮುಚ್ಚುತ್ತವೆ. ಇಂಥ ಪರಿಸ್ಥಿತಿಯನ್ನು ಇಂದು ನಾವು ಕಾಣುತ್ತಿದ್ದೇವೆ. ಅಮೆರಿಕಾದ ಅರ್ಥವ್ಯವಸ್ಥೆಯಲ್ಲಿ ತಲೆದೋರಿರುವ ಬಿಕ್ಕಟ್ಟು ಇಂದು ಪ್ರಪಂಚದ ಎಲ್ಲ ದೇಶಗಳನ್ನು ಬಾಧಿಸುತ್ತಿದೆ. ಅದರ ತೀವ್ರತೆ ಸಂಬಂಧಪಟ್ಟ ದೇಶಗಳ ಅವಲಂಬನೆಯನ್ನು ಸೂಚಿಸುತ್ತದೆ. ಅಮೆರಿಕಾದ ಬೃಹತ್ ವಿತ್ತೀಯ ಸಂಸ್ಥೆಗಳ ದುರಾಡಳಿತ, ಅವ್ಯವಹಾರಗಳಿಂದಾಗಿ ಸಂಭವಿಸಿರುವ ಬಿಕ್ಕಟ್ಟು ಮಾರುಕಟ್ಟೆ ಅರ್ಥವ್ಯವಸ್ಥೆಯ ಬುಡವನ್ನೇ ಅಲುಗಾಡಿಸಿದೆ. ಇದನ್ನು ತಹಬಂದಿಗೆ ತರಲು ಅಮೆರಿಕಾ ಸರಕಾರವನ್ನು ಒಳಗೊಂಡಂತೆ ವಿಶ್ವದಾದ್ಯಂತ ಸರಕಾರಗಳು ಕೈಗೊಂಡಿರುವ ಕ್ರಮಗಳು ಹೆಚ್ಚಿನ ಪರಿಣಾಮವೇನನ್ನೂ ಉಂಟುಮಾಡಿಲ್ಲ. ಅವೆಲ್ಲ ಹಂಗಾಮಿ ತೇಪೆ ಕ್ರಮಗಳಾಗಿವೆ. ಜಾಗತೀಕರಣದ ಭರಾಟೆಯ ಹಿನ್ನೆಲೆಯಲ್ಲಿ ಸಂಭವಿಸಿರುವ ಈಗಿನ ಬಿಕ್ಕಟ್ಟು ಪರ್ಯಾಯ ವ್ಯವಸ್ಥೆಯ ಚಿಂತನೆಯತ್ತ ಗಮನ ಸೆಳೆದಿದೆ.

ಹೆಚ್ಚು ಕಡಿಮೆ ಒಂದು ಶತಮಾನದ ಹಿಂದೆ, ಅಂದರೆ ಮೊದಲನೇ ಮಹಾಯುದ್ಧದ ನಂತರದಲ್ಲಿ ೧೯೨೦ರ ದಶಕದಲ್ಲಿ ಅಮೆರಿಕಾದಲ್ಲಿ ಭಾರಿ ಆರ್ಥಿಕ ಕುಸಿತ ಸಂಭವಿಸಿತು. ಅದು ಇತಿಹಾಸದಲ್ಲಿ 'ಮಹಾನ್ ಆರ್ಥಿಕ ಕುಸಿತ' ಎಂದೇ ದಾಖಲಾಗಿದೆ. ಇಡೀ ಬಂಡವಾಳಶಾಹಿ ವ್ಯವಸ್ಥೆ ಆಗ ತಲ್ಲಣಗೊಂಡಿತ್ತು. ಸಾವಿರಾರು ಕಾರ್ಖಾನೆಗಳು ಮುಚ್ಚಿಹೋಗಿ ಲಕ್ಷಾಂತರ ಮಂದಿ ನಿರುದ್ಯೋಗಿಗಳಾಗಿ ಬೀದಿಪಾಲಾದರು. ಯೂರೋಪಿನ ಸಾಮ್ರಾಜ್ಯಶಾಹಿ ದೇಶಗಳಿಗೂ ಅದರ ಬಿಸಿ ತಟ್ಟಿತ್ತು. ಮಹಾಯುದ್ಧದ ಪರಿಣಾಮಗಳ ಜೊತೆಗೆ ಆರ್ಥಿಕ ಬಿಕ್ಕಟ್ಟೂ ಸೇರಿತ್ತು. ವಸಾಹತುಗಳ ತೀವ್ರ ಶೋಷಣೆಯಿಂದ ತಕ್ಕಮಟ್ಟಿಗೆ ಈ ದೇಶಗಳು ಚೇತರಿಸಿಕೊಂಡುವು. ಅಮೆರಿಕಾದಲ್ಲಿ ಬಿಕ್ಕಟ್ಟಿನ ಪರಿಣಾಮ ಸಾಕಷ್ಟು ದೀರ್ಘಕಾಲ ಇತ್ತು. ಆ ನಂತರ ಪ್ರತಿ ಹತ್ತು-ಇಪ್ಪತ್ತು ವರ್ಷಗಳಿಗೊಮ್ಮೆ ಬಂಡವಾಳಶಾಹಿ ಜಗತ್ತಿನಲ್ಲಿ ಅಷ್ಟು ದೊಡ್ಡ ಪ್ರಮಾಣದಲ್ಲಿ ಅಲ್ಲದಿದ್ದರೂ ಅರ್ಥವ್ಯವಸ್ಥೆಯಲ್ಲಿ ಬಿಕ್ಕಟ್ಟು ಸಂಭವಿಸುತ್ತಿದೆ. ಬಂಡವಾಳಶಾಹಿ ಆರ್ಥಿಕ ತಜ್ಞರು ಅದನ್ನು 'ಆರ್ಥಿಕ ಕುಸಿತ' ಎಂದು ಬಣ್ಣಿಸುವುದಿಲ್ಲ, 'ಆರ್ಥಿಕ ಹಿಂಜರಿತ' ಎಂದು ಕರೆಯುತ್ತಾರೆ. ಈ ನಾಮಕರಣ ಏನೇ ಇದ್ದರೂ ಪರಿಣಾಮ ಒಂದೇ, ಅದರ ತೀವ್ರತೆ ಕಡಿಮೆ ಪ್ರಮಾಣದ್ದಿರಬಹುದು ಅಷ್ಟೆ.

ಇಪ್ಪತ್ತೊಂದನೇ ಶತಮಾನದಲ್ಲಿ ಈಗ ಸಂಭವಿಸಿರುವ ಆರ್ಥಿಕ ಬಿಕ್ಕಟ್ಟು ಎರಡನೆಯದು. ಈ ಶತಮಾನದಲ್ಲಿ ಪ್ರಾರಂಭವಾದ ಬಿಕ್ಕಟ್ಟು ಪ್ರಮುಖವಾಗಿ ಮಾಹಿತಿ ತಂತ್ರಜ್ಞಾನಕ್ಷೇತ್ರಕ್ಕೆ ಸೀಮಿತವಾಗಿತ್ತು. ಅಮೆರಿಕಾದಲ್ಲಿ ಉದ್ಯಮ ಕ್ಷೇತ್ರದಲ್ಲಿ ಕಾರು ತಯಾರಿಕಾ ಉದ್ಯಮಗಳಾದ ಫೋರ್ಡ್, ಕ್ರೈಸ್ಲರ್, ಜನರಲ್ ಮೋಟಾರ್ಸ್ ಸಂಸ್ಥೆಗಳು ತತ್ತರಿಸಿದುವು. ಸಹಸ್ರಾರು ಮಂದಿ ಉದ್ಯೋಗ ಕಳೆದುಕೊಂಡರು. ಮಾಹಿತಿ ತಂತ್ರಜ್ಞಾನಕ್ಷೇತ್ರದಲ್ಲಿ ವೇತನಗಳ ಕಡಿತದ ಜೊತೆಗೆ ಉದ್ಯೋಗ ಕಳೆದುಕೊಂಡವರ ಸಮೂಹವೂ ಅಧಿಕವಾಗಿತ್ತು. ಈ ಕ್ಷೇತ್ರದಲ್ಲಿ ಅಮೆರಿಕಾದ ಮೇಲೆ ಅವಲಂಬಿತವಾಗಿದ್ದ ಭಾರತ, ಚೀನಾ ಮೊದಲಾದ ದೇಶಗಳಿಗೂ ಹೊಡೆತ ಬಿದ್ದಿತು. ಇತರ ಕ್ಷೇತ್ರಗಳು ಸುಭದ್ರವಾಗಿದ್ದುದರಿಂದ ಈ ದೇಶಗಳು ಚೇತರಿಸಿಕೊಳ್ಳಲು ಹೆಚ್ಚು ಕಾಲ ಬೇಕಾಗಲಿಲ್ಲ. ಆದರೆ ಸಂಪೂರ್ಣವಾಗಿ ವಿಶ್ವ ಬ್ಯಾಂಕ್, ಅಂತಾರಾಷ್ಟ್ರೀಯ ವಿತ್ತೀಯ ಮಂಡಲಿಯ ಮೇಲೆ ಅವಲಂಬಿತವಾಗಿದ್ದ ಅರ್ಜೆಂಟೈನಾ, ಬ್ರಿಟನ್ ಹಾಗೂ ಆಗ್ನೇಯ ಏಷಿಯಾ ದೇಶಗಳು ತೀವ್ರವಾದ ಸಂಕಷ್ಟಕ್ಕೆ ಗುರಿಯಾದವು.

ಈಗ ಉಂಟಾಗಿರುವ ಬಿಕ್ಕಟ್ಟು ಪ್ರಪಂಚದಾದ್ಯಂತ ಆರ್ಥಿಕ ಕುಸಿತದ ಭೀತಿಯನ್ನುಂಟುಮಾಡಿದೆ, ೧೯೨೦ರ ಮಹಾ ಆರ್ಥಿಕ ಕುಸಿತದ ದಿನಗಳನ್ನು ನೆನಪಿಸುತ್ತಿದೆ. ಬಂಡವಾಳಶಾಹಿ ಅರ್ಥವ್ಯವಸ್ಥೆಯ ಸೂಚಕವಾಗಿರುವ ಷೇರು ಮಾರುಕಟ್ಟೆಯಲ್ಲಿ ಅರಾಜಕತೆ ಹಬ್ಬಿದೆ. ಸಾಂಸ್ಥಿಕ ಹೂಡಿಕೆದಾರರ ಚೆಲ್ಲಾಟದಿಂದಾಗಿ, ಹಣದ ಹರಿವಿನ ಕೊರತೆಯಿಂದಾಗಿ ಸೂಚ್ಯಂಕಗಳು ತೀವ್ರವಾಗಿ ಕುಸಿದಿವೆ. ಸಣ್ಣ ಮತ್ತು ಮಧ್ಯಮ ಹೂಡಿಕೆದಾರರು ಕಂಗಾಲಾಗಿದ್ದಾರೆ. ಸಹಸ್ರಾರು ಮಂದಿ ಹೂಡಿಕೆದಾರರು ದಿವಾಳಿಯಾಗಿದ್ದಾರೆ. ಜಾಗತಿಕ ಅರ್ಥವ್ಯವಸ್ಥೆಯ ಚುಕ್ಕಾಣಿ ಎಂದು ಪರಿಗಣಿಸಲಾಗಿದ್ದ ಅಮೆರಿಕಾದ ಅರ್ಥವ್ಯವಸ್ಥೆ ದಿಕ್ಕುದಿವಾಣಿ ಇಲ್ಲದೆ ಅಸ್ತವ್ಯಸ್ತವಾಗಿದೆ. ದುಸ್ಸಾಹಸದ ದುರಾಕ್ರಮಣಕಾರಿ ಯುದ್ಧಗಳಿಂದಾಗಿ ಅಮೆರಿಕಾ ಸರಕಾರದ ಖಜಾನೆ ಬರಿದಾಗಿದೆ. ಎಗ್ಗಿಲ್ಲದ, ನಿಯಂತ್ರಣವಿಲ್ಲದ ಸಾಲನೀಡಿಕೆ ಮತ್ತು ಅವ್ಯವಹಾರಗಳಿಂದಾಗಿ ಬ್ಯಾಂಕಿಂಗ್ ವ್ಯವಸ್ಥೆ ಕುಸಿದುಬಿದ್ದಿದೆ. ಬುಷ್ ಸರಕಾರ ಪರಿಸ್ಥಿತಿಯ ನಿಯಂತ್ರಣಕ್ಕೆ ಕೈಗೊಂಡಿರುವ ಕ್ರಮಗಳು ಪರಿಣಾಮಕಾರಿಯಾಗಲಿಲ್ಲ. ಬಿಕ್ಕಟ್ಟಿನ ಬಿಸಿ ಯೂರೋಪು ಮತ್ತು ಏಶಿಯಾ ದೇಶಗಳಿಗೂ ಪಸರಿಸಿದೆ. ಭಾರತದಲ್ಲಿ ಕೈಗಾರಿಕಾಭಿವೃದ್ಧಿ ಸಾಕಷ್ಟು ಕುಗ್ಗಿದೆ, ಕೊರಿಯದಲ್ಲಿ ರಫ್ತು ವ್ಯಾಪಾರ ಸ್ಥಗಿತಗೊಂಡಿದೆ, ಸ್ವೀಡನ್ನಿನಲ್ಲಿ ವೋಲ್ವೋ ಬಸ್ ಕಾರ್ಖಾನೆಯಲ್ಲಿ ಸಹಸ್ರಾರು ಮಂದಿ ಉದ್ಯೋಗ ಕಳೆದುಕೊಂಡಿದ್ದಾರೆ. ಯೂರೋಪಿನ ರಾಷ್ಟ್ರಗಳ ಬ್ಯಾಂಕಿಂಗ್ ಉದ್ಯಮ ಕಂಗಾಲಾಗಿದೆ. ಅಂತಾರಾಷ್ಟ್ರೀಯ ವಿತ್ತೀಯ ಸಂಸ್ಥೆಯ ಅಂದಾಜಿನ ಪ್ರಕಾರ ಪ್ರಪಂಚದ ಹದಿನೈದು ರಾಷ್ಟ್ರಗಳು, ಮುಖ್ಯವಾಗಿ ಯೂರೋಪಿನ ರಾಷ್ಟ್ರಗಳು ಆರ್ಥಿಕ ಬೆಳವಣಿಗೆಯಲ್ಲಿ ಮುಂದಿನ ಎರಡು ವರ್ಷಗಳು ಕುಸಿತ ಕಾಣಲಿವೆ. ಕಳೆದ ಹದಿನೈದು ವರ್ಷಗಳಿಂದ ಪ್ರಚಲಿತವಿರುವ ಜಾಗತೀಕರಣ ಪ್ರಕ್ರಿಯೆಯ ದುಷ್ಪರಿಣಾಮಗಳ ತೀವ್ರತೆಯನ್ನು ಈಗ ನಾವು ಅನುಭವಿಸುತ್ತಿದ್ದೇವೆ. ಅನಿಯಂತ್ರಿತ ಮುಕ್ತ ಮಾರುಕಟ್ಟೆಯ ಪರಿಣಾಮಗಳಿಗೆ ಈ ಬಿಕ್ಕಟ್ಟು ಸಾಕ್ಷಿ. ಅಮೆರಿಕಾದ ವಿತ್ತೀಯ ಸಂಸ್ಥೆಗಳು ನಡೆಸಿದ ಅವ್ಯವಹಾರಗಳೇ ಈ ಬಿಕ್ಕಟ್ಟಿಗೆ ಮೂಲ. ಹಾಗಾಗಿ, ಅಮೆರಿಕಾದ ಮೇಲೆ ಅವಲಂಬನೆ ಎಷ್ಟು ಅಪಾಯಕಾರಿ ಎನ್ನುವುದನ್ನು ಅದು ತೋರಿಸಿದೆ.

ಜಗತ್ತಿನ ಶ್ರೀಮಂತ ರಾಷ್ಟ್ರಗಳ ಮೇಲೆ ಆರ್ಥಿಕಾವಲಂಬನೆಗೆ ಪ್ರತಿಯಾಗಿ ಪರ್ಯಾಯ ವ್ಯವಸ್ಥೆಯ ಸ್ಥಾಪನೆಗೆ ಕಾಲ ಸನ್ನಿಹಿತವಾಗಿದೆ. ಲ್ಯಾಟಿನ್ ಅಮೆರಿಕಾದ ದೇಶಗಳೂ ಈಗಾಗಲೇ ಈ ದಿಶೆಯಲ್ಲಿ ಹೆಜ್ಜೆ ಇರಿಸಿವೆ. ಅಮೆರಿಕಾ ಈ ದೇಶಗಳ ಮೇಲೆ ಹೊರಿಸಲು ಪ್ರಯತ್ನಿಸಿದ ಮುಕ್ತ ಮಾರುಕಟ್ಟೆಯ ಪ್ರಸ್ತಾಪವನ್ನು ಈ ದೇಶಗಳು ತಿರಸ್ಕರಿಸಿ ಪರಸ್ಪರ ಸಹಕಾರಕ್ಕೆ ಒತ್ತು ನೀಡಿವೆ. ವೆನಿಜುವೇಲ, ಬೊಲಿವಿಯ, ಬ್ರೆಜಿಲ್, ಅರ್ಜೆಂಟೈನಾ ದೇಶಗಳು ಪರ್ಯಾಯ-ವ್ಯವಸ್ಥೆಯ ಮಾರ್ಗ ಅರಸುತ್ತಿವೆ. ಏಶಿಯಾದ ದೇಶಗಳು ಅವುಗಳೊಂದಿಗೆ ಕೈಜೋಡಿಸುವುದು ಸೂಕ್ತ. ಪ್ರಪಂಚದ ದೇಶಗಳ ಮೇಲೆ ಅಧಿನಾಯಕತ್ವ ಸ್ಥಾಪಿಸಲು ಹೊರಟಿರುವ ಅಮೆರಿಕಾವನ್ನು ತಡೆಯಲು ಪ್ರಯತ್ನ ಇನ್ನಷ್ಟು ತೀವ್ರಗೊಳ್ಳಬೇಕಾಗಿದೆ. ಪ್ರಾದೇಶಿಕ ಮೈತ್ರಿಕೂಟಗಳು ಈಗಾಗಲೇ ಅಮೆರಿಕಾಕ್ಕೆ ಸವಾಲಾಗಿವೆ. ರಷ್ಯಾ ಹಾಗೂ ಅದರ ಮಿತ್ರ ರಾಷ್ಟ್ರಗಳು ಅಮೆರಿಕಾದ ಹಸ್ತಕ್ಷೇಪವನ್ನು ಹಿಮ್ಮೆಟ್ಟಿಸಿವೆ. ಜಾರ್ಜಿಯ ಪ್ರಕರಣ ಅದಕ್ಕೆ ಉದಾಹರಣೆ. ಹಾಗಾಗಿ ಅಮೆರಿಕಾದ ಮೇಲಿನ ಅವಲಂಬನೆಯಿಂದ ಮುಕ್ತವಾಗಲು ಪ್ರಾದೇಶಿಕ ಸಹಕಾರವನ್ನು ಬಲಗೊಳಿಸಬೇಕಾಗಿದೆ. ಪರಸ್ಪರ ಸಮಾನ ಆರ್ಥಿಕ ಸಂಬಂಧಗಳಿಗೆ ಪ್ರಾಶಸ್ತ್ಯ ನೀಡಬೇಕಾಗಿದೆ. ಭಾರತ ಈ ದಿಶೆಯಲ್ಲಿ ಹೆಚ್ಚು ಆಸಕ್ತಿ ತಳೆಯಬೇಕು. ದಕ್ಷಿಣ ಏಶಿಯಾ ದೇಶಗಳ ಸಹಕಾರಿ ಸಂಸ್ಥೆ, ಅಲಿಪ್ತ ರಾಷ್ಟ್ರಗಳ ಚಳವಳಿಯನ್ನು ಬಲಗೊಳಿಸಬೇಕಾದ ಕಾಲ ಸನ್ನಿಹಿತವಾಗಿದೆ. ಭಾರತ ಈ ಸಂದರ್ಭದಲ್ಲಿ ಹೆಚ್ಚು ಹೆಚ್ಚಾಗಿ ಅಮೆರಿಕಾದ ತೆಕ್ಕೆಯನ್ನು ಆಶ್ರಯಿಸುತ್ತಿರುವುದು ಅಪಾಯಕಾರಿ. ಮನಮೋಹನ ಸಿಂಗ್ ಸರಕಾರ ಈಗಲಾದರೂ ಎಚ್ಚತ್ತು ಪರ್ಯಾಯದ ಚಿಂತನೆ ನಡೆಸಲಿ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೮೫

# ಪವಾಡಗಳ ಕೈವಾಡ ಬಯಲಿಗೆಳೆದ ಸಜ್ಜನ ಬಿ. ಪ್ರೇಮಾನಂದ್

ಶಾಂತಾರಾಮ ಸೋಮಯಾಜಿ

ನಮ್ಮ ನಂಬಿಕೆಗಳಿಗೂ ಮತ್ತು ವಾಸ್ತವಕ್ಕೂ ಇರುವ ವ್ಯತ್ಯಾಸಗಳನ್ನು ವೈಜ್ಞಾನಿಕವಾಗಿ ದಾಖಲಿಸಿ, ಊರೂರು – ಹಾಗೂ ಸುಮಾರು ಐವತ್ತು ದೇಶಗಳು – ಸಂಚರಿಸಿ, ಧಾರ್ಮಿಕ ಗುರುಗಳ ಟ್ರಿಕ್‌ಸ್‌ಗಳನ್ನು ಬಯಲುಮಾಡಿ, ಮೂಢನಂಬಿಕೆಗಳೆದುರು ಬೆಳಕಿನ ಟಾರ್ಚ್ ಹಿಡಿದ ಕೀರ್ತಿ ಮತ್ತು ಗೌರವ ಬಿ. ಪ್ರೇಮಾನಂದ್ ಅವರದು. ಹೆಸರಾಂತ ವಿಚಾರವಾದಿ. 'ಪವಾಡ ಭಂಜಕ' ಎಂದೇ ಖ್ಯಾತಿ ಪಡೆದವರು. 'ಇಂಡಿಯನ್ ಸ್ಕೆಪ್ಟಿಕ್' ಪತ್ರಿಕೆಯ ಸಂಪಾದಕರು ಮತ್ತು ಪ್ರಕಾಶಕರು. ಅಬ್ರಹಾಂ ಕೋವೂರರ ಅನುಯಾಯಿ ಮತ್ತು ವಾರಸುದಾರ.

ತಾನೊಬ್ಬ ದೇವತಾಮನುಷ್ಯ ಎಂದು ಘೋಷಣೆ ಮಾಡುವವರು, ಆ ಬಗ್ಗೆ ಜನರಿಗೆ ಹೇಗೆ ಮನವರಿಕೆ ಮಾಡುತ್ತಾರೆ ? ಮಂದಿಯನ್ನು ಹೇಗೆ ನಂಬಿಸುತ್ತಾರೆ ? ಭಕ್ತವೃಂದವನ್ನು ಹೇಗೆ ಬೆಳೆಸುತ್ತಾರೆ ?

ಇವರೆಲ್ಲರೂ ಅನುಸರಿಸುವ ದಾರಿ ಒಂದೇ – ಕೈಚಳಕದ ಪ್ರದರ್ಶನದ ಮೂಲಕ. ಅದನ್ನು ನೋಡಿದ ಜನರು, ಮಂಕಾಗಿ, 'ಎಂಥಾ ಪವಾಡ !' ಎಂದು ಅಚ್ಚರಿ ಪಡುತ್ತಾರೆ. ಆ 'ಗುರು'ವಿನ ಗುಲಾಮರಾಗುತ್ತಾರೆ.

ಗಾಳಿಯಿಂದ ಭಸ್ಮ (ಬೂದಿ) ಉದುರಿಸುವುದು, ಮುಷ್ಟಿಯೊಳಗಿಂದ ಚಿನ್ನದ ಸರ ಹೊರತೆಗೆಯುವುದು, ಕೈಮುಗಿದು ನಿಂತವರ ಮಾನಸಿಕ ಸಮಸ್ಯೆಗೆ ಕಾರಣ ತಿಳಿಸುವುದು, ಬೆಂಕಿಯನ್ನು ನುಂಗುವುದು, ನಾಲಗೆಗೆ ತ್ರಿಶೂಲ ಚುಚ್ಚುವುದು, ಇವೇ ಮುಂತಾದ ಸಿಲ್ಲೀ ಚೇಷ್ಟೆಗಳನ್ನೇ ಜನರು 'ದೈವೀಶಕ್ತಿ' ಎಂದು ನಂಬಿಬಿಡುತ್ತಾರೆ. ಅದರ ಬದಲು, 'ನೀವೀಗ ಸೃಷ್ಟಿಸಿ ಕೊಟ್ಟದ್ದನ್ನು ನನ್ನ ಕೈಯಿಂದ ಮಾಯ ಮಾಡಿಬಿಡಿ' ಎಂದು ಚಾಲೆಂಜ್ ಮಾಡಬಹುದು, ಅಥವಾ 'ಈ ಭಸ್ಮವನ್ನೇ ಅಲಸಂಡೆ ಬೀಜಗಳಾಗಿ ಮಾಡಿ ಗುರೂಜಿ' ಎಂಬ ಬೇಡಿಕೆ ಮುಂದಿಡಬಹುದು. ತಮ್ಮ ಕಣ್ಣಮುಂದೆ ನಡೆದುದರ ಬಗ್ಗೆ ಹೀಗೆ ಪ್ರಶ್ನೆಹಾಕುವ ವೈಚಾರಿಕ ಪ್ರಜ್ಞೆಯ ಬದಲು ಜನರು ಈ 'ಗುರು'ವಿನ ಕಾಲಿಗೆ ಅಡ್ಡಬೀಳುತ್ತಾರೆ, ಭಕ್ತರಾಗುತ್ತಾರೆ.

ಕೈಚಳಕ ಎಂದರೂ ಸರಿ, ಕೈವಾಡ ಎಂದರೂ ಸರಿ, ಟ್ರಿಕ್ಸ್ ಎಂದರೂ ಸರಿ. ಹೆಸರು ಏನೇ ಇರಲಿ; ಮೋಸ, ಮೋಸವೇ – ರೂಪ ಯಾವುದಾದರೇನು ? ಏಕೆಂದರೆ, ಯಾವ ದೇವತಾಮನುಷ್ಯನೂ ಉದುರಿದ ಆ ಬೂದಿಯನ್ನೇ ಪಾರಿವಾಳಗಳಾಗಿ ಮಾಡಲಾರ, ಪಾರಿವಾಳಗಳನ್ನು ಮಗುವಾಗಿಸಲಾರ. ಕೈಚಳಕದಿಂದ ಸೃಷ್ಟಿಯಾದ ಚಿನ್ನದ ಸರ ಧರಿಸಿದ ಮಗುವಿಗೊಂದು ತಾಯಿಯನ್ನು ಸೃಷ್ಟಿಸಿಕೊಡಲಾರ. ಆ ತಾಯಿಯ ಮನಸ್ಸನ್ನು ಅರಳಿಸುವ ಉದ್ಯಾನವನ್ನು ಕಣ್ಣಮುಂದೆ ತಯಾರು ಮಾಡಲಾರ. ಮಾಡಿ ತೋರಿಸುವುದೆಲ್ಲಾ ಸಿಲ್ಲೀ ಟ್ರಿಕ್ಸ್ ಅಷ್ಟೇ. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ಬರೀ ಮೋಸದಾಟ.

ಆದರೆ ಈ ಮೋಸಗಾರಿಕೆಯನ್ನೇ ದೇವತಾಶಕ್ತಿ ಎಂದು ನಂಬುವವರ ಮತ್ತು ಆ ನಂಬಿಕೆಯನ್ನು ಬೆಳೆಸುವ ವ್ಯಾಪಾರದಲ್ಲೇ ನಿರತರಾದ ದೇವಮಾನವರ ಸಂಖ್ಯೆ ನಿರಂತರ ಬೆಳೆಯುತ್ತಿದೆ. ವಿಶೇಷವೆಂದರೆ, ಪ್ರಪಂಚದ ವಿವಿಧೆಡೆಗಳಲ್ಲಿ ದೇವಮಾನವರೆನಿಸಿಕೊಳ್ಳುವವರ ಒಂದು ಪಟ್ಟಿ ತಯಾರಿಸಿದರೆ, ಅಲ್ಲಿನ ಬಹುಪಾಲು ಹೆಸರುಗಳೆಲ್ಲಾ ನಮ್ಮ ನಾಡಿನವು. ಅರೇ, ಇದ್ಯಾಕೆ ಹೀಗೆ ? ಈ ದೈವೀಶಕ್ತಿ ಇರುವವರು, ಅಥವಾ ಇದ್ದವರು, ನಮ್ಮ ದೇಶದಲ್ಲೇ ಏಕೆ ಹುಟ್ಟಿಬರುತ್ತಾರೆ ? ಅಥವಾ ಇಂಡಿಯಾದಲ್ಲಿ ಹುಟ್ಟಿದವರಿಗಷ್ಟೇ ಏಕೆ ಈ ಅಸಾಮಾನ್ಯ ಅಸ್ವಾಭಾವಿಕ ಶಕ್ತಿ ಇರುವುದು ? ಇದಕ್ಕೆ ಉತ್ತರ ರೂಪದಲ್ಲಿ ಇನ್ನೊಂದು ಪ್ರಶ್ನೆ ಎತ್ತಿಕೊಳ್ಳೋಣ – ಇಂಡಿಯಾದಲ್ಲೇ ಏಕೆ ಹತ್ತಿಯಿಂದ ಬತ್ತಿ ಮಾಡುತ್ತಾರೆ ? ಏಕೆಂದರೆ, ಈ ದೇಶದಲ್ಲಷ್ಟೇ ಬತ್ತಿಯನ್ನು ದೇವರೆದುರು ದೀಪ ಹಚ್ಚಲು ಉಪಯೋಗಿಸುತ್ತಾರೆ. ಇದರರ್ಥ : ಈ ಸಿಲ್ಲೀ ಟ್ರಿಕ್‌ಸ್‌ಗಳನ್ನೇ ದೈವೀಶಕ್ತಿ ಎಂದು ನಂಬುವ ಅಸಂಖ್ಯಾತ ಜನರಿರುವುದು ನಮ್ಮ ದೇಶದಲ್ಲೇ.

ಈ ದೇವತಾಮನುಷ್ಯರೆಂದು ನಮ್ಮಿಂದ ಕರೆಸಿಕೊಳ್ಳುವವರು ಹುಟ್ಟಿದ್ದು, ಬೆಳೆದದ್ದು, ಪ್ರಾಯಕ್ಕೆ ಬಂದದ್ದು – ಇವೆಲ್ಲಾ ನನ್ನ ನಿಮ್ಮ ಹಾಗೆ. ನಾವು ಹುಟ್ಟಿ ಬಂದಾಗ ನಮ್ಮ ನಮ್ಮ ಹೆತ್ತವರು ಅದೆಷ್ಟು ಜಾಗ್ರತೆಯಿಂದ ನಮ್ಮನ್ನು ನೋಡಿಕೊಂಡರೋ, ಅದು ಅವರ ಪಾಲಿಗೂ ಅಷ್ಟೇ ಸತ್ಯ. ಎಂದರೆ, ಅವರೂ ನಮ್ಮೆಲ್ಲರ ಹಾಗೆ ಹಿರಿಯರ ಮೇಲ್ವಿಚಾರಣೆ, ಮಾರ್ಗದರ್ಶನ ಹಾಗೂ ಅಧಿಕಾರದ ಹಿಡಿತ ಇವುಗಳ ನೆರವಿನಿಂದ ಬೆಳೆದವರು. ನಮ್ಮೆಲ್ಲರ ಹಾಗೆ ಶಾಲೆ ಮೆಟ್ಟಿಲು ಹತ್ತಿ ಅ ಆ ಇ ಈ ಕಲಿತವರು. ಮಗ್ಗಿ ಹೇಳಿದ್ದು ತಪ್ಪಾಗಿ ಶಿಕ್ಷಕರಿಂದ ಬೈಸಿಕೊಂಡವರು. ಪೋಕರಿತನ ಪ್ರದರ್ಶಿಸಿ ಏಟು ತಿಂದವರು, ಫೈಲಾಗಿ ಪಾಸಾದವರು, ಅಥವಾ ಫೈಲಿನ ಅವಮಾನದಿಂದ ಶಾಲೆಬಿಟ್ಟವರು. ಹೊಟ್ಟೆ-ಬಟ್ಟೆಗಾಗಿ ಪರದಾಡಿದವರು.

ಹೀಗೆ, ನಮ್ಮೆಲ್ಲರ ಹಾಗೆ, ಮಕ್ಕಳ ಪ್ರಾಯದಲ್ಲಿ ಮಕ್ಕಳಾಗಿಯೇ, ಬೆಳೆದುಬಂದವರಲ್ಲಿ ಮುಂದೊಂದು ದಿನ, ಒಂದು ವಿಚಿತ್ರ ಮತ್ತು ನಿಗೂಢ ರೀತಿಯಲ್ಲಿ, ಅದ್ಹೇಗೆ ಈ ವಿಶೇಷ ಶಕ್ತಿ ಸೇರಿಕೊಂಡಿತು ? ಇನ್ನೊಂದು ರೀತಿಯಲ್ಲಿ ಪ್ರಶ್ನಿಸುವುದಾದರೆ, ಅಂತಹ ದೈವೀಶಕ್ತಿ ನನ್ನೊಳಗಾಗಲೀ ನಿಮ್ಮೊಳಗಾಗಲೀ ಏಕೆ ಸೇರಿಕೊಳ್ಳಲಿಲ್ಲ ?



ಸರಿಯಾಗಿ ವಿಶ್ಲೇಷಿಸಿದರೆ ಈ ತರದ ವಿಚಾರಣೆ ತಪ್ಪು ಅಥವಾ ಇವು ತಪ್ಪು ಪ್ರಶ್ನೆಗಳು. ಏಕೆಂದರೆ, ಅವರಲ್ಲಿ ದೈವೀಶಕ್ತಿ ಇದೆಯೆಂದು ನಾವು ಉಳಿದವರು – ನಂಬಿಕೊಂಡದ್ದು ಮಾತ್ರ. ಮತ್ತು ಹಾಗೆ ನಂಬಿಕೆ ಬರುವಂತೆ ಅವರು ಕೈಚಳಕ ಪ್ರದರ್ಶಿಸಿದ್ದು ಮಾತ್ರ. ಟ್ರಿಕ್ಸ್ ಮಾಡಿ ತೋರಿಸಿದ್ದು ಮಾತ್ರ. ನಾವು ಭ್ರಮೆಪಟ್ಟದ್ದು ಮಾತ್ರ.

ನಮ್ಮ ನಂಬಿಕೆಗಳಿಗೂ ಮತ್ತು ವಾಸ್ತವಕ್ಕೂ ಇರುವ ವ್ಯತ್ಯಾಸಗಳನ್ನು ವೈಜ್ಞಾನಿಕವಾಗಿ ದಾಖಲಿಸಿ, ಊರೂರು – ಹಾಗೂ ಸುಮಾರು ಐವತ್ತು ದೇಶಗಳು – ಸಂಚರಿಸಿ, ಧಾರ್ಮಿಕ ಗುರುಗಳ ಟ್ರಿಕ್ಸ್‌ಗಳನ್ನು ಬಯಲುಮಾಡಿ, ಮೂಢನಂಬಿಕೆಗಳೆದುರು ಬೆಳಕಿನ ಟಾರ್ಚ್ ಹಿಡಿದ ಕೀರ್ತಿ ಮತ್ತು ಗೌರವ ಬಿ. ಪ್ರೇಮಾನಂದ್ ಅವರದು. ಹೆಸರಾಂತ ವಿಚಾರವಾದಿ. 'ಪವಾಡ ಭಂಜಕ' ಎಂದೇ ಖ್ಯಾತಿ ಪಡೆದವರು. 'ಇಂಡಿಯನ್ ಸ್ಕೆಪ್ಟಿಕ್' ಪತ್ರಿಕೆಯ ಸಂಪಾದಕರು ಮತ್ತು ಪ್ರಕಾಶಕರು. ಅಬ್ರಹಾಂ ಕೋವೂರರ ಅನುಯಾಯಿ ಮತ್ತು ವಾರಸುದಾರ.

ತಮಿಳುನಾಡಿನ ಪೋದನೂರು ಎಂಬ ಪುಟ್ಟ ಪಟ್ಟಣದಲ್ಲಿ, 'ಇಂಡಿಯನ್ ಕಮಿಟಿ ಫಾರ್ ಸೈಂಟಿಫಿಕ್ ಇನ್‌ವೆಸ್ಟಿಗೇಶನ್ಸ್ ಆಫ್ ಕ್ಲೈಮ್ಸ್ ಆಫ್ ದಿ ಪ್ಯಾರಾನಾರ್ಮಲ್' ಎಂಬ ಸಂಸ್ಥೆಯ ಮೂಲಕ 'ಸಾಕ್ಷಾತ್ ದೇವರು' ಅಥವಾ 'ದೇವತಾ ಮನುಷ್ಯರು' ಎಂಬ ವಂಚಕ ವ್ಯಾಪಾರಿಗಳ ವಿರುದ್ಧ ಹೋರಾಟ ನಡೆಸುತ್ತಿರುವ ಪ್ರೇಮಾನಂದ್ ಅವರನ್ನು ಶೈನಿ ಆಂತೋಣಿ ಅವರು 'ವಿಜ್ಞಾನ ಮತ್ತು ಪವಾಡಗಳು' ಪುಸ್ತಕದಲ್ಲಿ (ನವಕರ್ನಾಟಕ ಪ್ರಕಾಶನ, ೧೯೯೭) ಪರಿಚಯ ಮಾಡಿದ್ದು ಹೀಗೆ: '........ ಗಾಳಿಗೆ ಅಲೆಅಲೆಯಾಗಿ ಹಾರಾಡುವ ಬಿಳಿಗಡ್ಡ, ದಾಪುಗಾಲಿನ ನಡಿಗೆ, ಅವರತ್ತಲೇ ಎಲ್ಲರ ದೃಷ್ಟಿ (ರೈಲು ನಿಲ್ದಾಣದಲ್ಲಿ). ಕುತೂಹಲಿಗಳ ನೆಟ್ಟ ದೃಷ್ಟಿಯಿಂದ ಇವರಿಗೇನೂ ಮುಜುಗರವಿಲ್ಲ. ಕುರ್ತಾ ಧರಿಸಿರುವ ಈ ವ್ಯಕ್ತಿ, ಮುರುಕಲು ಸಿಮೆಂಟ್ ಬೆಂಚೊಂದರ ಮೇಲೆ ಹಾಯಾಗಿ ಕುಳಿತುಕೊಳ್ಳುತ್ತಾರೆ. ಪವಾಡದ ವ್ಯಾಪಾರಿಗಳ ಕೈಚಳಕದಿಂದ ಮತ್ತು ಸ್ವಯಂಘೋಷಿತ ದೇವಮಾನವರ ಬಂಧನದಿಂದ ಜನಸಾಮಾನ್ಯರನ್ನು ಬಿಡುಗಡೆಗೊಳಿಸುವುದಕ್ಕೆ ಈ ವ್ಯಕ್ತಿ ಬದ್ಧರಾಗಿದ್ದಾರೆ. ದೇವಮಾನವರೆನಿಸಿಕೊಂಡವರು, ಧರ್ಮ ಪ್ರಚಾರಕರು, ಎಲ್ಲರೂ ಇವರ ದೃಷ್ಟಿಯಲ್ಲಿ ಕೈವಾಡ ಮಾಡುವವರು ಅಥವಾ ಕೈಚಳಕ ತೋರಿಸುವವರು. ನಿಧಾನವಾಗಿ ಇವರ ಸುತ್ತ ಜನ ಸೇರುತ್ತಾರೆ. ದಿಂಬಿಗೊರಗಿ ಕೂತ ಪ್ರಯಾಣಿಕರು ಎದ್ದುಕೂತುಕೊಳ್ಳುತ್ತಾರೆ. ಬಿಸ್ಲೇರಿ ಬಾಟ್ಲಿ ನೀರು ಹೀರುವುದನ್ನು ನಿಲ್ಲಿಸಿ ಪ್ರವಾಸಿಗರು, ಬೆರಗುಗಣ್ಣುಗಳಿಂದ ಇವರನ್ನು ದಿಟ್ಟಿಸಿ ನೋಡುತ್ತಾರೆ. ಇದಾವುದರ ಪರಿವೆ ಇವರಿಗಿಲ್ಲ...'

ಪ್ರೇಮಾನಂದ್ ಅವರಿಗೀಗ ಸುಮಾರು ಎಪ್ಪತ್ತೆಂಟು ವರ್ಷ (ಜ. ೧೯೩೦). ಅಚ್ಚ ಬೆಳ್ಳಿಬಣ್ಣದ ತಲೆಕೂದಲು. ಕುತ್ತಿಗೆಯ ಮುಂದೆ ಪರದೆಯಂತಿಳಿದ ಒರೆಕೋರೆ ಗಡ್ಡ. ಕನ್ನಡಕದ ಗಾಜಿನ ಹಿಂದೆ ಮುಗ್ಧ ಹುಡುಗಾಟದ ಕಣ್ಣುಗಳು. ಗತ್ತು, ಗಾಂಭೀರ್ಯ ವಿರದ ನಡಿಗೆ. ಪಾದಕ್ಕೆ ಕಚಗುಳಿಕೊಡುವ ಬಿಳಿ ಮುಂಡು. ಹಿಂದೊಮ್ಮೆ ದೇಹ ದಪ್ಪಗಾಗಿದ್ದುದರ ಚರಿತ್ರೆ ಹೇಳುವ ನೀಲಿ ಶರ್ಟ್. ಅನಾರೋಗ್ಯದ ಕಾರಣದಿಂದ ದೇಹ ನಿತ್ರಾಣಗೊಂಡಿದ್ದರೂ ಅದರ ನೆರಳು ಕೂಡ ಕಂಡುಬರದ ರೀತಿಯಲ್ಲಿ, ಬೆಕ್ಕಿನ ಮರಿಯಂತೆ ಉತ್ಸಾಹದ ಮನಸ್ಸು. ಎಂದೆಂದೂ ಮುಗಿಯದ ಸಾಮಾಜಿಕ ಹೋರಾಟದ ಒಂದೊಂದು ಅಧ್ಯಾಯವನ್ನು ಗಂಟೆಗಟ್ಟಲೆ ವಿವರಿಸುವ ತಾಳ್ಮೆ ಹೊತ್ತ ವ್ಯಕ್ತಿತ್ವ.

ಅಸೌಖ್ಯದ ಶಿಶುವಾಗಿಯೇ ಹುಟ್ಟಿಬಂದ ಪ್ರೇಮಾನಂದ್

## "ಮಾನವ - ವಾಮನ"



ಗರ್ಭದಲೆ 'ಮತ್ಸ್ಯ' 'ಕೂರ್ಮ' 'ವರಾಹ'
ಅವತಾರಗಳ ಜೊತೆಗೆ 'ನಾರಸಿಂಹ'
ಅವತಾರವನೂ ಮುಗಿಸಿ 'ಮಾನವನ'
ರೂಪುತಾಳಿ ಜಗಕೆ ಬಂದಿದ್ದ 'ವಾಮನ'.

ಗರ್ಭಚೀಲವ ಹರಿದು 'ಛತ್ರಿ' ಸಂಕೇತದಲಿ
ಶಿಶುರೂಪದಲಿ ಬಂದು 'ವಾಮನ'ನಿಂದ
ಭೂಮ್ಯಾಕಾಶಗಳ ಗೆಲುವ ಹುಮ್ಮಸ್ಸಿನಲಿ
ಬಂದ ವಾಮನ 'ಅನ್ಯಾಯ' ತುಳಿದು ನಿಂದಿದ್ದ.

ರಾಮ ಪರಶುರಾಮ ಶ್ರೀಕೃಷ್ಣಾವತಾರಕಾಗಿ
ಕಾದು ನಿಂತಿದ್ದ ಮೈತಳೆದು ಬೆಳೆಯುತಿದ್ದ
ಒಂಭತ್ತು ತಿಂಗಳಲಿ ನಾಲ್ಕವತಾರ ತಳೆದು
ಅರವತ್ತು ವರ್ಷದಲಿ ಮೂರು ಅವತಾರಗಳು.

ವಾನಪ್ರಸ್ಥದ 'ಬುದ್ಧ' ತಿಳಿವಿನಲಿ ಪ್ರಬುದ್ಧ
ಅನುಭವದ ಮೂಸೆಯಲಿ ಅರಳಿ ನಿಂತಿದ್ದ
ಅನುಭವದ ಸಾರವನು ಅನುಭೂತಿಯಲಿ ಹಂಚಿ
ಹತ್ತನೆಯ ಅವತಾರಕ್ಕಾಗಿ ಕಾದು ನಿಂತಿದ್ದ

'ದೇವ'ನವತಾರಗಳು ಎಂದೆ ಬಿಂಬಿಸಿದ
'ನವಾ'ವತಾರಗಳು ಮುಗಿಸಿ ಮೇಲೆದ್ದು
ಅಂತಿಮಾವತಾರವೆಂದೇ ಬಿಂಬಿಸಿದ 'ಕಲ್ಕಿ'
ಅಪ್ಪಳಿಸಿದೊಡನೆ ದಶಾವತಾರ ಮುಗಿಸಿದ್ದ.

'ಮಾನವ'ನಾದ ವಾಮನ ಎನಿತು ಗೂಢ
ಆದರ್ಶ ಚರಿತೆಯನು ಬಿಂಬಿಸಿದ 'ಶ್ರೀರಾಮ'
ಜೊತೆಗೆ ಕ್ಷಾತ್ರದ ಮೂರ್ತಿ 'ಪರಶುರಾಮ'
ರಾಜಕಾರಣದಲೇ ತಿಳಿವ ಸಾರಿದ 'ಶ್ರೀಕೃಷ್ಣ'.

ಬೌದ್ಧಾವತಾರದ ನಂತರ ಕಲ್ಕಿಯಾಗಿ ನಡೆದಿದ್ದ
ಜಗಕೆ ದಶಾವತಾರಗಳ ಗೂಢವನು ತಿಳಿಸಿದ್ದ.

ಜಿ. ಎಸ್. ಕೃಷ್ಣಮೂರ್ತಿ
ಸಂಖ್ಯೆ ಎಲ್-೧೭೪, ೭ನೇ ಮುಖ್ಯರಸ್ತೆ, ಹೆಬ್ಬಾಳ ೨ನೇ ಹಂತ
ಮೈಸೂರು - ೫೭೦ ೦೧೭

ಅವರ ಬಾಲ್ಯದುದ್ದಕ್ಕೂ ರೋಗಿಯ ಪಟ್ಟ. ಬಾಲ್ಯದಿಂದಲೇ ಅಂಟಿಕೊಂಡು ಬಂದ ಪಿತ್ತಜನಕಾಂಗದ ತೊಂದರೆಯಿಂದಾಗಿ ಅವರು ಬದುಕುಳಿಯಲಾರರೆಂದೇ ಎಲ್ಲರ ನಂಬಿಕೆಯಾಗಿತ್ತು. ಮಗುವಿನ ಜಾತಕ ಬರೆಯಲು ತಂದೆ, ಜ್ಯೋತಿಷಿಯನ್ನು ಭೇಟಿ ಮಾಡಿದಾಗ ಅವರು ಹೇಳಿದ್ದು ಹೀಗೆ – ''ಅವನು ಈಗಾಗಲೇ ಸತ್ತಿದ್ದಾನೆ. ಬದುಕಿದ್ರೂ ಬರೀ ಒಂದೆರಡು ದಿವ್ಸ. ಅವನ ಜಾತಕ ಮಾಡುವುದು ಬೇಡ'. ಬೆಲೂನಿನಂತೆ ಊದಿಕೊಂಡ ಹೊಟ್ಟೆ, ಬಲವಿಲ್ಲದ ದೇಹ, ಮುಂದಕ್ಕೆ ಚಾಚಿಕೊಂಡ ಹೊಟ್ಟೆಯಿಂದಾಗಿ ಶರೀರದಲ್ಲಿ ಬ್ಯಾಲನ್ಸ್ ಇರದೆ ಅವರು ನಡೆಯಲು ಶುರುಮಾಡಿದ್ದೇ ನಾಲ್ಕು ವರ್ಷ ಪ್ರಾಯದಲ್ಲಿ.

ಕುಟುಂಬ ವೈದ್ಯರೊಬ್ಬರ ಶುಶ್ರೂಷೆಯಿಂದಾಗಿ ಪ್ರೇಮಾನಂದ್ ಅವರು ಬದುಕುಳಿದರು. ಬೆಳೆದು ಬಾಲಕರಾದರು. ಶಾಲಾ ಜೀವನ ಮುಗಿಯುವ ಹಂತದಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸೇರಿಕೊಂಡದ್ದರಿಂದ ಶಾಲೆ ಬಿಡಬೇಕಾಗಿ ಬಂತು. ಕೆಲವರ್ಷದ ನಂತರ ದೇವರು ಮತ್ತು ಪವಾಡಗಳಲ್ಲಿ ಆಸಕ್ತಿ ತೀವ್ರಗೊಂಡಿತು. ದೇವರನ್ನು ಸ್ವಂತ ಕಣ್ಣುಗಳಿಂದ ಕಾಣಬೇಕೆಂಬ ಒಂದೇ ಗುರಿಯಿಟ್ಟುಕೊಂಡು ಹಿಮಾಲಯಕ್ಕೆ ತೆರಳಿದರು. ಪ್ರಸಿದ್ಧ ಗುರುಗಳೊಬ್ಬರ ಶಿಷ್ಯರಾದರು. ದೇವರನ್ನು ಕಂಡೇ ಕಾಣುತ್ತೇನೆಂಬ ಪೂರ್ತಿ ನಂಬಿಕೆಗೆ ಬದ್ಧರಾದರು. ಗುರುಗಳ ಮಾರ್ಗದರ್ಶನದಲ್ಲಿ ಯೋಗಪಟುವಾದರು. ವರ್ಷಗಳುರುಳಿದವು. ಅಷ್ಟಸಿದ್ಧಿ ಎಂಬ ಹಂಬಲ-ನಿರೀಕ್ಷೆ ಬರೀ ಭ್ರಮೆಯಾಯಿತು. ದೇವರ ಸಾಕ್ಷಾತ್ಕಾರದ ಬದಲು ಕಣ್ಣಿಗೆ ಬಿದ್ದದ್ದು ಸಾಧು-ಸಂತರೆಂಬ ವಂಚಕ ಸಮಾಜ. ಅದರೊಂದಿಗೆ ಸ್ಪಷ್ಟವಾದದ್ದು – ನಮ್ಮವರ ಭಯ, ಮೌಢ್ಯ ಮತ್ತು ವೈಜ್ಞಾನಿಕ ಮನೋಭಾವದ ಕೊರತೆ. ಪ್ರೇಮಾನಂದ್ ಅವರ ಬದುಕಿನ ಗುರಿ ಅಲ್ಲೇ ಕಂಡಿತು – ಸಮಾಜ ಸುಧಾರಣೆ. ಅವರ ಹೋರಾಟದ ಬದುಕು ಶುರುವಾಯ್ತು.



ಪ್ರೇಮಾನಂದ್ ಮತ್ತು ನರೇಂದ್ರ ನಾಯಕ್

ಆದರೆ ಈ ಹೋರಾಟದ ಹಾದಿ ಯಾವತ್ತೂ ಸರಳವಾಗಿರಲಿಲ್ಲ, ಸುಲಭವಾಗಿರಲಿಲ್ಲ ಮತ್ತು ತೃಪ್ತಿಕರವಾಗಿರಲಿಲ್ಲ. ದೇವಮಾನವರ ಮತ್ತು ನಂಬಿಗಸ್ಥರ ಬೆದರಿಕೆ, ವಿರೋಧ ಮತ್ತು ವೈರತ್ವವನ್ನೆಲ್ಲಾ ಮೆಟ್ಟಿ ನಡೆಯುವುದು ನಮ್ಮ ದೇಶದಲ್ಲಿ ಸುಲಭವಲ್ಲ. ಆದರೆ, ಪ್ರೇಮಾನಂದ್ ಅವರ ಛಲ ಭೂಮಿಯಂತೆ ಗಟ್ಟಿಯಾಗಿತ್ತು. ಇಲ್ಲೊಂದು ಉದಾಹರಣೆ: ಪ್ರೇಮಾನಂದ್ ಅವರ ತಂದೆ ತೀರಿಕೊಂಡಾಗ, ಅವರ ಉರುಳಿಗೆ ಧಾರ್ಮಿಕ ಕಟ್ಟುಕಟ್ಟಳೆಯ ಸರಪಳಿಯನ್ನು ಬಿಗಿದ ಕುಟುಂಬದವರು, 'ಶ್ರಾದ್ಧಕರ್ಮ ನೀನು ಮಾಡಲೇಬೇಕು', ಎಂದು ಒತ್ತಾಯ ಮಾಡಿದರು. ಯಾಕೆ ? ಯಾಕೆ ಮಾಡ್ಬೇಕು ನಾನು ? ಈ ಪ್ರಶ್ನೆಗೆ ಉತ್ತರ ಬಂದದ್ದು ಹೀಗೆ – 'ಹಾಗೇನಾದರೂ ಮಾಡದೇ ಇದ್ದಲ್ಲಿ, ಅಪ್ಪನ ಆತ್ಮಕ್ಕೆ ಸದ್ಗತಿ ದೊರಕದೆ, ಇಡೀ ಕುಟುಂಬಕ್ಕೆ ಹಾನಿ-ಕಷ್ಟ ಬರುತ್ತದೆ'. ನಾನು ಆಚರಣೆ ಬಿಟ್ಟರೆ, ನಿಮಗೇಕೆ ಸಂಕಷ್ಟ ಬರಬೇಕು ? ಪ್ರೇಮಾನಂದ್ ಅವರು ಆ ರೀತಿ ವೈಚಾರಿಕ ಪ್ರಶ್ನೆ ಕೇಳಿದ್ದು, ಕುಟುಂಬದವರಿಗೆ ತೃಪ್ತಿಕೊಡಲಿಲ್ಲ. ಮಕ್ಕಳ ಪೈಕಿ ಒಬ್ಬ ನಿರ್ಲಕ್ಷ್ಯ ಮಾಡಿದ್ರೂ ಸಾಕು; ಅಪ್ಪನ ಆತ್ಮಕ್ಕೆ ಶಾಂತಿ ದೊರಕದೆ, ಅದು ಇಲ್ಲೇ ಓಡಾಡಿ, ಕುಟುಂಬದ ಎಲ್ಲರನ್ನೂ ಕಾಡಿ, ಸಂಕಷ್ಟ, ದುಃಖಗಳನ್ನು ತರುತ್ತದೆ (!) ಎಂದು ಅವರು ನಂಬಿಕೊಂಡಿದ್ದರು.

ಆದರೆ ಪ್ರೇಮಾನಂದ್ ಅವರು ತಮ್ಮ ವೈಚಾರಿಕ ನಿಲುವನ್ನು ಬಿಟ್ಟುಕೊಡುವವರಲ್ಲ. ಇದನ್ನರಿತ ಕುಟುಂಬದವರು ಪ್ರೇಮಾನಂದ್ ಅವರ ತಾಯಿಯ ಮೂಲಕ ಒತ್ತಡ ತಂದರು. ತನ್ನನ್ನು ಬಹಳಷ್ಟು ಪ್ರೀತಿಸುವ ತಾಯಿಯನ್ನು ನೋಯಿಸುವುದೂ ಸಾಧ್ಯವಿಲ್ಲ, ಮತ್ತು ತಮ್ಮ ವೈಚಾರಿಕ ನಿಲುವನ್ನು ಬಿಟ್ಟುಕೊಡುವುದೂ ಸಾಧ್ಯವಿಲ್ಲ. ಏನು ಮಾಡುವುದು ? ಆ ಪರಿಸ್ಥಿತಿಯಲ್ಲಿ ಪ್ರೇಮಾನಂದ್ ಅವರ ನೆರವಿಗೆ ಬಂದದ್ದು, ಅವರ ವೈಚಾರಿಕತೆಯ ಸರಳತೆ. ತಾಯಿಯೆದುರು ಅವರು ಮೂರು ಪ್ರಶ್ನೆಗಳನ್ನೊಡ್ಡಿದರು. ಮೊದಲ ಪ್ರಶ್ನೆ: 'ನಿಮ್ಮ ಪ್ರಕಾರ, ತಂದೆಯವರು ಒಳ್ಳೆಯವರೋ ? ಕೆಟ್ಟವರೋ ?' ತಾಯಿ ಉತ್ತರ ಕೊಟ್ಟರು – 'ಅವರು ಬಹಳ ಒಳ್ಳೆಯ ಮನುಷ್ಯ.' ಎರಡನೆಯ ಪ್ರಶ್ನೆ – 'ಅಷ್ಟು ಒಳ್ಳೆಯ ಮನುಷ್ಯರಾಗಿದ್ದ ಮೇಲೆ, ಅವರ ಆತ್ಮಕ್ಕೆ ಸ್ವರ್ಗದೊಳಗೆ ಪ್ರವೇಶ ಸಿಕ್ಕದೇ ಇರುವುದು ಸಾಧ್ಯವಾ ?' ತಾಯಿ ಉತ್ತರಿಸಿದರು – 'ಅವರ ಆತ್ಮಕ್ಕೆ ಸ್ವರ್ಗದೊಳಗೆ ಪ್ರವೇಶ ಸಿಕ್ಕಿರಲೇಬೇಕು.' ಮೂರನೆಯ ಪ್ರಶ್ನೆ – 'ಸ್ವರ್ಗದೊಳಗೆ ಪ್ರವೇಶ ಪಡೆದಿರುವ ಆತ್ಮ, ಒಂದು ವೇಳೆ ಅಲ್ಲಿಂದ ಹೊರಬಂದು ಇಲ್ಲಿನ ಕುಟುಂಬದವರಿಗೆ ಕಷ್ಟ-ದುಃಖ ತಂದುಕೊಟ್ಟರೆ, ಸ್ವರ್ಗದೊಳಗೆ ಮರುಪ್ರವೇಶ ಸಿಕ್ಕೀತಾ ? ಒಂದು ವೇಳೆ ಸಿಗದೇ ಹೋದರೆ ? ಮತ್ತದು ಇಲ್ಲೇ ನರಳಿಕೊಂಡಿರಬೇಕು ಅಥವಾ ನರಕದೊಳಗೆ ದೂಡಿಬಿಡುತ್ತಾರೆ. ಹಾಗೆ ಆಗುವುದನ್ನು ನೀವು ಬಯಸುತ್ತೀರಾ ?' ತಾಯಿ ಹೇಳಿದರು – 'ಖಂಡಿತಾ ಹಾಗಾಗುವುದು ಬೇಡ. ಸ್ವರ್ಗಕ್ಕೆ ಹೋದವರು ಅಲ್ಲೇ ಶಾಂತಿಯಿಂದಿರಲಿ.' ಹೀಗೆ ಹೇಳಿ, ತನ್ನ ತಂದೆಯ ಶ್ರಾದ್ಧಕ್ರಿಯೆಯಲ್ಲಿ ಪ್ರೇಮಾನಂದ್ ಅವರು ಭಾಗವಹಿಸುವುದಿಲ್ಲ ಎಂದಾದರೆ, ಹಾಗೇ ಆಗಲಿ ಎಂದುಬಿಟ್ಟರು.

ಏನೋ ಕೈಚಳಕ ಪ್ರದರ್ಶಿಸಿ, 'ದೇವರು ನನ್ನಿಂದ ಪವಾಡ ನಡೆಸಿದ್ದಾನೆ', ಎಂದು ಹೇಳುತ್ತಾ ಜನವಂಚನೆ ಮಾಡುವವರ ಬಗ್ಗೆ ಪ್ರೇಮಾನಂದ್ ಅವರು ಊರೂರು ತಿರುಗಿ ಭಾಷಣ ಮಾಡಿದ್ದಾರೆ. ರಹಸ್ಯಗಳನ್ನು ಬಯಲು ಮಾಡಿದ್ದಾರೆ. ಕೋರ್ಟಿಗೆ ಅರ್ಜಿ ಸಲ್ಲಿಸಿ ನ್ಯಾಯಕ್ಕಾಗಿ ಶ್ರಮಿಸಿದ್ದಾರೆ. ಈ ನಯವಂಚಕರ ಏಜಂಟರುಗಳಿಂದ ಹಿಂಸೆಯನ್ನು ಉಂಡಿದ್ದಾರೆ. ದೊರೆತ ಅನುಭವಗಳು ಹಲವಾರು. ವಂಚಕರು ಬಳಸುವ ವಿಧಾನಗಳು ನೂರಾರು. ಇಲ್ಲೊಂದು ಉದಾಹರಣೆ: ದೇವತಾಮನುಷ್ಯರು ತಮ್ಮ ಪವಾಡಶಕ್ತಿ ಪ್ರದರ್ಶನಕ್ಕೆ ಸುಲಭವಾಗಿ ಬಳಸುವ ತಂತ್ರ – ಅಂಗೈಯಿಂದ ವಿಭೂತಿ ಉದುರಿಸುವುದು. ಅಂಗೈಯನ್ನು ಕೆಳಮುಖಮಾಡಿ, ವೃತ್ತಾಕಾರವಾಗಿ ಆಡಿಸುತ್ತಾರೆ. ಮುಷ್ಟಿಯೊಳಗೆ ವಿಭೂತಿಪುಡಿ ಹಿಡಿದುಕೊಂಡದ್ದೇ ಆದರೆ, ಮುಷ್ಟಿ ತೆರೆದು, ಅಂಗೈಯನ್ನು ಕೆಳಮುಖಮಾಡಿದಾಗ, ಅದೆಲ್ಲಾ ಚೆಲ್ಲಿಹೋಗಬೇಕು ತಾನೇ ? ಆದುದರಿಂದ, ಅಂಗೈಯನ್ನು ಕೆಳಮುಖ ಮಾಡಿದ್ದನ್ನು ನೋಡಿದವರು, 'ಕೈಯೊಳಗೆ ಏನಿಲ್ಲ' ಎಂಬ ತೀರ್ಮಾನಕ್ಕೆ ಬರುತ್ತಾರೆ. ಮತ್ತು ಮುಂದೆ ನಡೆಯುವುದನ್ನು ಪವಾಡವೆಂದು ಗ್ರಹಿಸುತ್ತಾರೆ. ಅಲ್ಲಿಂದ ಭಸ್ಮ ಉದುರಿದಾಗ, ದೈವೀಶಕ್ತಿಯಿಂದಲೇ ಭಸ್ಮ ಸೃಷ್ಟಿಯಾಯಿತು ಎಂದುಕೊಳ್ಳುತ್ತಾರೆ. ಆದರೆ ಇದೂ ಒಂದು ಟ್ರಿಕ್ ಅಷ್ಟೆ. ಕೇವಲ ಕೈಚಳಕ, ಪ್ರದರ್ಶನ ಸುಲಭ. ಬೂದಿಯೊಂದಿಗೆ ಪರಿಮಳದ್ರವ್ಯವನ್ನು ಮಿಶ್ರಣ ಮಾಡುವುದು ಮೊದಲ ಹಂತ. ಗಂಜಿನೀರಿನೊಂದಿಗೆ ಕಲಸಿ, ಚಿಕ್ಕ ಚಿಕ್ಕ ಹರಳುಗಳನ್ನು ಮಾಡಿ, ಬಿಸಿಲಲ್ಲಿ ಒಣಗಿಸಿಟ್ಟುಕೊಳ್ಳಬೇಕು. ಅಲ್ಲಿಗೆ ಪೂರ್ವ ತಯಾರಿ ಮುಗಿಯಿತು. ಮುಂದಿನದು ಮ್ಯಾಜಿಕ್ ಪ್ರದರ್ಶನ. ಒಂದೆರಡು ಗೋಳಿಗಳನ್ನು ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯೆ ಅಡಗಿಸಿಟ್ಟುಕೊಳ್ಳಬೇಕು. ಅಂಗೈಯನ್ನು ಕೆಳಮುಖ ಮಾಡಿ, ವೃತ್ತಾಕಾರವಾಗಿ ತಿರುಗಿಸುತ್ತಾ, ಒಂದೊಂದೇ ಗೋಲಿಯನ್ನು ಬೆರಳಿನ ತುದಿಗೆ ತಂದು ಒತ್ತಿಹಿಡಿದರೆ ವಿಭೂತಿಯ ಧೂಳು ಉದುರುತ್ತದೆ. ಗೋಳಿಗಳು ಮುಗಿದಾಗ ಕೈಒರಸುವ ನೆಪದಲ್ಲಿ ಕಿಸೆಯೊಳಗೆ ಕೈ ಇಳಿಸಿ, ಇನ್ನಷ್ಟು ಗೋಳಿಗಳನ್ನು ಎತ್ತಿಕೊಂಡು, ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯೆ ಅಡಗಿಸಿಟ್ಟು ಪ್ರದರ್ಶನ ಮುಂದುವರಿಸಿದರಾಯಿತು. ಇದೇ ರೀತಿ ನಾಣ್ಯಗಳಿಂದ ವಿಭೂತಿ ಉದುರಿಸುವುದು ಕೂಡಾ ಬರೀ ಒಂದು ಟ್ರಿಕ್. ಒಂದು ರಾಸಾಯನಿಕ ಪ್ರಯೋಗ ಅಷ್ಟೆ. ಇದಕ್ಕೆ ಅಲ್ಯೂಮಿನಿಯಂ ನಾಣ್ಯವೇ ಬೇಕು. ಸಭಿಕರಿಂದ ಅಥವಾ ಭಕ್ತರಿಂದ ಪಡೆದ ನಾಣ್ಯದ ಮೇಲೆ, ಮಂತ್ರಪಠಣದ ನೆಪದಲ್ಲಿ ಮರ್ಕ್ಯೂರಿಕ್ ಕ್ಲೋರೈಡ್ ದ್ರಾವಣವನ್ನು ಲೇಪಿಸಿ ಬಾಯಿಂದ ಊದುತ್ತಿರಬೇಕು. ಒಂದೆರಡು ನಿಮಿಷದ ನಂತರ, ದ್ರಾವಣ ತುಸು ಒಣಗಿದ ಮೇಲೆ ಆ ನಾಣ್ಯವನ್ನು ಅದೇ ಭಕ್ತರಿಗೆ

ಹಿಂದಿರುಗಿಸಿ, ಅದನ್ನು ಮುಷ್ಟಿಯೊಳಗೆ ಭದ್ರವಾಗಿ ಮುಚ್ಚಿಟ್ಟುಕೊಳ್ಳಲು ವಿನಂತಿಸಬೇಕು. 'ನನ್ನ ಮಾಂತ್ರಿಕ ಶಕ್ತಿಯನ್ನು ಆ ನಾಣ್ಯಕ್ಕೆ ತಲುಪಿಸುತ್ತೇನೆ', ಎಂದು ಧ್ಯಾನ ಮಾಡುವಂತೆ ನಟನೆ ಮಾಡುತ್ತಿರಬೇಕು. ನಾಣ್ಯದ ಅಲ್ಯುಮಿನಿಯಂ, ಮರ್ಕ್ಯುರಿಕ್ ಕ್ಲೋರೈಡ್ ಮತ್ತು ಗಾಳಿಯ ತೇವ ಇವುಗಳ ರಾಸಾಯನಿಕ ಸಂಯೋಗದಿಂದ ನಾಣ್ಯ ಬೆಚ್ಚಗಾಗಿ, ಅದರ ಮೈಮೇಲೆ ಬೂದಿಬಣ್ಣದ ಧೂಳು ಕಂಡುಬರುತ್ತದೆ. ಅದನ್ನೇ ವಿಭೂತಿ ಎಂದು ಜನ ನಂಬುತ್ತಾರೆ.

೧೯೮೮ರಲ್ಲೊಮ್ಮೆ ಪ್ರೇಮಾನಂದ್ ಅವರು ಮಹಾರಾಷ್ಟ್ರದ ಬೇರೆ ಬೇರೆ ಊರುಗಳಲ್ಲಿ ತಮ್ಮ 'ಪವಾಡ ಬಯಲು' ಪ್ರದರ್ಶನ ಕೊಡುತ್ತಿದ್ದರು. ಅಲ್ಲಿನ ಫಲ್ಟನ್ ಎಂಬ ಊರಿನ ಬಾಬಾನೊಬ್ಬ ಪತ್ರಿಕೆಯೊಂದರಲ್ಲಿ ಹೇಳಿಕೆ ಕೊಟ್ಟ. 'ನಾನು ನಾಣ್ಯದಿಂದ ಭಸ್ಮ ಉದುರಿಸುವುದು ನನ್ನಲ್ಲಿರುವ ದೈವೀಶಕ್ತಿಯಿಂದ. ಅದನ್ನು ಕೈಚಳಕ ಎಂದು ನನ್ನೆದುರು ಸಾಬೀತು ಮಾಡಿದರೆ, ಐದು ಲಕ್ಷ ರೂಪಾಯಿ ಬಹುಮಾನ ಕೊಡುತ್ತೇನೆ' ಎಂದು ಪಂಥವೊಡ್ಡಿದ. ಪ್ರೇಮಾನಂದ್ ಅವರು ಒಪ್ಪಿಗೆ ಕಳಿಸಿದರು. ಪ್ರವಾಸದ ಕೊನೆಯ ದಿನ ಫಲ್ಟನ್‌ಗೆ ಬರುತ್ತೇನೆ, ಕೈವಾಡವನ್ನು ಸಾರ್ವಜನಿಕರೆದುರು ಪ್ರದರ್ಶಿಸುತ್ತೇನೆ ಎಂದು ತಿಳಿಸಿದರು. ಅದಕ್ಕುತ್ತರವಾಗಿ ಆತನಿಂದ ಸುದ್ದಿಬಂತು – 'ತಪಸ್ಸಿಗಾಗಿ ನಾನೀಗ ಹಿಮಾಲಯಕ್ಕೆ ಹೊರಟಿದ್ದೇನೆ. ವಾಪಸ್ಸು ಬರುವುದು, ಪ್ರೇಮಾನಂದ್ ಅವರು ಫಲ್ಟನ್‌ಗೆ ಬರಲೊಪ್ಪಿದ ಮರುದಿನ. ಆದುದರಿಂದ ......'. ಪ್ರೇಮಾನಂದ್ ಅವರು ಹೇಳಿಕಳುಹಿಸಿದರು – 'ಚಿಂತಿಲ್ಲ, ಫಲ್ಟನ್‌ನಲ್ಲಿ ನಾನು ಇನ್ನೊಂದು ದಿನ ನಿಂತು ಕಾಯುತ್ತೇನೆ.' ನಿಗದಿತ ದಿನದಂದು ಅವರು ಫಲ್ಟನ್ ತಲುಪಿದರು. ಮರುದಿನ ಬಾಬಾ ತನ್ನ ತಪಸ್ಸು ಮುಗಿಸಿ ವಾಪಸ್ಸು ಬರಬೇಕಾಗಿತ್ತು. ಬಾಬಾನ ಪತ್ತೆಯಿಲ್ಲ. ಅನಂತರ ತಿಳಿಯಿತು, ಆತ ತನ್ನೆಲ್ಲಾ ಸಾಮಾನುಗಳೊಂದಿಗೆ ಊರು ತೊರೆದು ಎಲ್ಲಿಗೋ ಹೊರಟುಹೋಗಿದ್ದಾನೆ ಎಂದು.

ಸಾಮಾಜಿಕ ಮೌಢ್ಯ ಮತ್ತು ಕುರುಡು ನಂಬಿಕೆಗಳನ್ನು ಸಮಾಜದಿಂದ ಕಿತ್ತೆಸೆಯುವುದು ಸಾಧ್ಯವಾ ? ಸಮಾಜ ಎಂದರೆ ಪ್ರಜೆಗಳು. ಜನರು ಬದಲಾಗದೆ ಸಮಾಜ ಹೇಗೆ ಬದಲಾಗುವುದು ? ವೈಚಾರಿಕ ಪ್ರಜ್ಞೆ ಮತ್ತು ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡರೆ ಮಾತ್ರ ಜನರು ತಮ್ಮನ್ನು ತಾವು ತಿದ್ದಿಕೊಳ್ಳುವುದು ಸಾಧ್ಯ. ಹಾಗೆ ತಿದ್ದಿಕೊಂಡರೆ – ತಿದ್ದಿಕೊಂಡರೆ ಮಾತ್ರ – ಬದಲಾವಣೆಯನ್ನು ನಿರೀಕ್ಷಿಸಬಹುದು. ದೇವರ ಹೆಸರಿನಲ್ಲಿ ಮತ್ತು ಧಾರ್ಮಿಕ ನೆಲೆಯಲ್ಲಿ ಜನರು ಮೋಸಕ್ಕೊಳಗಾಗುವುದನ್ನು ತಪ್ಪಿಸಬಹುದು.

ಜನರು ತಾವೇ ಸ್ವತಃ ಬದಲಾಗಬೇಕೆಂಬ ಹಂಬಲ ಮತ್ತು ಅಗತ್ಯವಿದ್ದಾಗ ಮಾತ್ರ ಅವರನ್ನು ಬದಲಾಯಿಸುವುದು ಸಾಧ್ಯ – ಇದು ಪ್ರೇಮಾನಂದ್ ಅವರ ಅಭಿಪ್ರಾಯ ಮತ್ತು ತೀರ್ಪು. ವೈಚಾರಿಕತೆಯ ಮಟ್ಟದಲ್ಲಿ ಸಾಮಾಜಿಕ ಬದಲಾವಣೆ ತರಲು ಸುಮಾರು ಐದು ದಶಕಗಳಿಂದಲೂ ಪ್ರಯತ್ನಿಸುತ್ತಿರುವ ಈ ಹೋರಾಟಗಾರರು ತಮ್ಮ ಅಪಾರ ಅನುಭವದಿಂದ ಒಪ್ಪಿಕೊಂಡ ತತ್ವ.

ತಮ್ಮ ಪ್ರಯತ್ನಕ್ಕೆ ಯೋಗ್ಯ ಪ್ರತಿಫಲ ದೊರಕಿದೆಯಾ ? ಹೌದು ಎನ್ನುತ್ತಾರೆ, ಕೆಲ ನಿದರ್ಶನಗಳೊಂದಿಗೆ. ಮತ್ತು ಇಲ್ಲ ಎನ್ನುತ್ತಾರೆ, ಇನ್ನೂ ಕೆಲ ಉದಾಹರಣೆಗಳೊಂದಿಗೆ. ತಮ್ಮ ಕೊನೆಯ ದಿನಗಳಲ್ಲಿ ವೈಚಾರಿಕತೆಯ ಪ್ರಭೆಯನ್ನು ಬೆಳಗಿಸಿದ ಅವರ ತಾಯಿಯ ಹಾಗಿನವರದೊಂದು ಗುಂಪು. ತಮ್ಮ ಧಾರ್ಮಿಕ ನಂಬಿಕೆ ಹಾಗೂ ಆಚರಣೆಗಳನ್ನು ಗಾಢವಾಗಿ ತಬ್ಬಿಕೊಂಡು, ಅವುಗಳ ವಿರುದ್ಧ ಏನನ್ನೂ ಕೇಳಲಿಷ್ಟಪಡದ ಅವರ ಕುಟುಂಬದ ಕೆಲ ಸದಸ್ಯರಂಥವರದು ಇನ್ನೊಂದು ಗುಂಪು. ಗಣೇಶ ಹಾಲು ಕುಡಿದ ಘಟನೆಯನ್ನು ಉಲ್ಲೇಖಿಸಿ, ಪ್ರೇಮಾನಂದ್ ಅವರು ವಿಷಾದದಿಂದ ಹೇಳುತ್ತಾರೆ – 'ಮನುಷ್ಯರು ಕುಡಿದ ಹಾಲು, ಹಾಲಿನ ರೂಪದಲ್ಲೇ ದೇಹದಿಂದ ಹೊರಬರುವುದಿಲ್ಲ, ಗಣೇಶ 'ಕುಡಿದ' ಹಾಲು, ಹಾಲಾಗಿಯೇ ಹೊರಗೆ ಬರುತ್ತಿರುವುದನ್ನು ನೋಡಿದ ಮೇಲೂ 'ಇದೊಂದು ಪವಾಡ' ಎಂದು ಒಪ್ಪಿಕೊಳ್ಳುವ ವಿದ್ಯಾವಂತರಿದ್ದಾರಲ್ವಾ !'

ಹೀಗೆ ತಮ್ಮ ಜೀವಮಾನವಿಡೀ, ಸಾಮಾಜಿಕ ಅಜ್ಞಾನದ ಬಗ್ಗೆ ನಾಡಿನ ಮೂಲೆಮೂಲೆಗಳಲ್ಲಿ ತಿಳುವಳಿಕೆ ಮೂಡಿಸಿದ ಪ್ರೇಮಾನಂದ್ ಅವರೀಗ ಇನ್ನೊಂದು ಅರಿವನ್ನೂ ಶಾಂತವಾಗಿ ಒಪ್ಪಿಕೊಂಡಿದ್ದಾರೆ – ತಮ್ಮ ಅನಾರೋಗ್ಯದ ಸೂಕ್ಷ್ಮತೆಯನ್ನು. ಸುಮಾರು ಒಂದು ವರ್ಷದ ಹಿಂದೆ ಅವರು ಮಂಗಳೂರಿಗೆ ಬಂದಿದ್ದರು. ಊಟದ ನಂತರ ತಿಂದದ್ದೆಲ್ಲಾ ವಾಂತಿಯಾಗಿ ಹೊರಬಂದಾಗ, ಡಾಕ್ಟರರಲ್ಲಿ ಚೆಕಪ್‌ಗೆ ಹೋಗಬೇಕಾಯ್ತು. ಹೊಟ್ಟೆಯೊಳಗೊಂದು ಮಹಾಗಡ್ಡೆ! ಸುಮಾರು ಇಡೀ ಹೊಟ್ಟೆಯನ್ನೇ ವಶಪಡಿಸಿಕೊಂಡ ವಿಕಾರ ಮಾಂಸದ ಗುಡ್ಡೆ. ಮುಂದೆ, ಬೆಂಗಳೂರಿನ ಕ್ಯಾನ್ಸರ್ ಆಸ್ಪತ್ರೆಗೆ ದಾಖಲಾಗುವ ಮೊದಲು ಹಣ ಒಪ್ಪಿಸಬೇಕಲ್ವಾ ! ಸಮಾಜಸೇವೆಗೆ ಊರೂರು ಸುತ್ತುವ, ಯಾರ್ಯಾರೋ ವಂಚನೆಗೊಳಗಾದಾಗ ಕೋರ್ಟುಗಳಲ್ಲಿ ಕೇಸ್ ಹಾಕುವ ಪ್ರೇಮಾನಂದ್ ಅವರಲ್ಲೆಲ್ಲಿದೆ ಹಣ ? ಮಗನೊಬ್ಬ ಕೊಲೆಯಾಗಿ ತೀರಿಕೊಂಡಿದ್ದು, ಆತನ ಹೆಸರಲ್ಲಿದ್ದ ಮನೆಯನ್ನು ಮಾರಿ, ಕೈಗೆ ಬಂದ ಡೆಪಾಸಿಟ್ ಹಣವನ್ನೇ ಆಸ್ಪತ್ರೆಗೆ ಕೊಟ್ಟು, ಸರ್ಜರಿಗೆ ರೆಡಿಯಾದರು.



ಹೊಟ್ಟೆಯೊಳಗೆ ನಿಗೂಢವಾಗಿ ಬೆಳೆದ ಮಾಂಸದ ಮುದ್ದೆಯನ್ನು ಕೊಯ್ದು ಹೊರತೆಗೆಯಬೇಕು. ಹೊಟ್ಟೆಯೆಂಬುದು, ಆಹಾರದ ಪಚನಕ್ರಿಯೆಯಲ್ಲಿ ಒಂದು ಮಹತ್ವದ ಪಾತ್ರ ವಹಿಸುವ, ಮಾಂಸಖಂಡದಿಂದ ಮಾಡಲ್ಪಟ್ಟ, ಕೊಳವೆ ಬಾಯಿಯ ಚೀಲ. ಅನ್ನನಾಳದಿಂದ ಹೊಟ್ಟೆಯನ್ನು ಪ್ರವೇಶಿಸಿದ ಆಹಾರ, ಇಲ್ಲಿ ಹಲವು ತರಹದ ಎಂಜೈಮ್‌ಗಳೊಂದಿಗೆ ಮಿಶ್ರಣಗೊಳ್ಳುತ್ತದೆ. ಹೀಗೆ ಅರೆಜೀರ್ಣಗೊಂಡ ಆಹಾರ, ಮುಂದೆ, ಹೊಟ್ಟೆಯ ಕೆಳಭಾಗದ ಪುಟ್ಟ ಸ್ನಾಯುಕಿಂಡಿಯ ಮೂಲಕ ಹೊರಬಂದು, ಸಣ್ಣ ಕರುಳಿನ ಮುಂಭಾಗಕ್ಕೆ ಹರಿದುಬರುತ್ತದೆ. ಹೊಟ್ಟೆಯೊಳಗೆ ಹುಟ್ಟಿಕೊಂಡ ಗಡ್ಡೆ, ಬೆಳೆಯುತ್ತಾ ಬಂದಂತೆ, ಹೊಟ್ಟೆಯ ಖಾಲಿಸ್ಥಳ ಕುಗ್ಗಿ, ಪಚನಕ್ರಿಯೆಯಲ್ಲಿ ವ್ಯತ್ಯಾಸಗಳುಂಟಾಗುತ್ತವೆ. ಸರಿಯಾಗಿ ಜೀರ್ಣವಾಗದ ಆಹಾರ, ಬಾಯಿಯ ಮೂಲಕ ವಾಂತಿಯಾಗುತ್ತದೆ. ಪ್ರೇಮಾನಂದ್ ಅವರು ಆಸ್ಪತ್ರೆಗೆ ದಾಖಲಾದಾಗ ಆ ಗಡ್ಡೆ, ಹೊಟ್ಟೆಯ ಇಡೀ ಚೀಲವನ್ನೇ ಆಕ್ರಮಿಸಿಕೊಂಡಿರುವ ಸಾಧ್ಯತೆಯಿತ್ತು. ಆದುದರಿಂದ ಸರ್ಜರಿಯ ನಂತರ ಅವರು ಬದುಕುಳಿಯಲಾರರೆಂದೇ ಎಲ್ಲರ ನಿರೀಕ್ಷೆಯಾಗಿತ್ತು. ಪ್ರೇಮಾನಂದ್ ಅವರು ಇದೇ ತೀರ್ಮಾನವನ್ನು ಒಪ್ಪಿಕೊಂಡು, ಇನ್ನೂ ಮುಗಿಯದ ಕೋರ್ಟು ವ್ಯವಹಾರಗಳ ಬಗ್ಗೆ (ಮುಖ್ಯವಾಗಿ ದೇವಮಾನವರ ವಿರುದ್ಧ) ಅಗತ್ಯ ವ್ಯವಸ್ಥೆ ಮಾಡಿದ್ದರು.

ಆದರೆ ಎಲ್ಲರಿಗೂ ಅಚ್ಚರಿ ಹುಟ್ಟಿಸಿ, ಪ್ರೇಮಾನಂದ್ ಅವರು ಬದುಕುಳಿದರು. ಆದರೆ ಹೊಟ್ಟೆಯ ಮುಕ್ಕಾಲುಪಾಲನ್ನು ಕೊಯ್ದು ತೆಗೆಯಲಾಗಿತ್ತು. ಸ್ವಲ್ಪಾಂಶ ಹೊಟ್ಟೆ-ಖಾಲಿಚೀಲ ಇನ್ನೂ ಉಳಿದುಕೊಂಡಿದೆ. ಈಗ ದಿನಕ್ಕೆ ಮೂರು ಸರ್ತಿಯ ಬದಲು ಹತ್ತಿಪ್ಪತ್ತು ಸಲ ಊಟ ಮಾಡಬೇಕು. ಪ್ರತೀ ಸರ್ತಿ ಚೂರು ಚೂರು ಹೊಟ್ಟೆ ಸೇರುತ್ತದೆ. ಹೊಟ್ಟೆಯೊಂದಿಗೆ, ದೇಹದ ತೂಕವೂ ಇಳಿದಿದೆ. ನಡಿಗೆ ಮತ್ತು ಚಟುವಟಿಕೆ ನಿಧಾನವಾಗಿದೆ. ಆದರೆ ಹೋರಾಟದ ಮನೋಭಾವ ಇನ್ನಷ್ಟು ಗಟ್ಟಿಯಾಗಿದೆ. 'ಸಾವಿಗೇನೂ ಅಂಜಿಕೆಯಿಲ್ಲ ನನಗೆ. ಸಂತೋಷದಿಂದ ಸಾಯುತ್ತೇನೆ. ನನ್ನ ನಂತರ ನರೇಂದ್ರ (ನರೇಂದ್ರ ನಾಯಕ್, ದ. ಕ. ಜಿಲ್ಲಾ ವಿಚಾರವಾದಿ ಸಂಘ) ಈ ಹೋರಾಟ ಮುಂದುವರಿಸಿಕೊಂಡು ಹೋಗುತ್ತಾರೆ. ಐ ಎಮ್ ಹ್ಯಾಪ್ಪಿ' ಎನ್ನುತ್ತಾರೆ. ಮುಗುಳ್ನಗುತ್ತಾರೆ. ಅದು ತೃಪ್ತಿಯ ಮುಗುಳ್ನಗು. ಸಮಾಜದಲ್ಲಿ ನೈತಿಕ ಪ್ರಜ್ಞೆಗೋಸ್ಕರ ಹೋರಾಡಿದ ತೃಪ್ತಿ.

ಶಾಂತಾರಾಮ ಸೋಮಯಾಜಿ
'ಪದ್ಮ', I ಮೈನ್, II ಕ್ರಾಸ್, ಹಯಗ್ರೀವ ನಗರ
ಉಡುಪಿ - ೫೭೬ ೧೦೨

(ಭಾ)ರತದಲ್ಲಿ ಜರುಗಿದ ಇತ್ತೀಚಿನ ಪ್ರಕರಣವೊಂದನ್ನು ಅವಲೋಕಿಸೋಣ.

ಹನ್ನೊಂದು ದಿವಸದ ಪುಟ್ಟ ಮಗು ಆಸ್ಪತ್ರೆಯಲ್ಲಿ ಮಲಗಿ ಪಿಳಿ ಪಿಳಿ ಕಣ್ಣುಬಿಡುತ್ತಿದೆ. ಹಾಲೂಡಿಸಲು ತಾಯಿ ಇಲ್ಲ. ಹಾಗಾದರೆ ಆ ಮಗುವಿಗೆ ತಾಯಿ ಇಲ್ಲವೇ ? ಇದ್ದಾರೆ : ಒಬ್ಬರಲ್ಲ, ಇಬ್ಬರು ತಾಯಂದಿರು. ಒಬ್ಬಳು ಜನ್ಮಕ್ಕೆ ಕಾರಣವಾದ ತಾಯಿ, ಇನ್ನೊಬ್ಬಳು ಜನ್ಮಕೊಟ್ಟ ತಾಯಿ. ಆದರೆ ಈಗ ಈ ಇಬ್ಬರು ತಾಯಂದಿರು ಬೇರೆ ಬೇರೆ ಕಾರಣಕ್ಕೆ ಮಗುವಿನಿಂದ ದೂರವಾಗಿದ್ದಾರೆ. ದೂರದ ಜಪಾನಿನಿಂದ ಅಜ್ಜಿ (ತಂದೆಯ ತಾಯಿ) ಜೈಪುರದ ಆಸ್ಪತ್ರೆಯಲ್ಲಿರುವ ಮಗುವನ್ನು ನೋಡಿಕೊಳ್ಳಲು ಬಂದಿದ್ದಾಳೆ. ಹೌದು, ಈ ಮಗುವೇ ಮಂಜಿ ಎಂಬ ಹೆಸರಿನ ಜಪಾನಿನ ತಂದೆ ತಾಯಂದಿರ, ಭಾರತದಲ್ಲಿ ಜನಿಸಿದ ಮಗು.



೪೫ ವರ್ಷದ ಡಾ॥ ಇಕುಫುಮಿ ಯಮಾದ ಜಪಾನಿನ ಮೂಳೆರೋಗ ತಜ್ಞರು. ಇವರ ಪತ್ನಿ ಯುಕಿಯಮಾದ. ಮದುವೆಯಾಗಿ ಬಹಳ ವರ್ಷಗಳಾದರೂ ಮಕ್ಕಳಾಗದ ಕಾರಣ ಕೃತಕ ಗರ್ಭಧಾರಣೆಯ ರೀತ್ಯಾ ಮಗು ಪಡೆಯಲು ಭಾರತಕ್ಕೆ ಬಂದಾಗ ಗುಜರಾತ್‌ನ ಆನಂದ್‌ನಲ್ಲಿರುವ ಬ್ರಿಜೇಶ್‌ಭಾಯಿ ಮೆಹ್ತಾರ ಪತ್ನಿ ಪ್ರತಿಬೆನ್ ಮೆಹ್ತಾ ಮಗುವನ್ನು

# ವೈದ್ಯಕೀಯ ತಂತ್ರಜ್ಞಾನ, ಕಾನೂನು ಮತ್ತು ಮಾನವೀಯತೆ

ಡಾ॥ ಎಚ್. ಎಸ್. ಮೋಹನ್

ತಮ್ಮ ಗರ್ಭಕೋಶದಲ್ಲಿಟ್ಟು ಬೆಳೆಸಲು ಒಪ್ಪಿದರು. ಯುಕಿಯವರ ಅಂಡ ಮತ್ತು ಡಾ॥ ಇಕುಫುಮಿಯವರ ವೀರ್ಯದ ಸಂಯೋಜನೆ ಜಪಾನಿನ ಪ್ರಯೋಗಾಲಯದಲ್ಲಿ ಸಂಪೂರ್ಣಗೊಂಡು, ನಂತರ ಅದನ್ನು ಅಹಮದಾಬಾದ್‌ಗೆ ತರಲಾಯಿತು. ಅಲ್ಲಿನ ಡಾ॥ ನಯನಾ ಬೆನ್ ಪಟೇಲ್‌ರ ಅಕಾಸ್ಯಾ ಐವಿಎಫ್ ಕೇಂದ್ರದಲ್ಲಿ ಮುಂದಿನ ಅಗತ್ಯ ವಿಧಾನಗಳನ್ನು ಪೂರೈಸಲಾಯಿತು. ಕಳೆದ ನವೆಂಬರ್ ೨೨ರಂದು (೨೦೦೭) ಈ ಬಗೆಗೆ ಒಪ್ಪಂದ ಮಾಡಿಕೊಂಡು ದಂಪತಿಗಳು ಜಪಾನಿಗೆ ತೆರಳಿದರು. ಜುಲೈ ೨೫ರಂದು (೨೦೦೮) ಹೆಣ್ಣುಮಗು ಜನಿಸಿತು. ಈ ಮಧ್ಯೆ ಜಪಾನಿನ ದಂಪತಿಗಳು ಒಟ್ಟಾಗಿರಲಿಲ್ಲ. ಯಾವುದೋ ಕಾರಣಕ್ಕೆ ವಿಚ್ಛೇದನ ತೆಗೆದುಕೊಂಡಿದ್ದರು. ತನ್ನ ಗರ್ಭದಲ್ಲಿ ಮಗು ಹೊತ್ತು ಹೆತ್ತಿದ್ದ ಭಾರತದ ತಾಯಿ ಪ್ರತಿಬೆನ್, ಮೊದಲಿನ ಒಪ್ಪಂದದಂತೆ ಆಸ್ಪತ್ರೆಯಲ್ಲಿ ಮಗು ಬಿಟ್ಟು ತೆರಳಿದಳು. ವಿಚ್ಛೇದನ ತೆಗೆದುಕೊಂಡದ್ದರಿಂದ ಜನನಕ್ಕೆ ಕಾರಣೀಭೂತ ತಾಯಿ ಯುಕಿಯಮಾದ ಮಗುವನ್ನು ತೆಗೆದುಕೊಂಡು ಹೋಗಲು ಬರಲಿಲ್ಲ. ತಂದೆ ಡಾ॥ ಇಕುಫುಮಿ ಯಮಾದ ಮಗುವನ್ನು ಜಪಾನಿಗೆ ಕರೆದೊಯ್ಯಲು ಉತ್ಸುಕರಾಗಿದ್ದರೂ, ನಮ್ಮ ದೇಶದ ಕಾನೂನು ಅವರನ್ನು ಕಟ್ಟಿಹಾಕಿದೆ. ಇಲ್ಲಿ ಮಗು ಹುಟ್ಟಿದ್ದರಿಂದ ಅದು ಇಲ್ಲಿನ ಪ್ರಜೆಯಾಯಿತು. ತೆಗೆದುಕೊಂಡು ಹೋಗಲು ತಂದೆ ತಾಯಿ ಇಬ್ಬರೂ ಬಂದು ಅದನ್ನು ದತ್ತು ಪಡೆದುಕೊಳ್ಳಬೇಕು ಎನ್ನುತ್ತದೆ ಕಾನೂನು.

### ಸರಿಯಾದ ಕಾನೂನಿಲ್ಲ

ಆದರೆ ನಮ್ಮ ದೇಶದಲ್ಲಿ ಬಾಡಿಗೆ ತಾಯಂದಿರ ಬಗೆಗೆ ಸರಿಯಾದ ಕಾನೂನಿಲ್ಲ. ಈ ಮೇಲಿನ ಕಾನೂನು ೧೨೦ ವರ್ಷಗಳ ಹಿಂದಿನ ಮಗು ದತ್ತು ಪಡೆಯುವ ಬಗೆಗಿನ ತುಂಬ ಹಳೆಯ ಕಾನೂನೇ ಹೊರತು ಇತ್ತೀಚಿನದಲ್ಲ. ಕಳೆದ ೧೦-೧೫ ವರ್ಷಗಳಲ್ಲಿ ಹೊರ ದೇಶದ ಹಲವಾರು ಮಕ್ಕಳಿಗೆ ನಮ್ಮ ದೇಶದ ಮಹಿಳೆಯರು ತಮ್ಮ 'ಗರ್ಭ'ವನ್ನು 'ಬಾಡಿಗೆ'ಗೆ ಕೊಟ್ಟಿದ್ದಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮಲ್ಲಿನ ಬಡತನ. ಕೆಲವು ಸಾವಿರ ಅಥವಾ ಲಕ್ಷ ರೂಪಾಯಿಗಳಿಗೆ ಮಗು ಹೆರುವಂತಹ ಗಂಭೀರ ಮತ್ತು ಅಪಾಯಕರ ಕೆಲಸವನ್ನು ನಮ್ಮ ಮಹಿಳೆಯರು ಮಾಡುತ್ತಿದ್ದಾರೆ. ಈ ಮೇಲಿನ ಪ್ರಕರಣಕ್ಕಿಂತ ಮೊದಲೇ ಈ ಬಗೆಗೆ ಸರಿಯಾದ ಕಾನೂನು ರಚಿಸಬೇಕೆಂದು ಹಲವು ಮಹಿಳಾ ಸಂಘಟನೆಗಳು ಸರ್ಕಾರಕ್ಕೆ ಒತ್ತಾಯ ತಂದಿದ್ದವು. ಈ ಬಗೆಗಿನ ಸ್ಪಷ್ಟ ಕಾನೂನಿನ ಅಗತ್ಯವನ್ನು ಒಪ್ಪಿಕೊಂಡ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಖಾತೆಯ ಕೇಂದ್ರ ಮಂತ್ರಿ ಶ್ರೀಮತಿ ರೇಣುಕಾ ಚೌಧುರಿ ಸದ್ಯದಲ್ಲಿಯೇ ಅಗತ್ಯ ಕಾನೂನು ರೂಪಿಸಲಾಗುವುದು ಎಂಬ ಭರವಸೆಯನ್ನು ಜೂನ್ (೨೦೦೮) ಕೊನೆಯ ವಾರದಲ್ಲಿ ಕೊಟ್ಟಿದ್ದರು. ಇದು ಯಾವಾಗ ಕಾರ್ಯಗತವಾಗುತ್ತದೆ ಎಂಬುದನ್ನು ಕಾದುನೋಡಬೇಕಷ್ಟೆ.



ಈಗ ಆ ಮಗು ಮಂಜಿ ಜೈಪುರದ ಡಾ॥ ಸಂಜಯ ಆರ್ಯ ಎಂಬುವವರ ನರ್ಸಿಂಗ್ ಹೋಂನಲ್ಲಿದೆ. ಮಗುವಿನ ಅಜ್ಜಿ ೭೦ ವರ್ಷದ ಶ್ರೀಮತಿ ಯಮಾದರಿಗೆ ಆ ಮಗುವನ್ನು ನೋಡಿಕೊಳ್ಳಲು ಬಹಳಷ್ಟು ಕಷ್ಟವಾಗುತ್ತಿದೆ. ಅಲ್ಲಿನ ದಾದಿಯರು ಮತ್ತು ಆಸ್ಪತ್ರೆ ಸಿಬ್ಬಂದಿಗಳು ಮಗುವಿಗೆ ಹಾಲು ಕುಡಿಸಿ, ಬಟ್ಟೆ ಬದಲಿಸಿ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ತಮ್ಮ ದೇಶಕ್ಕೆ ಮಗುವನ್ನು ಕೊಂಡೊಯ್ಯಲು ಸಾಧ್ಯವಿಲ್ಲ. ಅದಕ್ಕೆ ಬಹಳಷ್ಟು ಕಾನೂನಿನ ತೊಡಕುಗಳಿವೆಯೆಂದು ತಿಳಿದು ಅಜ್ಜಿ ಯಮಾದ ಬಹಳ ದುಃಖಿತರಾಗಿದ್ದಾರೆ. ತಮ್ಮ ವಿಚ್ಛೇದಿತ ಪತ್ನಿ ಯುಕಿಯಮಾದ ಮಗುವನ್ನು ಕೊಂಡೊಯ್ಯಲಾದರೂ ಬಂದರೆ ಸಾಕು ಎಂದು ಅವರ ಮನವೊಲಿಸಲು ಡಾ॥ ಯಮಾದ ಪ್ರಯತ್ನಿಸಿದರೂ ಅದು ಸಫಲವಾಗಲಿಲ್ಲ. ಹಾಗಾಗಿ ಸದ್ಯದಲ್ಲಿಯೇ ಭಾರತದ ನ್ಯಾಯಾಲಯದಲ್ಲಿ ಈ ಬಗೆಗೆ ಪ್ರಯತ್ನಿಸಲಿದ್ದಾರೆ. ಪರಿಸ್ಥಿತಿಯ ಲಾಭ ಪಡೆದುಕೊಂಡ ಇಲ್ಲಿನ ಅಧಿಕಾರಿಗಳು ಅವರಿಗೆ ಮಗುವಿನ 'ಜನನ ದಾಖಲೆ' ಕೊಡಲು ತಯಾರಿರಲಿಲ್ಲ. ಈ ಲೇಖನ ತಯಾರಾಗುವ ಹೊತ್ತಿಗೆ ಅದ್ಹೇಗೋ ಅದನ್ನು ಅವರು ದೊರಕಿಸಿಕೊಂಡಿದ್ದಾರೆ.

### ತುಂಬಾ ಅಗ್ಗ

ಮಗುವನ್ನು ಹೊತ್ತು, ಹೆರಲು 'ಬಾಡಿಗೆ ತಾಯಿ'ಗೆ ೩,೨೫,೦೦೦ ರೂ.ಗಳ ಮನೆ ಹಾಗೂ ೫೦,೦೦೦ ರೂ.ಗಳು ನಗದನ್ನು ಡಾ॥ ಯಮಾದ ಕೊಟ್ಟಿದ್ದಾರೆ. ಜೊತೆಗೆ ಗರ್ಭಿಣಿಯಾದಾಗ ಖರ್ಚಿಗೆಂದು ತಿಂಗಳಿಗೆ ೫೦೦೦ ರೂ.ಗಳನ್ನು ಕೊಟ್ಟಿದ್ದಾರೆ. ಇಷ್ಟಾದರೂ ಇದು ತುಂಬಾ ಅಗ್ಗ ಎಂದು ಅಂತರರಾಷ್ಟ್ರೀಯ ಮಟ್ಟದಲ್ಲಿ ಗಣಿಸಲಾಗಿದೆ.

### ಜೀವದ ಬೆಲೆ

* 'ಬಾಡಿಗೆ ತಾಯಿ'ಯ ಮೂಲಕ ಮಗುವನ್ನು ಪಡೆಯಲು, ತಾಯಿಯ ಎಲ್ಲಾ ವೈದ್ಯಕೀಯ ವೆಚ್ಚವನ್ನು ಸೇರಿ ಭಾರತದಲ್ಲಿ ಸುಮಾರು ೫ ಲಕ್ಷ ರೂ.ಗಳು ಖರ್ಚಾಗುತ್ತವೆ.
* ಅಮೆರಿಕಾದಲ್ಲಿ ಇದರ ಅಂದಾಜು ವೆಚ್ಚ ೭೦,೦೦೦ ಡಾಲರುಗಳು.
* ಭಾರತದಲ್ಲಿ ಪ್ರತಿವರ್ಷ ೧೫೦-೨೦೦ ಮಕ್ಕಳು ಈ ರೀತಿ ಜನಿಸುತ್ತಾರೆ ಎನ್ನಲಾಗಿದೆ.

* ಇದೊಂದು ದೊಡ್ಡ ವ್ಯಾಪಾರವಾಗಿ ಪರಿಣಮಿಸಿದ್ದು, ಈ ಮಾರುಕಟ್ಟೆ ಪ್ರತಿವರ್ಷ ೨೦ ಬಿಲಿಯನ್ ರೂ.ಗಳಷ್ಟು ಮೌಲ್ಯವುಳ್ಳದ್ದು ಎಂದು ಅಂದಾಜಿಸಲಾಗಿದೆ.
* 'ಬಾಡಿಗೆ ತಾಯಂದಿ'ರ ಈ ವ್ಯಾಪಾರೀಕರಣವನ್ನು ಹಲವಾರು ಯೂರೋಪಿಯನ್ ದೇಶಗಳು ನಿಷೇಧಿಸಿವೆ. ಅಮೆರಿಕಾದಲ್ಲಿ ಇದನ್ನು ತುಂಬ ಬಿಗಿ ಕಾನೂನುಗಳ ಕಟ್ಟುಪಾಡಿನ ಮಧ್ಯೆ ಕೈಗೊಳ್ಳಲಾಗುತ್ತಿದೆ. ಭಾರತದಲ್ಲಿ ೨೦೦೨ರ ನಂತರ ಕಾನೂನನ್ನು ಸರಳಗೊಳಿಸಿ ಹೊರಗಿನ ದೇಶದವರಿಗೆ ಮುಕ್ತ ಅವಕಾಶ ಕಲ್ಪಿಸಲಾಗಿದೆ.
* 'ಬಾಡಿಗೆ ತಾಯಿ'ಯ ಕ್ರಮದಲ್ಲಿ ಸಫಲತೆಗಿಂತ ವೈಫಲ್ಯವೇ ಹಲವಾರು ಬಾರಿ ಜಾಸ್ತಿ (ಭಾರತದಲ್ಲಿ).
* ಮಗುವಿನ ಬಗೆಗಿನ ಯಾವ ಹಕ್ಕುಗಳೂ ಭಾರತೀಯ 'ಬಾಡಿಗೆ ತಾಯಿ'ಗೆ ಇಲ್ಲ. ಆದರೆ ಇಂಗ್ಲೆಂಡಿನಲ್ಲಿ ಅಂಡವನ್ನು ದಾನಮಾಡಿದ ತಾಯಿ ಮಗುವಿನ ಮೊದಲ ೨ ವರ್ಷ ಮಗು ತನ್ನದು ಎಂದು ಕೇಳಬಹುದು ಎನ್ನುತ್ತದೆ ಅಲ್ಲಿನ ಕಾನೂನು.
* ಭಾರತದಲ್ಲಿ ಮದುವೆಯಾಗದ ಒಂಟಿ ಮಹಿಳೆ ಕೂಡ ಬೇರೆಯವರ ಮಗುವನ್ನು ಹೆರಲು ಗರ್ಭಕೋಶ ಬಾಡಿಗೆ ಕೊಡಬಹುದು. ಆದರೆ ಕೃತಕ ಗರ್ಭಧಾರಣೆ ವಿಧಾನದಿಂದ ತನಗೇ ಮಗು ಬೇಕೆಂದು ಕೇಳಿ ತಾಯಿಯಾಗುವಂತಿಲ್ಲ.

**'ಹೊರಗುತ್ತಿಗೆ'ಯಲ್ಲಿ ಭಾರತ ಮುಂದು**

ವಿವಿಧ ಕೆಲಸಗಳನ್ನು 'ಹೊರಗುತ್ತಿಗೆ' ಪಡೆಯುವಲ್ಲಿ ಜಗತ್ತಿನ ಹೆಚ್ಚಿನ ದೇಶಗಳಿಗಿಂತ ಭಾರತ ಮುಂದಿದೆ. ಅಂತೆಯೇ ವಿದೇಶೀಯರ ಮಕ್ಕಳನ್ನು ತಮ್ಮ ಗರ್ಭಕೋಶದಲ್ಲಿ ೯ ತಿಂಗಳು ಪಾಲಿಸಿ ನಂತರ ಹೆತ್ತು ಅವರಿಗೆ ವಾಪಸ್ ಕೊಡುವ 'ಬಾಡಿಗೆ ತಾಯಿ' ಎಂಬ ವೈದ್ಯಕೀಯ ಬೆಳವಣಿಗೆಯ ವಿಭಾಗದಲ್ಲಿ ಕೂಡ ಭಾರತ ಮುಂಚೂಣಿಯಲ್ಲಿದೆ ಎಂಬುದು ವಿಪರ್ಯಾಸ! ಭಾರತದ ಬಡ ಮತ್ತು ಮಧ್ಯಮ ವರ್ಗದ ಹಲವಾರು ಮಧ್ಯ ವಯಸ್ಸಿನ ಮಹಿಳೆಯರು ಇದನ್ನು ಒಪ್ಪಲು ಕಾರಣ – ಅವರ ಬಡತನ ಹಾಗೂ ಹಣದ ಅಗತ್ಯತೆ. ಮಗುವನ್ನು ಪಡೆಯುವ ವಿಧಾನಗಳಲ್ಲಿ ಇತ್ತೀಚೆಗೆ ಹಲವಾರು ತಾಂತ್ರಿಕ ಪ್ರಗತಿಗಳೂ ಜರುಗಿವೆ. ಅದರಲ್ಲಿ ಪ್ರಮುಖವಾದುದು ಐವಿಎಫ್ ಎಂದರೆ 'ಪ್ರನಾಳಶಿಶು' ವಿಧಾನ. ಅಂದರೆ ಇದರಲ್ಲಿ ತಂದೆಯ ವೀರ್ಯವನ್ನು ತಾಯಿಯ ಅಂಡಾಶಯದೊಂದಿಗೆ ಪ್ರಯೋಗಾಲಯದಲ್ಲಿ ಸಂಯೋಗ ನಡೆಸಿ ನಂತರ ಮಗುವನ್ನು ಹೆರಲು ತಾಯಿಯ ಗರ್ಭಕೋಶ ಆರೋಗ್ಯವಾಗಿದ್ದರೆ, ತಾಯಿಯ ಗರ್ಭಕೋಶದಲ್ಲಿ ಅಂಕುರಿಸುತ್ತಾರೆ. ತಾಯಿಯ ಗರ್ಭಕೋಶ ಮಗುವನ್ನು ಹೊತ್ತು ಹೆರಲು ಆರೋಗ್ಯವಾಗಿಲ್ಲದಿದ್ದರೆ, ಈ ಕ್ರಿಯೆ ಮಾಡಲು ಒಪ್ಪಿದ ಇನ್ನೊಬ್ಬ ಸ್ತ್ರೀಯ (ಬಾಡಿಗೆ ತಾಯಿ) ಗರ್ಭಕೋಶದಲ್ಲಿ ಅಂಕುರಿಸುತ್ತಾರೆ. ಈಕೆ ಒಂಬತ್ತು ತಿಂಗಳು ಗರ್ಭಕೋಶದಲ್ಲಿ ಮಗುವನ್ನು ಬೆಳೆಸಿ ನಂತರ ಹೆತ್ತು ಪಾಲಕರಿಗೆ ಒಪ್ಪಿಸಬೇಕು.

**ನೈತಿಕವಾಗಿ ಭಿನ್ನತೆ**

ನೈತಿಕವಾಗಿ ಇಲ್ಲಿ ಹಲವಾರು ಸಮಸ್ಯೆಗಳಿವೆ. ಬೇರೆ ಬೇರೆ ಸಮಾಜಗಳಲ್ಲಿ ಇದನ್ನು ಬೇರೆ ಬೇರೆ ರೀತಿಯಲ್ಲಿ ಗ್ರಹಿಸಲಾಗುತ್ತಿದೆ. ಸ್ವೀಡನ್, ಸ್ಪೇನ್, ಫ್ರಾನ್ಸ್ ಮತ್ತು ಜರ್ಮನಿ ದೇಶಗಳು ಅಲ್ಲಿನ ಜನಾಭಿಪ್ರಾಯದ ರೀತ್ಯಾ ಈ ವಿಧಾನವನ್ನೇ ನಿಷೇಧಿಸಿವೆ. ಇನ್ನು ಹಲವು ದೇಶಗಳಲ್ಲಿ ಕಠಿಣ ಕಾನೂನುಗಳಿವೆ. ಇದು ವ್ಯಾಪಾರೀಕರಣವಾಗುತ್ತಿದೆ ಎಂದು ಗ್ರಹಿಸಿ ಕೆನಡಾದಲ್ಲಿ ಬಾಡಿಗೆ ತಾಯಂದಿರಿಗೆ ಯಾವುದೇ ರೀತಿಯಲ್ಲಿ ಹಣ ಕೊಡುವುದನ್ನು ನಿಷೇಧಿಸಲಾಗಿದೆ. ಬ್ರಿಟನ್ನಿನಲ್ಲಿ ಆಕೆಗೆ ತಗಲುವ ಖರ್ಚನ್ನು ಮಾತ್ರ ಭರಿಸಬಹುದು. ಅಭಿವೃದ್ಧಿಶೀಲ ರಾಷ್ಟ್ರಗಳಾದ ದಕ್ಷಿಣ ಆಫ್ರಿಕಾ ಮತ್ತು ಅರ್ಜಂಟೈನಾಗಳಲ್ಲಿ ಪ್ರತಿಯೊಂದು ವೈಯಕ್ತಿಕ ಕೇಸಿನಲ್ಲೂ ಸರಿಯಾದ ಕಾನೂನನ್ನು ಪಾಲಿಸುವಂತೆ ಕಠಿಣ ಕ್ರಮಗಳನ್ನು ರೂಪಿಸಿ, ಅದಕ್ಕಾಗಿಯೇ ಪ್ರತ್ಯೇಕ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

ಇಲ್ಲಿ ನೈತಿಕ ಆಯಾಮವನ್ನು ಹೊರತುಪಡಿಸಿಯೂ ಬೇರೆಯ ಸಮಸ್ಯೆಗಳಿವೆ. ಬಾಡಿಗೆ ತಾಯಿಯಾಗುವ ಮಹಿಳೆಯ ದೈಹಿಕ ಮತ್ತು ಮಾನಸಿಕ ಆರೋಗ್ಯವು ತುಂಬ ಮುಖ್ಯ. ವೈದ್ಯಕೀಯ ವ್ಯವಸ್ಥೆ ತೀರಾ ಮುಂದುವರಿದ ದೇಶಗಳಷ್ಟು ಆಧುನಿಕಗೊಂಡಿರದ ನಮ್ಮ ದೇಶದಲ್ಲಿ ಅದರಲ್ಲಿಯೂ ಸಣ್ಣ ಸಣ್ಣ ಊರು, ಆಸ್ಪತ್ರೆಗಳಲ್ಲಿ ತನ್ನದಲ್ಲದ ಮಗುವಿಗೆ ತಾಯಿಯಾಗುವ ಮಹಿಳೆ ಹಲವಾರು ದೈಹಿಕ ಕಾಯಿಲೆ ಅಪಾಯಗಳಿಗೆ ಒಳಗಾಗುವ ಸಾಧ್ಯತೆ ಇದ್ದೇ ಇದೆ. ಅದರಲ್ಲಿಯೂ ಸಮಾಜದ ಕೆಳಸ್ತರದಲ್ಲಿರುವ ಸ್ತ್ರೀಯರೇ ಈ ಕೆಲಸವನ್ನು ಒಪ್ಪಿಕೊಳ್ಳುವುದರಿಂದ ಅವರಲ್ಲಿ ಆರೋಗ್ಯದ ಸಮಸ್ಯೆ ಬೇರೆಯವರಿಗಿಂತ ಜಾಸ್ತಿ. ಜೊತೆಗೆ ತಾಯಿಯಾಗುವವಳ ಮನಃಸ್ಥಿತಿಯೂ ಮುಖ್ಯ. ಇತರ ದೈಹಿಕ ಕೆಲಸಗಳಂತೆ ಮಗುವನ್ನು ಗರ್ಭಕೋಶದಲ್ಲಿ ಬೆಳೆಸಿ ಹೆರುವುದು ಅಷ್ಟು ಸುಲಭವಾದದ್ದಲ್ಲ. ಆ ಹಂತದಲ್ಲಿ ದೈಹಿಕವಾಗಿ ಗರ್ಭಿಣಿ ಸ್ತ್ರೀಗೆ ವಿಶೇಷವಾಗಿರುವ ಹಲವಾರು ಹಾರ್ಮೋನುಗಳು ಸ್ರವಿಸಲ್ಪಡುತ್ತವೆ. ಅವು ಹಲವು ರೀತಿಯ ಮಾನಸಿಕ ಬದಲಾವಣೆಗಳಿಗೂ ಕಾರಣವಾಗುತ್ತವೆ. ಒಂಬತ್ತು ತಿಂಗಳಷ್ಟು ದೀರ್ಘಕಾಲ ತನ್ನ ಒಡಲಿನಲ್ಲಿ ಮಗುವನ್ನು ಬೆಳೆಸುವುದರಿಂದ, ಮಗುವಿನ ಬಗ್ಗೆ ಒಂದು ರೀತಿಯ 'ವ್ಯಾಮೋಹ' ಬೆಳೆದು, ಹಲವು ಬಾರಿ ಈ ಬಾಡಿಗೆ ತಾಯಂದಿರು ಹೆರಿಗೆಯ ನಂತರ ಮಗುವನ್ನು ಕೂಡಲೇ ಕೊಡಲು ಒಪ್ಪುವುದಿಲ್ಲ. ಇದನ್ನು ಗಮನದಲ್ಲಿಟ್ಟುಕೊಂಡೇ ಇಂಗ್ಲೆಂಡಿನಲ್ಲಿ ಹಾಗೂ ಅಮೆರಿಕಾದ ಕೆಲವು ರಾಷ್ಟ್ರಗಳು ಮಗು ಹೆತ್ತ ನಂತರ ಕೆಲವು ಸಮಯ ತಮ್ಮಲ್ಲೇ ಇಟ್ಟುಕೊಳ್ಳಬಹುದು ಎಂಬ ಕಾನೂನನ್ನು ರೂಪಿಸಿವೆ.

**ವೈದ್ಯಕೀಯ ಪ್ರವಾಸೋದ್ಯಮದಲ್ಲಿ ಹೆಚ್ಚಳ**

ಭಾರತದಲ್ಲಿ ಸರ್ಕಾರ ಅಥವಾ ವ್ಯವಸ್ಥೆ ಈ ವಿಚಾರದಲ್ಲಿ ಇದುವರೆಗೆ ಯಾವುದೇ ರೀತಿಯ ಕಾಳಜಿ ತೋರಿಸಿಲ್ಲ. ಅಲ್ಲದೆ ಈ ಬಗೆಗೆ ಸ್ಪಷ್ಟ ಕಾನೂನೂ ಇಲ್ಲ. ಭಾರತೀಯ ವೈದ್ಯಕೀಯ ಸಂಶೋಧನಾ ಸಂಸ್ಥೆ ರೂಪಿಸಿರುವ ಕೆಲವು ನಿಯಮಾವಳಿಗಳಿವೆ. ಆದರೆ ಅವುಗಳನ್ನು ಪಾಲಿಸಲೇಬೇಕೆಂಬ ಕಠಿಣ ನಿಲುವು ಅಥವಾ ಕಾನೂನು ಇಲ್ಲದಿರುವುದರಿಂದ ಈ ಉದ್ಯೋಗದಲ್ಲಿ ತೊಡಗಿರುವ ವೈದ್ಯರು, ಆಸ್ಪತ್ರೆಗಳಾಗಲಿ, ತಾಯಂದಿರನ್ನು ಬಾಡಿಗೆಗೆ ಪಡೆಯುತ್ತಿರುವ ಪಾಲಕರಾಗಲಿ – ಯಾರೂ ಪಾಲಿಸುತ್ತಲೂ ಇಲ್ಲ. ತಮ್ಮ ಆರೋಗ್ಯಕ್ಕೆ ತೀವ್ರ ರೀತಿಯಲ್ಲಿ ಧಕ್ಕೆಯಾಗುತ್ತಿದೆ ಎಂದು ಗೊತ್ತಿದ್ದರೂ ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳಲು ಬಡ ಮತ್ತು ಮಧ್ಯಮವರ್ಗದ ಮಹಿಳೆಯರು ಈ ವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತಿರುವುದು ಈ ಹೊತ್ತಿನ ಸಾಂದರ್ಭಿಕ ಅನಿವಾರ್ಯತೆಯನ್ನು ಸೂಚಿಸುತ್ತದೆ. ನಿಯೋಗ ಪದ್ಧತಿಯಂತೆ ಜನ್ಮ ತಳೆದ ಪಾಂಡವರದ್ದು ಇದೇ ರೀತಿಯ ಸಮಸ್ಯೆ ಎನ್ನಬಹುದು. ಹಾಗಾಗಿ ಹೆಚ್ಚಿನ ಭಾರತೀಯರಿಗೆ ಈ ಪದ್ಧತಿ ಒಪ್ಪಲು ಬಹಳ ಮಡಿವಂತಿಕೆಯೇನಿಲ್ಲ. ಪರಿಣಾಮ ಎಂದರೆ 'ವೈದ್ಯಕೀಯ ಪ್ರವಾಸೋದ್ಯಮ'ದ ಪ್ರಮಾಣ ಹೆಚ್ಚುತ್ತಿದ್ದು, ಇತರೆ ಹಲವಾರು ಕಾಯಿಲೆಗಳಿಗೆ ಹೊರದೇಶಗಳಿಂದ ಇಲ್ಲಿಗೆ ಚಿಕಿತ್ಸೆ, ಆಪರೇಷನ್‌ಗೆ ಬರುವಂತೆ ಇಂದು ಮಕ್ಕಳಿಲ್ಲದ ತಂದೆ-ತಾಯಂದಿರೂ ಬಹಳಷ್ಟು ಪ್ರಮಾಣದಲ್ಲಿ ಭಾರತಕ್ಕೆ ಲಗ್ಗೆ ಇಡುತ್ತಿದ್ದಾರೆ. ಇದು ಭವಿಷ್ಯದ ದಿನಗಳಲ್ಲಿ ಇನ್ನೂ ಹೆಚ್ಚಾಗುವ ಲಕ್ಷಣಗಳು ಕಾಣಿಸುತ್ತಿವೆ ಎಂದು ತಜ್ಞರು ಅಭಿಪ್ರಾಯಪಡುತ್ತಾರೆ.

ಮೇಲಿನ ಪ್ರಕರಣದಲ್ಲಿ ಜಪಾನಿನ ಯಮಾದ ದಂಪತಿಗಳು ಮಗು ಹುಟ್ಟುವ ಮೊದಲೇ ವಿಚ್ಛೇದನ ತೆಗೆದುಕೊಂಡದ್ದರಿಂದ ಸಮಸ್ಯೆ ಉದ್ಭವವಾಗಿದೆ. ವೈದ್ಯಕೀಯ ತಂತ್ರಜ್ಞಾನ ಬೆಳೆದು, ಅದನ್ನು ನಾವು ಒಪ್ಪಿ ಆಚರಣೆಗೆ ತಂದಷ್ಟು ತೀವ್ರಗತಿಯಲ್ಲಿ ನಮ್ಮ ಕಾನೂನಿನ ಚಕ್ರ ತಿರುಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ತಂತ್ರಜ್ಞಾನದ ಉಪಯೋಗದ ವಿವಿಧ ಹಂತಗಳಲ್ಲಿ ಇಂತಹ ಹಲವಾರು ಸಮಸ್ಯೆಗಳು ಉದ್ಭವವಾಗುತ್ತಿರುತ್ತವೆ. ೧೨೦ ವರ್ಷಗಳ ಹಿಂದಿನ ಮಗುವಿನ ದತ್ತಕದ ಕಾನೂನನ್ನು ಇದಕ್ಕೆ ಅನ್ವಯಿಸಲು ಸಾಧ್ಯವೆ? ಹಾಗಾಗಿ ನಾವು ಇದನ್ನು ಮಾನವೀಯತೆಯ ನೆಲೆಯಲಿ ನೋಡಿದಾಗ, ತಕರಾರಿಲ್ಲದೆ ಮಗು ಜಪಾನಿಗೆ ಹೋಗಲು ನಮ್ಮ ವ್ಯವಸ್ಥೆ ಅನುಮತಿ ಕೊಡಬೇಕು. ಅದೂ ಹುಟ್ಟಿಗೆ ಕಾರಣವಾದ ತಂದೆ ಹಾಗೂ ಅಜ್ಜಿ – ಮಗುವನ್ನು ಸಾಕಲು ತಯಾರಿರುವಾಗ. ಇಲ್ಲಿ ನಮ್ಮ ದೇಶದಲ್ಲಿ ಅದನ್ನು ಸಾಕಲು ಯಾರೂ ಇಲ್ಲದಿದ್ದಾಗ – ಅದೇ ಸೂಕ್ತ ನಿರ್ಧಾರವಲ್ಲವೆ?

**ಡಾ॥ ಎಚ್. ಎಸ್. ಮೋಹನ್**
ವಿಜಯ ಕಣ್ಣಿನ ಚಿಕಿತ್ಸಾಲಯ, ಸಾಗರ
ಶಿವಮೊಗ್ಗ ಜಿಲ್ಲೆ

## ಪ್ರೀತಿ

ಶರತ್ಕಾಲದಲ್ಲಿ
ನಯನ ಮನೋಹರವಾಗಿ
ಕಂಗೊಳಿಸುವ ಹಸಿರ
ಸಿರಿಯ ಮಲೆನಾಡಿನಂತೆ

**ಎನ್. ಶ್ರೀನಿವಾಸ್**
ಪ್ರಥಮ ದರ್ಜೆ ಸಹಾಯಕ
ಜಿಲ್ಲಾ ಕೃಷಿ ತರಬೇತಿ ಕೇಂದ್ರ
ಬ. ಲ. ಪಾರು, ಮಂಡ್ಯ

# ದಂಗೆಯ ದಿನಗಳು

**● ಕೆ. ಷರೀಫಾ**



ಅಂದಿನ ರಾತ್ರಿ ಊರೆಲ್ಲ ಗಾಢ ನಿದ್ದೆಯ ಚಾದರ ಹೊದ್ದು ಮಲಗಿತ್ತು. ಜಿಟಿ ಜಿಟಿ ಮಳೆ ಹಿಡಿದಿತ್ತು. ಮಳೆಗಾಲದ ದಿನವಾಗಿದ್ದರಿಂದ ನದಿಸಿಣ್ಣೂರಿನ ಪಕ್ಕದಿಂದ ಭೀಮಾನದಿ ತುಂಬಿ ಹರಿಯುತ್ತಿತ್ತು. ಬರಗಾಲದ ಬೆಂಕಿಯಲ್ಲಿ ಬೇಯುವ ಬರದ ಗುಲಬರ್ಗಾ ಜಿಲ್ಲೆ ನಿಜಾಮರ ಆಡಳಿತಕ್ಕೊಳಪಟ್ಟಿತ್ತು. ದೇಶಕ್ಕೆ ೧೯೪೭ರಲ್ಲಿ ಸ್ವಾತಂತ್ರ್ಯ ಬಂದಿದ್ದರೂ ಹೈದರಾಬಾದ್ ಕರ್ನಾಟಕಕ್ಕೆ ಸೆಪ್ಟೆಂಬರ್ ೧೮, ೧೯೪೮ಕ್ಕೆ ದೊರಕಿತ್ತು. ಬರದಿಂದ ಬಿಡುಗಡೆಗೊಳಿಸಲು ನಿಜಾಮರು ಕೃಷ್ಣಾ ಮೇಲ್ದಂಡೆ ಯೋಜನೆಗೆ ಅಡಿಗಲ್ಲು ಹಾಕಿದರು.

ನದಿ ಜನರಿಗೆ ಅಂದಿನ ಅಮಾವಾಸ್ಯೆಯ ರಾತ್ರಿ ಅತ್ಯಂತ ಘೋರವಾಗಿತ್ತು. ಮಧ್ಯರಾತ್ರಿಯ ಸಮಯ. ಜೀರುಂಡೆಗಳು ಚಿರ್ ಚಿರ್ ಎನ್ನುತ್ತಿದ್ದವು. ದೂರದಲ್ಲಿ ನಾಯಿಯೊಂದು ಮುಖ ಮೇಲೆತ್ತಿ ಗೋಳಿಡುತ್ತಿತ್ತು. ಜಾಲಿ ಮರದ, ಬೇವಿನ ಮರದ ಎಲೆಗಳುದುರಿ – ಮಳೆ ನೀರಿಗೆ ತೊಯ್ದು ಒಣಗಿದೆಲೆಗಳ ವಾಸನೆ – ಋತುಮಾನದ ಹೂಗಳ ಮಧುರ ಪರಿಮಳ ಹಬ್ಬಿತ್ತು. ಯಾಂತ್ರಿಕ ಯುಗದ ಸ್ಪರ್ಶವೇ ಇಲ್ಲದ, ಯಾವ ಒತ್ತಡಗಳೂ ಇಲ್ಲದ, ನದಿಯುದ್ದಕ್ಕೂ ಚಾಚಿದ್ದ ನದಿಸಿಣ್ಣೂರು. ಇದಕ್ಕೆ ತಕ್ಕಂತೆ ಅಲ್ಲಿಯ ಮೂಲ ನಿವಾಸಿಗಳು ಶ್ರಮಜೀವಿಗಳೂ ಮುಗ್ಧರೂ ಆಗಿದ್ದರು. ದಂಗೆ ಅವರಿಗೆ ಗೊತ್ತಿಲ್ಲ. ಅವರಿಗೆ ಗೊತ್ತಿದ್ದುದು ಕೇವಲ ಕಷ್ಟಪಟ್ಟು ದುಡಿಯುವುದು ಮಾತ್ರ.

ಜಿಟಿಜಿಟಿ ಹಿಡಿದ ಮಳೆಗೆ ಊರಿನ ಮಣ್ಣ ಗುಡ್ಡೆಗಳೆಲ್ಲ ಕರಗಿ ಹೋದವು. ಎಲ್ಲೆಂದರಲ್ಲಿ ಕಪ್ಪೆಗಳ ಗೊಟರ್ ಗೊಟರ್ ಶಬ್ದ. ಅಮಾವಾಸ್ಯೆ ಕತ್ತಲೆಯಲ್ಲಿ ಮಿಂಚುಹುಳು ಆಗಾಗ್ಗೆ ಮಿಂಚಿ ಬೆಳಕು ಮಾಡುವ ರೀತಿ ವಿಶಿಷ್ಟವಾಗಿತ್ತು. ಮಧ್ಯರಾತ್ರಿಯ ಮೌನದಲ್ಲಿ ದೂರದಲ್ಲಿ ಎತ್ತಿನ ಬಂಡಿಯೊಂದು ಬರುತ್ತಿರುವ ಸದ್ದು. ಶಾಬಾದಿ ಫರ್ಸಿಯ ಗೋಡೆ ಮತ್ತು ಛಾವಣಿಯಿರುವ ನೂರೈವತ್ತು ಮನೆಗಳಿರುವ ನದಿಸಿಣ್ಣೂರಿನ ಕಚ್ಚಾರಸ್ತೆಗಳು ನಿರಂತರ ಮಳೆಗೆ ಕೆಸರು ಗದ್ದೆಗಳಾಗಿದ್ದವು.

ಕರಾಳ ರಾತ್ರಿಯ ನೀರವ ಮೌನವನ್ನು ಭೇದಿಸುತ್ತ ದಾವಲಬಿ ಎದೆ ಬಡಿದುಕೊಳ್ಳುತ್ತಾ "ನಮ್ಮನೆಯವನ್ನ ಹಿಡ್ಕೊಂಡು ಹೋದ್ರಪೋ ಅವರು" ಎನ್ನುತ್ತಾ ಓಡಿಬಂದಳು. ದಾವಲಬಿಯ ಕಿರುಚಾಟ ಕೇಳಿದ ಅಕ್ಕಪಕ್ಕದ ಮನೆಯವರು ಎದ್ದು ಹೊರಗೆ ಓಡಿಬಂದರು. ಏನಾಯಿತೆಂದು ಕೇಳತೊಡಗಿದರು.

ಒಣಗಿದ ತುಟಿಗಳನ್ನು ಸವರಿಕೊಳ್ಳುತ್ತ ಗಂಟಲು ಸರಿಪಡಿಸಿಕೊಂಡ ದಾವಲಬಿಗೆ ಸೇರಿದ ಜನರು "ಏನಾಯಿತೆಂದು ಹೇಳು ದಾವಲಬಿ- ಹೆದರಬೇಡ ನಾವಿದ್ದೇವೆ" ಎಂದಾಗ ಸುಧಾರಿಸಿಕೊಂಡು ದಾವಲಬೀ "ನಮ್ಮೆಜಮಾನರನ್ನು ಯಾರೋ ಬಂದು ಹಿಡ್ಕೊಂಡು ಹೋದ್ರಪೋ" ಎಂದು ಕಣ್ಣೀರು ಹಾಕಿದಳು. ಕುದುರೆ ಮೇಲೆ ಬಂದ ೮-೧೦ ಜನರ ಗುಂಪೊಂದು ಊರು ಹೊಕ್ಕಿತ್ತು. ಹುಸೇನ್‌ಬಿಯ ಮಗನನ್ನೂ ಜೈನಬ್ಬಿಯ ಅಣ್ಣನನ್ನೂ ಮುಸುಕುಧಾರಿಗಳು ಎಳೆದೊಯ್ದರೆಂದು ಅವರೂ ಗೋಳಿಡತೊಡಗಿದರು.

ದಾವಲಬಿ, ಜೈನಬ್ಬಿ, ಹುಸೇನಬೀಯ ರೋದನ ಕಿರುಚಾಟ ಕೇಳಿದ ಅಕ್ಕಪಕ್ಕದವರು ಎದ್ದು ಹೊರಗೆ ಓಡಿಬಂದರು. ತಮ್ಮವರನ್ನು ಬಿಡಿಸಿಕೊಂಡು ಬರುವಂತೆ ವಿನಂತಿಸುತ್ತಿದ್ದ ಅವರನ್ನು ಕೆಲವರು "ಅಯ್ಯೋ ಪಾಪ!" ಎಂದು [illegible] "ಯಾರು? ಹೇಗಿದ್ದರು? ಯಾವ ಕಡೆಗೆ ಹೋದರು?" ಎಂದು ಕೆಲವರು ಹುಡುಕಾಟಕ್ಕೆ ಹಚ್ಚಿಕೊಂಡರು. ಇನ್ನು ಕೆಲವರು ಗೊಣಗುಟ್ಟಿಕೊಳ್ಳುತ್ತಾ ಮನೆ ಚಿಲಕ ಹಾಕಿಕೊಂಡರು.

ರಜಾಕಾರರ ಚಳುವಳಿ ನಡೆದಿದ್ದ ಕಾಲವದು. ಹೊರಗಿನಿಂದ ಬಂದ ರಜಾಕಾರರ ಜೊತೆ ಊರಿನ ಪಡ್ಡೆ ಹುಡುಗರೂ ಸೇರಿಕೊಂಡಿದ್ದರು. ರಜಾಕಾರರ ಹಾವಳಿಗೆ ಕೇವಲ ಸಿಣ್ಣೂರು ಗ್ರಾಮ ಮಾತ್ರವಲ್ಲ ಕುಮಸಿ, ಜಂಬಗಿ, ಬೇನೂರ್, ಸುರಪುರ, ಶಹಾಪೂರ, ಗೋಗಿಯಂತಹ ಸುತ್ತಮುತ್ತಲ ಹಳ್ಳಿಗಳೂ ತುತ್ತಾಗಿದ್ದವು.

ಸಿಣ್ಣೂರಿನ ಜನತೆ ಶಾಂತಿಪ್ರಿಯ ಶ್ರಮಜೀವಿ ರೈತರಾಗಿದ್ದರು. ಅವರೆಂದೂ ಕಾದಾಡಿದವರಲ್ಲ. ಹೈದರಾಬಾದಿನ ನಿಜಾಮರ ಆಡಳಿತಕ್ಕೆ ಈ ಪ್ರಾಂತ ಒಳಪಟ್ಟಿತ್ತು. ರಜಾಕಾರರ ಹಾವಳಿಗೆ ಈ ಪುಟ್ಟ ಗ್ರಾಮದ ಎದೆ ನಡುಗಿತ್ತು. ಇಲ್ಲಿಯವರೆಗೂ ಗ್ರಾಮದಲ್ಲಿ ಶಾಂತಿ ನೆಲೆಸಲು ರಹೀಮಜ್ಜ ಮತ್ತು ಬಸವಣೆಪ್ಪಗೌಡ ಕಾರಣರಾಗಿದ್ದರು. ಇವರೆಂದೂ ಗ್ರಾಮದ ಜನರ ಕೆಡುಕು ಬಯಸಿದವರಲ್ಲ. ಊರಿನ ಬಸವಣ್ಣನ ಜಾತ್ರೆಯ ತೇರು ರಹೀಮಜ್ಜ ಎಳೆದ ನಂತರವೇ ಬಸವಣೆಪ್ಪಗೌಡರು, ಕುಲಕರ್ಣಿ ಶ್ಯಾಮರಾಯರು ರಥ ಎಳೆಯುತ್ತಿದ್ದರು.

ಗುಲ್ಬರ್ಗಾ, ಬೀದರ್, ರಾಯಚೂರು, ಬಿಜಾಪುರ, ಹೈದರಾಬಾದ್‌ಗಳಲ್ಲಿಯ ಹಿಂದುಗಳು ನಿಜಾಮನ ಮೇಲಿನ, ರಜಾಕಾರರ ಮೇಲಿನ ಸಿಟ್ಟಿನಿಂದ ಮುಸ್ಲಿಂ ಬಡಪಾಯಿಗಳನ್ನು ಕಾಡು-ಮೇಡು ಎಂಬಂತೆ ಸಿಕ್ಕಸಿಕ್ಕಲ್ಲಿ ಕೊಚ್ಚಿಹಾಕಿದ್ದರು. ಮಹಿಳೆಯರು ಮತ್ತು ಹಸುಳೆಗಳ ಮೇಲೆ ಬಲಾತ್ಕಾರವೆಸಗತೊಡಗಿದರು. ರಾಜಸತ್ತೆಯ ಶಕ್ತಿಯ ಎದುರು ಸಾಮಾನ್ಯ ಜನರು ನಲುಗಿದರು. ಕೆಲವೇ ದಿನಗಳ ಹಿಂದೆ ಜಂಬಗಿ ಗ್ರಾಮದಲ್ಲಿ ಕೊಳ್ಳೆಹೊಡೆದಿದ್ದರು. ರಜಾಕಾರರ ದಾಳಿಗೆ ನಲುಗಿದ ಒಂದು ಕೋಮಿನ ನಿರಪರಾಧಿ ಜನರು ಇನ್ನೊಂದು ಕೋಮಿನವರ ಮೇಲೆ ಸೇಡು ತೀರಿಸಿಕೊಳ್ಳತೊಡಗಿದರು.

ಒಂದು ದಿನ ಊರಿನ ಜನರೆಲ್ಲ ಶಾಮರಾಯ ಕುಲಕರ್ಣಿಯವರ ಕರೆಯಂತೆ

ಪಂಚಾಯ್ತಿ ಕಟ್ಟೆಗೆ ಬಂದು ಸೇರಿದರು. ದಾಳಿಕೋರರನ್ನು ಎದುರಿಸಲು ನಾವು ಶಹರದಿಂದ ಮದ್ದು ಗುಂಡು, ಬಂದೂಕು ತರಬೇಕೆಂದು ಹುರಿದುಂಬಿಸಿದನು. ಆದರೆ ಶಾಮರಾಯರ ಮಗ ಸತೀಶ್‌ನ ಮೇಲೆ ಎಲ್ಲರ ಗುಮಾನಿಯಿತ್ತು. ಮಗನ ನಡವಳಿಕೆ ಬಗ್ಗೆ ಕುಲಕರ್ಣಿ ನೊಂದಿದ್ದರು. ರಹೀಮ ಸಾಬರೂ ಈ ವಿಷಯದ ಬಗ್ಗೆ ಕುಲಕರ್ಣಿಯವರೊಂದಿಗೆ ಮಾತಾಡಿದ್ದರು. ಇವರಿಗೆ ಪೋಲಿ ತಿರುಗುವ ಮಗನ ಬಗ್ಗೆ ಬೇಸರವಿತ್ತು. ಸತೀಶ ಪಡ್ಡೆ ಹುಡುಗರನ್ನೆಲ್ಲ ಸೇರಿಸಿ ದುಡ್ಡು ಸಂಗ್ರಹಿಸುತ್ತಿದ್ದ. ಊರಿನ ಯುವಕರಿಗೆಲ್ಲ ತಲವಾರು, ಬಂದೂಕು ಚಲಾಯಿಸುವ ತರಬೇತಿ ನೀಡುತ್ತಿದ್ದ. ಪಕ್ಕದ ಮಹಾರಾಷ್ಟ್ರದಿಂದ ತಲವಾರು ಚಲಾಯಿಸುವ ತಜ್ಞರನ್ನು ಕರೆಸಿ ತರಬೇತಿ ನೀಡುತ್ತಿದ್ದ.

ಒಂದು ವಾರದ ಹಿಂದೆಯಷ್ಟೇ ಬೇನೂರು ಗ್ರಾಮ ಲೂಟಿಯಾಯಿತು. ಹೆಂಗೆಳೆಯರ ಮಾನ ಹರಾಜಾಯಿತು. ಬೆಳ್ಳಿ, ಬಂಗಾರ, ಸಂಪತ್ತು ಮತ್ತು ಆಹಾರದ ಕಣಜಗಳೆಲ್ಲ ಲೂಟಿಯಾದವು. ಸುತ್ತಲ ಹಳ್ಳಿಗಳಲ್ಲಿ ಸೂತಕದ ವಾಸನೆ ಮೂಡಿತ್ತು. ಒಬ್ಬರು ಇನ್ನೊಬ್ಬರನ್ನು ಗುಮಾನಿಯಿಂದ ನೋಡ ತೊಡಗಿದರು. ಎಲ್ಲೆಲ್ಲೂ ಸಂಶಯ ಮನೆ ಮಾಡಿತು. ಊರಿನ ಚಟುವಟಿಕೆ ಗಳೆಲ್ಲಾ ಸ್ತಬ್ಧಗೊಂಡವು. ಬೇನೂರು ಕನಸಿನಲ್ಲೂ ಬೆಚ್ಚಿಬೀಳುವಂತಹ ನರಕಯಾತನೆಯನ್ನು ಅನುಭವಿಸುತ್ತಿತ್ತು.

ಬೇನೂರಿನ ಒಂಬತ್ತು ಹೆಣ್ಣುಮಕ್ಕಳ ತಾಯಿ ಇಮಾಂಬೀ ತನ್ನ ಹರೆಯದ ಹೆಣ್ಣುಮಕ್ಕಳ ಮಾನ ಹೋದರೆ ತಲೆ ಎತ್ತಿ ಹೇಗೆ ಬದುಕುವುದೆಂದು ಹೆದರಿ ತನ್ನ ಒಂಬತ್ತು ಜನ ಮಕ್ಕಳೊಂದಿಗೆ ಬಾವಿಗೆ ಹಾರಿ ಪ್ರಾಣ ಕಳೆದುಕೊಂಡಳು. ರೋಶನ್‌ಬೀ ತನ್ನ ಮೂರು ಜನ ಹೆಣ್ಣುಮಕ್ಕಳೊಂದಿಗೆ ಬಸವಣೆಪ್ಪನ ಮನೆಯಲ್ಲಿ ಠಿಕಾಣಿ ಹೂಡಿದ್ದಳು. ಗಂಡ ಮದಾರ ಅವರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದ. ಹೊಲದಲ್ಲಿ ಕೆಲಸಕ್ಕೆ ಹೋದ ತನ್ನ ಗಂಡ ಮತ್ತು ಮಕ್ಕಳಿಗೆ ಸಂಜೆ ರೋಶನಬೀ ಬಸವಣೆಪ್ಪನವರ ಮನೆ ಮಾಳಿಗೆ ಹತ್ತಿ ಅಟ್ಟದ ಮೇಲೆ ಹಸಿರು ನಿಶಾನೆ ತೋರಿಸಿದರೆ ಮಾತ್ರ ಊರಿನೊಳಗೆ ಬರುತ್ತಿದ್ದರು. ಕೆಂಪು ನಿಶಾನೆ ತೋರಿದರೆ ಜೀವಕ್ಕೆ ಅಪಾಯವಿದೆಯೆಂದು ಕಾಡಿನಲ್ಲೇ ಮದಾರಸಾಬ ತನ್ನ ಹೆಣ್ಣುಮಕ್ಕಳೊಂದಿಗೆ ಅವಿತಿಟ್ಟುಕೊಳ್ಳುತ್ತಿದ್ದ. ಮಧ್ಯರಾತ್ರಿಯ ಸಮಯ ಹಸಿರು ನಿಶಾನೆ ಕಂಡಾಗ ಲಗುಬಗನೆ ಮನೆ ಸೇರಿ ಉಸಿರುಬಿಡುತ್ತಿದ್ದ.

ಗುಲ್ಬರ್ಗಾ ರೇಲ್ವೆ ನಿಲ್ದಾಣದ ಬಳಿ ಪೊಲೀಸ್ ಬಂದೋಬಸ್ತಿನಲ್ಲಿ ನಿರಾಶ್ರಿತರಿಗೆ ರಕ್ಷಣೆ ನೀಡುತ್ತಿದ್ದಾರೆಂದು ಅರಿತ ನಾಸೀರುದ್ದೀನರು ಕಂಬಳಿ ಹೊದ್ದು ಕುದುರೆಯೇರಿ ಖೊಬ್ಬರಿ ಬೆಲ್ಲ ತಿನ್ನುತ್ತ ಗುಲಬರ್ಗಾದ ಕಡೆ ಹೊರಟರು. ಬೇನೂರಿನ ಅಕ್ಕಸಾಲಿಗ ನಾಸೀರ್ ಎಲ್ಲರಿಗೂ ಬೇಕಾದ ವ್ಯಕ್ತಿಯಾಗಿದ್ದರು. ದಾಳಿಕೋರರು ಸಂಪತ್ತಿನ ಆಸೆಗಾಗಿ ತನ್ನ ಜೀವಕ್ಕೆ ಎರವಾಗಬಹುದೆಂದು ಅರಿತ ಅವರು ಬೆಳ್ಳಿ ಬಂಗಾರದ ಒಡವೆಗಳನ್ನೆಲ್ಲ ನೆಲದಲ್ಲಿ ಹೂತಿಟ್ಟು ಗುಲ್ಬರ್ಗಾದತ್ತ ಸಾಗಿದರು. ತೆಗನೂರಿನ ಬಳಿ ದಾಳಿಕೋರರು ಎದುರಾದಾಗ ಪಕ್ಕದಲ್ಲಿದ್ದ ಹನುಮಂತನ ದೇವಾಲಯದ ಗರ್ಭಗುಡಿಯ ಮೂರ್ತಿಯ ಹಿಂದೆ ಅವಿತಿಟ್ಟುಕೊಂಡು ಆ ರಾತ್ರಿ ಕಳೆದು ಚುಮುಚುಮು ನಸುಕಿನಲ್ಲಿ ಗುಲ್ಬರ್ಗಾದ ಹಾದಿ ಹಿಡಿದರು. ಬೇನೂರಿನ ಜನತೆ ಕಂಗೆಟ್ಟರು. ದಾಳಿ, ಲೂಟಿ, ಬಲಾತ್ಕಾರದಿಂದ ಊರು ನಲುಗಿತು.

ಸಿಣ್ಣೂರಿನ ಜನತೆ ತಮಗೆಲ್ಲ ಅಂತಹ ಸ್ಥಿತಿ ಎಂದು ಬಂದೊದಗುವುದೋ ಎಂದು ಬೆದರಿದ್ದರು. ದಾವಲಬಿಯ ಗಂಡ ಮಹಮೂದ್, ಜಾವೀದ್ ಅಲಿ ಮತ್ತು ಅರ್ಷದ್‌ಮಿಯಾ ಅವರಿಗೆ ರಾತ್ರೋರಾತ್ರಿ ದಾಳಿಕೋರರು ಅಟ್ಟಿಸಿಕೊಂಡು ಭೀಮಾ ನದಿ ದಂಡೆಯತ್ತ ಕರೆದೊಯ್ದರು. ಪುಟ್ಟ ಸಿಣ್ಣೂರಿನ ಮೇಲೆ ದಾಳಿ ಮಾಡಿ ಇಡೀ ಊರನ್ನು ಕೊಳ್ಳೆಹೊಡೆದರು. ಅದನ್ನು ತಡೆಯುವ ಶಕ್ತಿ ಯಾರಿಗೂ ಇಲ್ಲವಾಯಿತು. ನವಾಬರು ಈ ದಾಳಿಕೋರರನ್ನು ತಡೆಯುವುದಾಗಿ ಬಸವಣೆಪ್ಪ ಶ್ಯಾಮರಾಯರಿಗೆ ಮಾತು ಕೊಟ್ಟಿದ್ದರು. ಅದಕ್ಕಾಗಿಯೇ ಅವರು ಸೈನ್ಯದ ಪ್ರತ್ಯೇಕ ತುಕಡಿಗಳನ್ನು ರಚಿಸಿದರು. ಜನತೆಯ ಮೇಲೆ ಪ್ರತ್ಯೇಕ ತೆರಿಗೆ, ಕರಗಳನ್ನು ವಿಧಿಸಿದರು. ಸಿಣ್ಣೂರಿನ ಬೇನೂರಿನ ನೂರಾರು ಯುವಕರು ಈ ತುಕಡಿಗಳಿಗೆ ಸೇರಿಕೊಂಡರು. ಆದರೂ ಅದಾವ ಮಾಯ ಮುಸುಕಿತೋ ಕಾಣೆ, ಬೇನೂರು, ಜಂಬಗಿ, ತೆಗನೂರು ಸೇರಿ



ಗುಲಬರ್ಗಾದ ಸುತ್ತಮುತ್ತಲ ಹಳ್ಳಿಗಳು ಒಂದೊಂದಾಗಿ ದಾಳಿಗೊಳಗಾದಂತೆ ಸಿಣ್ಣೂರು ಗ್ರಾಮವೂ ಕೂಡ ದಾಳಿಗೊಳಗಾಯಿತು.

ಮಹಮೂದ್, ಜಾವೀದ್ ಮತ್ತು ಅರ್ಷದ್‌ರನ್ನು ದಂಗೆಕೋರರು ಕೈಕಾಲು ಕಟ್ಟಿ, ಕೊಚ್ಚಿಹಾಕಲು ಸಾಲಾಗಿ ನಿಲ್ಲಿಸಿದರು. ಜಾವೀದ್, ಅರ್ಷದ್‌ರ ರುಂಡಗಳನ್ನು ದೇಹದಿಂದ ತೆಗೆದರು. ಬೆದರಿದ ಮಹಮೂದ್ ತುಂಬಿ ಹರಿಯುತ್ತಿದ್ದ ಭೀಮಾ ನದಿಗೆ ಹಾರಿ ಸಾಯುವುದೇ ಲೇಸೆಂದು ಭಾವಿಸಿದನು. ದಾಳಿಕೋರರು ರಹೀಮಜ್ಜನ ಮಗ ಹುಸೇನನನ್ನೂ ಹಿಡಿಯಲು ಹಲವಾರು ಕಡೆ ಹುಡುಕಿದರು. ವಿಷಯ ತಿಳಿದ ಹುಸೇನ್‌ಸಾಬ ಬಸವಣೆಪ್ಪರ ಗೋದಾಮಿನ ಚೀಲಗಳ ನಡುವೆ ಅವಿತುಕೊಂಡನು. ದಾಳಿಕೋರರು ಅವನಿಗಾಗಿ ತುಂಬಾ ಹುಡುಕಿದರು. ಬಚ್ಚಿಟ್ಟುಕೊಂಡ ಹುಸೇನನಿಗೆ ಅವರ ನಡೆದಾಡುವ ಟಕ್ ಟಕ್ ಶಬ್ದಕ್ಕೆ ಎದೆಗುಂಡಿಗೆ ಗಂಟಲಿಗೆ ಬಂದಂತಾಗುತ್ತಿತ್ತು. ಅವರು ಮುಂದೆ ಹೋದ ನಂತರ ಹುಸೇನಿ ಗೌಡರ ಮೂರನೇ ಅಂತಸ್ತಿನ ಕಿಟಕಿಯಿಂದ ಹಾರಿ ಕಾಡುಬಿದ್ದು ಜೀವ ಉಳಿಸಿಕೊಂಡನು.

ನದಿ ಪ್ರಪಾತಕ್ಕೆ ಜಿಗಿದ ಮಹಮೂದ್ ಮೇಲೆ ಬರದಿದ್ದಾಗ ಅವನ ಕತೆ ಮುಗಿಯಿತೆಂದುಕೊಂಡ ದಾಳಿಕೋರರು ಜಾಗ ಖಾಲಿ ಮಾಡಿದರು. ಜಾಲಿ ಮರದ ಟೊಂಗೆ ಹಿಡಿದು ಮುಂದೆ ತೇಲಿದ ಮಹಮೂದ್ ಮರಳಿ ಊರಿಗೆ ಬಂದಾಗ ಸಂಭ್ರಮವೋ ಸಂಭ್ರಮ. ಆದರೆ ಜಾವೀದ್ ಅರ್ಷದರ ಸಾವಿನ ಬಗ್ಗೆ ತಿಳಿದು ಊರು ಗೋಳಿಟ್ಟಿತು.

ಅಂದು ಬೆಳಗಾಗುತ್ತಿದ್ದಂತೆಯೇ ಊರಿನಲ್ಲಿ ಭರ್ರೆಂದು ಸರ್ಕಾರಿ ವಾಹನ ಬಂದಿತು. ಸಿಣ್ಣೂರಿನ ಜನ ಪೊಲೀಸ್ ಜೀಪು ನೋಡಿ ನೆಮ್ಮದಿಯ ಉಸಿರುಬಿಟ್ಟರು. ರಹೀಮಜ್ಜ, ಫಕೀರಜ್ಜ, ಬಸವಣೆಪ್ಪ, ಕುಲಕರ್ಣಿ ಹೀಗೆ ಊರ ಜನರೆಲ್ಲ ಸೇರಿದರು.

''ನಾವೆಲ್ಲ ಒಂದೇ ತಾಯಿ ಮಕ್ಕಳಂತೆ ಬಾಳೋಣ. ಒಬ್ಬರಿಗೊಬ್ಬರು ರಕ್ಷಣೆ ನೀಡೋಣ. ಯಾರೂ ಭಯ ಪಡಬೇಡಿ ನಾವಿದ್ದೇವೆ'' ಎಂದು ರಹಿಮಜ್ಜ, ಬಸವಣೆಪ್ಪ ಜನರಿಗೆ ಧೈರ್ಯ ನೀಡಿದರು. ಹಿಂದು ಮುಸ್ಲಿಂ ಯುವಕರೆಲ್ಲ ಸೇರಿ ದಾಳಿಕೋರರನ್ನು ತಡೆಯಲು ದಿನಾಲೂ ಅಗಸಿ ಬಾಗಿಲ ಬಳಿ ಗಸ್ತು ಕಾಯುತ್ತಿದ್ದರು. ಕೆಲವರು ಎತ್ತರದ ಮರವೇರಿ ಕುಳಿತು ದೂರದಿಂದಲೇ ಬರುವ ಶತ್ರುವಿನ ಸುಳಿವು ನೀಡುತ್ತಿದ್ದರು. ಪೊಲೀಸರು ನೆರವು ನೀಡಿದರು. ಮತ್ತೊಮ್ಮೆ ಊರಿಗೆ ಪೊಲೀಸರ ಜೀಪು ಬಂದಿತು. ''ಯಾರೂ ಹೆದರಬ್ಯಾಡ್ರಪೋ... ನವಾಬರು ಒಪ್ಪಂದಕ್ಕೆ ಸಹಿ ಹಾಕಿದರು. ಭಾರತ ಒಕ್ಕೂಟಕ್ಕೆ ಸೇರಿದರು'' ಎಂದರು. ಊರಿನಲ್ಲಿ ಡಂಗುರ ಸಾರಿದರು. ಗಲಭೆ, ದಂಗೆಗಳು ಶಾಂತವಾಗಿ, ಊರಿನ ಜನ ನೆಮ್ಮದಿಯಿಂದ ನಿದ್ದೆ ಮಾಡಿದರು.

**ಕೆ. ಷರೀಫಾ**
ಎ.ಪಿ.ಎಂ.ಸಿ., ಹರಿಹರ - ೫೭೭೬೦೧, ದಾವಣಗೆರೆ ಜಿಲ್ಲೆ

# ದೇವನೂರು, ಮಾಲಗತ್ತಿ ಸಾಹಿತ್ಯದಲ್ಲಿ ಮಹಿಳಾ ಅಭಿವ್ಯಕ್ತಿ

**ಬಂಡಾಯ ಮತ್ತು ದಲಿತ ಸಾಹಿತ್ಯ ಕೇವಲ ಸಾಹಿತ್ಯ ರಚನೆಗಳಿಗಷ್ಟೇ ಸೀಮಿತ ವಾಗದೆ ಚಳವಳಿಯಾಗಿ ಮೂಡಿಬಂದಿದೆ. ಮೇಲ್ವರ್ಗ, ಕೆಳವರ್ಗ, ಮೇಲ್ಜಾತಿ, ಕೆಳಜಾತಿಗಳೆಂಬ ಭೇದವು ವಿಶಾಲವಾದ ಅರ್ಥದಲ್ಲಿ ನಿಜವಾದರೂ 'ಮಹಿಳಾ ವಾದ'ದ ಪ್ರಶ್ನೆ ಬಂದಾಗ ಕೆಲವು ಮುಖ್ಯ ಸಮಸ್ಯೆಗಳು ಸಾಮಾನ್ಯವಾಗಿ ಎಲ್ಲಾ ವರ್ಗ – ಜಾತಿಗಳ ಮಹಿಳೆಯರ ಸಮಸ್ಯೆ ಯಾಗಿದೆ. ಅದನ್ನು ದಲಿತ – ಬಂಡಾಯ ಚಳವಳಿಗಳು ಒಪ್ಪಿಕೊಂಡು ಮಹಿಳಾ ಚಳವಳಿಯನ್ನು ತಮ್ಮ ಜೊತೆಗೆ ಬಲಪಡಿಸಿಕೊಂಡು ಬಂದಿವೆ. ಆದರೆ ಈ ಆಶಯವನ್ನು ವಿರೋಧಿಸುವ ರೀತಿಯಲ್ಲಿ ದೇವನೂರು ಮತ್ತು ಮಾಲಗತ್ತಿಯವರು ಮೇಲ್ವರ್ಗದ ಸ್ತ್ರೀಯರ ಪಾತ್ರಗಳನ್ನು ಚಿತ್ರಿಸಿದ್ದಾರೆ.**

ಡಾ|| ನಿಕೇತನ

ಮಹಿಳಾ ಮೀಸಲಾತಿಯ ಬಗ್ಗೆ ಚರ್ಚೆ ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಒಂದು ಕುತೂಹಲಕಾರಿ ವಿಚಾರವನ್ನು ಗಮನಿಸಬಹುದಾಗಿದೆ. ಅದೆಂದರೆ, ಎಲ್ಲಾ ಮಹಿಳೆಯರು ಸಮಾನರು ಎಂದು ಕೆಲವು ಪಕ್ಷಗಳು ವಾದಿಸಿದರೆ, ದಲಿತ, ಹಿಂದುಳಿದ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಮಹಿಳೆಯರಿಗೆ ಒಳಮೀಸಲಾತಿಯನ್ನು ಒದಗಿಸಬೇಕೆಂದು ಆರ್‌ಜೆಡಿ, ಎಸ್‌ಪಿ, ಬಿಎಸ್‌ಪಿಯಂಥ ಪಕ್ಷಗಳು ವಾದಿಸುತ್ತಿವೆ. ಈ ಅಂಶವನ್ನು ಇಲ್ಲಿ ಪ್ರಸ್ತಾಪಿಸುವ ಮುಖ್ಯ ಉದ್ದೇಶ ಕನ್ನಡ ದಲಿತ ಸಾಹಿತ್ಯವು ಈಗಾಗಲೇ ದಲಿತ ಮಹಿಳಾ ಲೋಕವನ್ನು ಕಲಾತ್ಮಕವಾಗಿ ಚರ್ಚಿಸಿದೆ. ಮೇಲಿನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕಂಡುಕೊಳ್ಳಲು ದಲಿತ ಸಾಹಿತ್ಯದ ಮೂಲಕ ದಲಿತ ಸ್ತ್ರೀಲೋಕವನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ದಲಿತ ಮಹಿಳೆಯರ ಸಮಸ್ಯೆಗಳು, ಭಾವನೆಗಳು, ಅನನ್ಯತೆ, ಮುಗ್ಧತೆ ಎಲ್ಲವೂ ವಿಶಿಷ್ಟ, ವಿಭಿನ್ನ ರೀತಿಗಳಲ್ಲಿ ಚಿತ್ರಿತವಾಗಿವೆ. ಈ ಪ್ರಬಂಧದಲ್ಲಿ ದಲಿತ ಲೇಖಕರು ಚಿತ್ರಿಸಿದ ಸಮಗ್ರ ಸ್ತ್ರೀಲೋಕವನ್ನು ವಿಮರ್ಶಿಸದೆ ದೇವನೂರು ಮಹಾದೇವ ಹಾಗೂ ಅರವಿಂದ ಮಾಲಗತ್ತಿಯವರ ಸಾಹಿತ್ಯದಲ್ಲಿ ವ್ಯಕ್ತವಾದ ಮಹಿಳಾ ಅಭಿವ್ಯಕ್ತಿಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದೇನೆ. ಅದರಲ್ಲೂ ಅವರ ಸಮಗ್ರ ಕೃತಿಗಳನ್ನು ಈ ದೃಷ್ಟಿಯಲ್ಲಿ ವಿಮರ್ಶಿಸದೆ ದೇವನೂರರ ಕಥೆಗಳನ್ನು, 'ಒಡಲಾಳ' ಕಾದಂಬರಿಯನ್ನು, ಮಾಲಗತ್ತಿಯವರ 'ಕಾರ್ಯ' ಕಾದಂಬರಿ, 'ಗೌರ್ಮೆಂಟ್ ಬ್ರಾಹ್ಮಣ' ಕೃತಿಗಳನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ಬರವಣಿಗೆಗಳನ್ನು ಅದಕ್ಕೆ ಪೂರಕವಾಗಿ ಬಳಸಿಕೊಂಡಿದ್ದೇನೆ.

ಈ ಬಗ್ಗೆ ಚರ್ಚಿಸುವಾಗ ಕೆಲವು ಮುಖ್ಯ ಅಂಶಗಳನ್ನು ಇಲ್ಲಿ ಉಲ್ಲೇಖಿಸಬೇಕಾಗುತ್ತದೆ. ದಲಿತ-ಬಂಡಾಯ ಚಳುವಳಿಯ ಜೊತೆಯಲ್ಲೇ ಮಹಿಳಾಪರ ಚಿಂತನೆಯೂ ಬೆಳೆಯಿತು. ಒಂದು ರೀತಿಯಲ್ಲಿ ಶೂದ್ರ - ದಲಿತಪರ ಚಿಂತನೆಯ ಜೊತೆಯಲ್ಲೇ ಅದರ ಭಾಗವಾಗಿ ಕನ್ನಡ ಮಹಿಳಾವಾದವೂ ಬೆಳೆಯಿತು. ಅದುವರೆಗೆ ಮಹಿಳೆಯ ಶೋಷಣೆ ಮತ್ತು ಸಮಸ್ಯೆಗಳು ಸಾಹಿತ್ಯದಲ್ಲಿ ಚಿತ್ರಣಗೊಂಡಿದ್ದರೂ ಮಹಿಳಾಪರ ಚಿಂತನೆಯು ಒಂದು ತಾತ್ವಿಕ ರೂಪವನ್ನು ಪಡೆದಿರಲಿಲ್ಲ. ಮಹಿಳೆಯ ಪರ ಅನುಕಂಪ, ಸಹಾನುಭೂತಿಗಿಂತ ಅವಳ ಬದುಕಿನ ಹಕ್ಕಿನ ಕುರಿತಾದ ಪ್ರಜ್ಞೆ ಹುಟ್ಟಿ ಆ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆ, ವಿಮರ್ಶೆಗಳು ಬೆಳೆಯತೊಡಗಿದ್ದು ಈ ಕಾಲದಲ್ಲಿ. ಈ ದೃಷ್ಟಿಯಿಂದ ಮಹಿಳಾವಾದದ ಹಿನ್ನೆಲೆಯಲ್ಲಿ ಬಂಡಾಯ – ದಲಿತ ಬರಹಗಾರರು ಕನ್ನಡದ ಇತರ ಬರಹಗಾರರಿಗಿಂತ ಹೆಚ್ಚು ಮುಖ್ಯವಾಗುತ್ತಾರೆ. ಅವರು ಚಿತ್ರಿಸುವ ಮಹಿಳೆ ಮತ್ತು ಮಹಿಳಾಪರ ಕಾಳಜಿಗಳು ಹೆಚ್ಚು ಸೂಕ್ಷ್ಮವೂ, ವಾಸ್ತವವೂ ಆಗಿರುತ್ತವೆ. ಇದನ್ನು ವಿವರಿಸುವುದು ಈ ಪ್ರಬಂಧದ ಕಾಳಜಿಯಾಗಿದೆ.

ಬಂಡಾಯ ಮತ್ತು ದಲಿತ ಸಾಹಿತ್ಯ ಕೇವಲ ಸಾಹಿತ್ಯ ರಚನೆಗಳಿಗಷ್ಟೇ ಸೀಮಿತವಾಗದೆ ಚಳವಳಿಯಾಗಿ ಮೂಡಿಬಂದಿದೆ. ಮೇಲ್ವರ್ಗ, ಕೆಳವರ್ಗ, ಮೇಲ್ಜಾತಿ, ಕೆಳಜಾತಿಗಳೆಂಬ ಭೇದವು ವಿಶಾಲವಾದ ಅರ್ಥದಲ್ಲಿ ನಿಜವಾದರೂ 'ಮಹಿಳಾವಾದ'ದ ಪ್ರಶ್ನೆ ಬಂದಾಗ ಕೆಲವು ಮುಖ್ಯ ಸಮಸ್ಯೆಗಳು ಸಾಮಾನ್ಯವಾಗಿ ಎಲ್ಲಾ ವರ್ಗ - ಜಾತಿಗಳ ಮಹಿಳೆಯರ ಸಮಸ್ಯೆಯಾಗಿದೆ. ಅದನ್ನು ದಲಿತ - ಬಂಡಾಯ ಚಳವಳಿಗಳು ಒಪ್ಪಿಕೊಂಡು ಮಹಿಳಾ ಚಳವಳಿಯನ್ನು ತಮ್ಮ ಜೊತೆಗೆ ಬಲಪಡಿಸಿಕೊಂಡು ಬಂದಿವೆ. ಆದರೆ ಈ ಆಶಯವನ್ನು ವಿರೋಧಿಸುವ ರೀತಿಯಲ್ಲಿ ದೇವನೂರು ಮತ್ತು ಮಾಲಗತ್ತಿಯವರು ಮೇಲ್ವರ್ಗದ ಸ್ತ್ರೀಯರ ಪಾತ್ರಗಳನ್ನು ಚಿತ್ರಿಸಿದ್ದಾರೆ.

ಇದಕ್ಕೆ ಪೂರಕವಾಗಿ ಇಲ್ಲಿ ಧರಣೀದೇವಿ ಮಾಲಗತ್ತಿಯವರ ಲೇಖನದ ಕೆಲವು ವಾಕ್ಯಗಳನ್ನು ಉಲ್ಲೇಖಿಸುತ್ತಿದ್ದೇನೆ :

''ದಲಿತ ಕಾವ್ಯದಲ್ಲಿ ಹೆಣ್ಣು ತಾಯಿಯಾಗಿ ಪಡಿಮೂಡಿದಷ್ಟು ಬಹುಶಃ ಬೇರೆ ಯಾವ ರೂಪದಲ್ಲೂ ಚಿತ್ರಿತಳಾಗಿಲ್ಲ ಎಂದೇ ಹೇಳಬೇಕು. ಒಡಲಾಳದ ಸಾಕವ್ವ, 'ಗೌರ್ಮೆಂಟ್ ಬ್ರಾಹ್ಮಣ'ದ 'ಆಯಿ' ಇವರೂ ಈ ಮಾತಿಗೆ ಹೊರತಲ್ಲ. ತ್ಯಾಗಮಯಿ, ಸಹನಾಮಯಿ ಹೆಣ್ಣಿನ ಚಿತ್ರಣ ದಲಿತ ಸಾಹಿತ್ಯದಲ್ಲಿ ತಾಯಿಯ ರೂಪದಲ್ಲಷ್ಟೇ ಯಥೇಚ್ಛವಾಗಿ ಕಂಡುಬರುತ್ತದೆ...'' (ಪು. ೭೨, ಸ್ತ್ರೀವಾದ ಮತ್ತು ಭಾರತೀಯತೆ). ಧರಣೀದೇವಿ ಮಾಲಗತ್ತಿಯವರ ಈ ವಾದವನ್ನು ಒಪ್ಪಿಕೊಂಡು ಆ ಕುರಿತು ಮತ್ತಷ್ಟು ವಿಸ್ತರಿಸುತ್ತಾ ಸಾಮಾನ್ಯೀಕರಣಗೊಳಿಸಲು ಸಾಧ್ಯವಿದೆ.

ಒಡಲಾಳದ ಸಾಕವ್ವ, 'ಗೌರ್ಮೆಂಟ್ ಬ್ರಾಹ್ಮಣ'ದ ಆಯಿಯರ ಚಿತ್ರಣವು ಎಷ್ಟೋ ಸಂದರ್ಭಗಳಲ್ಲಿ ನನ್ನ ಪರಿಸರದಲ್ಲಿರುವ ಎಷ್ಟೋ ತಾಯಿಯರ ಬದುಕಿನಂತೆ ನನಗೆ ತಟ್ಟಿದೆ. ಕೆಲವೊಮ್ಮೆ ಸಾಕವ್ವನಲ್ಲಿ ನನ್ನ ತಾಯಿಯನ್ನು ನಾನು ಕಂಡುಕೊಂಡಿದ್ದಿದೆ. ಬಹುಶಃ ಒಬ್ಬ ಮೇಲ್ವರ್ಗದ ಪುರುಷನನ್ನು ಈ ರೀತಿ ದಲಿತ ಪುರುಷನೊಂದಿಗೆ ಖಂಡಿತ ಹೋಲಿಸುವಂತಿಲ್ಲ. ಈ ದೃಷ್ಟಿಯಿಂದ ಮಹಿಳೆಯ ಚಿತ್ರಣವು ಸಾಹಿತ್ಯದಲ್ಲಿ ವರ್ಗ - ಜಾತಿಯ ವಿಭಜನೆಗೆ ಹೆಚ್ಚು ಸೂಕ್ತವಾಗುವುದಿಲ್ಲ. ಇಲ್ಲಿ ಮತ್ತೆ ಧರಣೀದೇವಿ ಮಾಲಗತ್ತಿಯವರ ಮಾತುಗಳನ್ನು ಉಲ್ಲೇಖಿಸುತ್ತಿದ್ದೇನೆ : ''ಮೇಲ್ಜಾತಿಯ ಹೆಣ್ಣು ದಲಿತ ಸಾಹಿತ್ಯದಲ್ಲಿ ಬರುವುದು ರಾಕ್ಷಸಿಯ ರೂಪದಲ್ಲಿ. ಸ್ವಾರ್ಥಿಯಾಗಿ, ಹೇಡಿಯಾಗಿ, ಅವಕಾಶವಾದಿಯಾಗಿ ಇಂಥ ಹೆಣ್ಣು ಕಾಣಸುತ್ತಾಳೆ.'' (ಪು. ೭೨). ಧರಣಿಯವರ ಈ ವಾದವನ್ನು ಒಪ್ಪಬಹುದಾಗಿದೆ. ಯಾಕೆಂದರೆ ದೇವನೂರು ಮತ್ತು ಮಾಲಗತ್ತಿಯವರ ಕೃತಿಗಳಲ್ಲಿ ಈ ರೀತಿಯ ಚಿತ್ರಣವು ಯಥೇಚ್ಛವಾಗಿ ಕಂಡುಬರುತ್ತದೆ. ಉದಾಹರಣೆಗೆ, ದೇವನೂರು ಮಹಾದೇವರ 'ಗ್ರಸ್ತರು' ಕಥೆಯ ನಾಯಕನ ಪ್ರೇಯಸಿ ಮೇಲ್ಜಾತಿಯ ಹೆಣ್ಣು ಯಾವ ಕಾರಣವೂ ಇಲ್ಲದೆ ದೂರವಾಗಿದ್ದಾಳೆ. 'ಮೂಡಲ ಸೀಮೇಲಿ ಕೊಲೆ - ಗಿಲೆ ಮುಂತಾಗಿ' ಕಥೆಯಲ್ಲಿ ರಂಗಪ್ಪನಂಥ ದಲಿತರು ಹಸಿವಿನಿಂದ ಕುಸಿಯುತ್ತಾರೆ. ಆದರೆ ರಂಗಪ್ಪನ ಹಸಿವಿನ ಎದುರು ಗೌಡನ ಪತ್ನಿ ಗೌರಮ್ಮನ ಚಿತ್ರಣ ರಾಕ್ಷಸಿಯ ಚಿತ್ರಣದಂತೆ ಗೋಚರಿಸುತ್ತದೆ. ಮಾಲಗತ್ತಿಯವರ 'ಗೌರ್ಮೆಂಟ್

ಬ್ರಾಹ್ಮಣ'ದಲ್ಲಿ ಬರುವ 'ಮಾಜಿ ಪ್ರೇಯಸಿ' ಮತ್ತು 'ಭವಿಷ್ಯತ್ತಿನೊಂದಿಗೆ ಚೆಲ್ಲಾಟವಾಡುವ ಹುಡುಗಿಯರು' - ಪಾತ್ರಗಳು ಮೇಲ್ಜಾತಿಯ ಸ್ವಾರ್ಥಿ ಮತ್ತು ಸ್ವಚ್ಛಂದ ಹೆಣ್ಣುಮಕ್ಕಳ ಪಾತ್ರ ಚಿತ್ರಣದಂತೆ ಅಭಿವ್ಯಕ್ತಗೊಂಡಿವೆ. ಹೀಗೆ ಮೇಲ್ಜಾತಿಯ ಮಹಿಳೆಯರನ್ನು ರಾಕ್ಷಸಿ ಮತ್ತು ಸ್ವಾರ್ಥಿಗಳಂತೆ ಚಿತ್ರಿಸಿರುವುದು ದಲಿತ - ಬಂಡಾಯ ಚಳವಳಿ ಮತ್ತು ಮಹಿಳಾವಾದದ ಮೂಲ ಆಶಯಕ್ಕೆ ವಿರುದ್ಧವಾಗಿದೆ.

ಸಾಮಾಜಿಕ ಸಂಪ್ರದಾಯ, ಆಚರಣೆಗಳು ಹೆಣ್ಣಿನ ಬದುಕಿನ ಮೇಲೆ ಪರಿಣಾಮ ಬೀರುವುದು ಮಾತ್ರವಲ್ಲ, ಆಕೆಯ ವ್ಯಕ್ತಿತ್ವವನ್ನು ನಾಶಮಾಡಿ ಶೋಷಣೆಗೆ ದಾರಿಯಾಗುತ್ತದೆ ಎಂಬುದನ್ನು ದೇವನೂರು ಮತ್ತು ಮಾಲಗತ್ತಿಯವರ ಕೃತಿಗಳು ಮುಖ್ಯವಾಗಿ ಧ್ವನಿಸುತ್ತವೆ. ಆದರೆ ಇದು ನೇರವಾಗಿ ಅಭಿವ್ಯಕ್ತಿಯಾಗದೆ ಕಲಾತ್ಮಕವಾಗಿ ಮತ್ತು ಪ್ರತಿಮಾತ್ಮಕವಾಗಿ ವ್ಯಕ್ತವಾಗುವುದು ಅವರ ಬರವಣಿಗೆಯ ಹೆಚ್ಚುಗಾರಿಕೆ. ಇದನ್ನು ಪ್ರೊ|| ಬಿ. ಎ. ವಿವೇಕ ರೈಯವರು ಹೀಗೆ ಗುರುತಿಸುತ್ತಾರೆ: ''ದಲಿತ ಸಂಸ್ಕೃತಿಯ ಪದ್ಧತಿಗಳು ಮತ್ತು ಆಚರಣೆಗಳು ಕೆಲವರ ಪಾಲಿಗೆ ಮಾತ್ರ ಉಲ್ಲಂಘಿಸಲು ಆಗದಂತಹವು. ಒಡಪಾಯಿಗಳು ಮತ್ತು ಹೆಂಗಸರು ಈ ವರ್ಗಕ್ಕೆ ಸೇರುತ್ತಾರೆ. ಸಮಾಜದ ಮುಂದಾಳುಗಳು, ಹಿರಿಯರು, ಪಂಚರು ಈ ಸಮಾಜದ ನ್ಯಾಯವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ಧರಿಸುತ್ತಾರೆ, ಬದಲಾಯಿಸುತ್ತಾರೆ. ಇವರಿಗೆ 'ಸಂಪ್ರದಾಯ' ಎಂಬ ಹೆಸರಿನ ರಕ್ಷೆ ಇದೆ. ಈ ಅರ್ಥದಲ್ಲಿ ದಲಿತ ಸಮಾಜವೊಂದರ ಒಳಗೆಯೇ ಹೆಂಗಸರು ಮತ್ತು ದುರ್ಬಲರು ಶೋಷಣೆಗೆ ಒಳಗಾಗುತ್ತಾರೆ ಎಂಬುದನ್ನು 'ಕಾರ್ಯ'ದ ಬೇರೆ ಬೇರೆ ಸನ್ನಿವೇಶಗಳಲ್ಲಿ ಪ್ರಕಟಿಸಲಾಗಿದೆ. ಸೆರೆ ಮತ್ತು ನ್ಯಾಯಗಳನ್ನು ತಮ್ಮದನ್ನಾಗಿಸಿಕೊಂಡ ಸಮಾಜದ ಹಿರಿಯರು ಸಮಾಜದ ಉಳಿದವರನ್ನು (ಸಂಪ್ರದಾಯ, ಆಚರಣೆಗಳ ಹೆಸರಿನಲ್ಲಿ) ದಂಡಿಸುವ, ನಿಯಂತ್ರಿಸುವ ಕೆಲಸವನ್ನು ಧಾರಾಳವಾಗಿ ಮಾಡುತ್ತಾರೆ.''

ದೇವನೂರು ಮತ್ತು ಮಾಲಗತ್ತಿಯವರ ಕೃತಿಗಳಲ್ಲಿ ಸಂಬಂಧಗಳ ಅಭಿವ್ಯಕ್ತಿ ವೈಭವೀಕರಣವಿಲ್ಲದೆ ವಾಸ್ತವವಾಗಿ ಮೂಡಿಬಂದಿದೆ. ಇದಕ್ಕೆ ಪೂರಕವಾಗಿ ಕೆಲವು ಉದಾಹರಣೆಗಳನ್ನು ಗಮನಿಸಬಹುದಾಗಿದೆ.

ಮಾಲಗತ್ತಿಯವರ 'ಮೂಕನಿಗೆ ಬಾಯಿ ಬಂದಾಗ' ಕವನ ಸಂಕಲನದ 'ಭಾರತಾಂಬೆಗೆ' ಎಂಬ ಕವನದಲ್ಲಿ ಬರುವ ಸಾಲುಗಳಿವು :

ನಿನ್ನ ಉಡ್ಯಾಗದಿವೆಂದ ಮ್ಯಾಲಿ
ನಾವು ನಿನ್ನ ಮಕ್ಕಳ
ನಮಗೂ ಹಕ್ಕು ಐತಿ ಕೇಳ್ತೀವಿ
ಮಕ್ಕಳನ್ನೋ ಕರುಣಾ ಇದ್ರ, ಬಾ ನಮ್ಮ ಜೋಡಿ
ತಗದೊಗಿ ಯಾರಿಗೆ ಬೇಕು ನಿನ್ನ ಆಶೀರ್ವಾದದ ಹಸ್ತ.

ಇಲ್ಲಿ ಸಾಮಾಜಿಕ ಅರಿವಿನ, ಸಾಮಾಜಿಕ ನ್ಯಾಯದ ನಿಲುವನ್ನು ಗಮನಿಸಬಹುದು. ಜೊತೆಗೆ ಅವ್ವನೊಂದಿಗೆ ಆತ್ಮೀಯತೆಯ ಸಲುಗೆಯಿಂದ ಪಾಲು ಕೇಳುವ ರೀತಿ, ತಾಯಿಯೊಂದಿಗೆ ಸಿಟ್ಟನ್ನು ವ್ಯಕ್ತಪಡಿಸುವ ನೆಲೆ, ತಾಯಿ - ಮಗನ ಸಂಬಂಧದ ಇನ್ನೊಂದು ಎಳೆಯನ್ನು ಪರಿಚಯಿಸುತ್ತದೆ. ಸಿಟ್ಟಿನಲ್ಲಿ ಕೇಳುವಲ್ಲಿ 'ತಾಯಿ' ಮೇಲೆ ಗೌರವ - ಆದರ ಇಲ್ಲ ಎಂಬ ಭಾವನೆಯಿರದೇ ಹೆಚ್ಚು ಆತ್ಮೀಯತೆ ಇದೆ ಎನ್ನುವುದನ್ನು ಗಮನಿಸಬಹುದಾಗಿದೆ. ಅದೇ ರೀತಿ ದೇವನೂರರ 'ಒಡಲಾಳ'ದ ಸಾಕವ್ವನ ಜತೆಗೆ ಆಸ್ತಿಯ ಹಕ್ಕು ಕೇಳುವ ಅವಳ ಮಗನ ವಿಷಯದಲ್ಲೂ ಇದೇ ರೀತಿಯ ಅಭಿಪ್ರಾಯ ವ್ಯಕ್ತವಾಗುತ್ತದೆ. 'ತಾಯಿಗೆ' ಪೂಜನೀಯ ಸ್ಥಾನ ನೀಡಿ ಅವಳ ಮತ್ತು ಮಕ್ಕಳ ನಡುವೆ 'ಅಂತರ'ವನ್ನು ನಿರ್ಮಿಸುವದಕ್ಕಿಂತ ಭಿನ್ನವಾಗಿ ಬೈದಾಡಿ, ಜಗಳಾಡಿ ತಾಯಿ-ಮಕ್ಕಳ ಸಂಬಂಧದ ನಡುವೆ ಹೆಚ್ಚು ಅರ್ಥವಂತಿಕೆ, ಆತ್ಮೀಯತೆಗಳನ್ನು ಒಡಮೂಡಿಸುವ ನೈಜ ಚಿತ್ರಣಗಳಿವೆ. ಹಾಗೆಯೇ 'ಸ್ತ್ರೀ'ಯನ್ನು ಕೇಂದ್ರವಾಗಿಟ್ಟುಕೊಂಡು 'ತಾಯಿ', 'ನೆಲ', 'ಭೂಮಿ', ಎಂಬ ಪರ್ಯಾಯ ವ್ಯವಸ್ಥೆಗೆ ಹೋಲಿಸಿ ಅಧಿಕಾರ, ಆರ್ಥಿಕ ಸಂಪನ್ಮೂಲತೆ ಅವಳಲ್ಲಿದೆ ಎಂಬುದನ್ನು ತೋರಿಸುತ್ತಿರುವುದರಿಂದಾಗಿ ಇಲ್ಲಿ ಪುರುಷ ದ್ವಿತೀಯ ದರ್ಜೆಯವನಾಗಿಬಿಡುತ್ತಾನೆ.

## ಪ್ರೀತಿಯ ವೈರಿಗೆ

ಬೀದಿಯಲ್ಲೇ ಉಳಿದು
ಹೋಗಬೇಕೀಗ ನೀನು
ನೋಡುವವರು ಯಾರಿಲ್ಲವೆಂದು
ಸದ್ದಿಲ್ಲದೆ ಕತ್ತಲಲಿ
ಒಳಗೆ ಬರಬೇಡ

ಬಹುಕಾಲದಿಂದಲೂ ಕೂಡಿಟ್ಟ
ನಮ್ಮ ಎದೆಯ
ತಂಗಾಳಿಯನು ಕದ್ದೊಯ್ಯಬೇಡ,
ಎಳೆಯ ಮಕ್ಕಳು
ಬಚ್ಚಿಟ್ಟುಕೊಂಡ
ಪಾರಿವಾಳಗಳ ಗರಿಗೆ
ಬೆಂಕಿ ಹೊತ್ತಿಸಬೇಡ

ದೇವರ ಭಾವಚಿತ್ರದ
ಹಿಂದೆ ಕಟ್ಟಿದ ಗುಬ್ಬಿಗಳ
ಗೂಡಲ್ಲಿ ಗದ್ದಲವೆಬ್ಬಿಸಬೇಡ,
ಗೊತ್ತಾಗದಂತೆ ನಾಜೂಕಿನಲಿ
ನುಸುಳಿ ಮೈಯ್ಯೊಳಗೆ
ದ್ವೇಷ ಬಿತ್ತಬೇಡ
ವಿಷವ ಕಕ್ಕಬೇಡ

ಇರುಳ ಈ ಕತ್ತಲಲಿ
ಕಾಣಿಸದಂತೆ ಯಾರಿಗೂ
ಒಳ ನುಸುಳುವ
ಹೊಂಚು ಹಾಕಿದ್ದರೆ ಮರೆತುಬಿಡು,
ನಾವು ಕಣ್ಮುಚ್ಚಿ
ಮಲಗಿರುವುದು ನಿಜ
ಇನ್ನೂ ನಿದ್ರಿಸುತ್ತಿಲ್ಲ!

ಗಣೇಶ ಹೊಸ್ಮನಿ
[illegible]
[illegible] (ಉ.ಕ.)



ಮಾಲಗತ್ತಿಯವರ 'ಮೂಕ ಮಾತನಾಡಿದಾಗ' ಕವನದಲ್ಲಿ

ಹಡಿಲಾರದಕ್ಕೆ ಬ್ಯಾನಿ
ಹಡೆದಕ್ಕೇನ ಗೊತ್ತು ?
ಒದ್ದಗೊಂಡವ ಬ್ಯಾನಿ
ಒದ್ದವ್ರಗೇನ ಗೊತ್ತು

ಎಂದಾಗ ಪಾರಂಪಾರಿಕವಾದ ಯೋಚನಾಕ್ರಮವನ್ನು ಮೀರುವ ಬಗೆಯನ್ನು ಕಾಣಬಹುದಾಗಿದೆ. ಇದಕ್ಕೆ ಪೂರಕವಾಗಿ ಅಕ್ಕಮಹಾದೇವಿಯ ಈ ಕೆಳಗಿನ ವಚನದೊಂದಿಗೆ ಈ ಕವನವನ್ನು ತೌಲನಿಕವಾಗಿ ನೋಡಬಹುದಾಗಿದೆ.

ಬಂಜೆಯು ನೋವ ಬಲ್ಲಳೇ
ಮಲತಾಯಿ ಮುದ್ದ ಬಲ್ಲಳೇ
ನೊಂದ ನೋವ ನೋಯದವರೆತ್ತ ಬಲ್ಲರು ?

ಅಕ್ಕಮಹಾದೇವಿಯ ಇಂತಹ ವಚನಗಳಲ್ಲಿ ಸೂಕ್ಷ್ಮವಾದ ಸ್ತ್ರೀ ಸಂವೇದನೆ, ಸ್ತ್ರೀಪರ ಕಾಳಜಿ ವ್ಯಕ್ತವಾದರೂ 'ಬಂಜೆ ನೋವ ತಿಳಿಯಲಾರಳು' ಎಂಬಲ್ಲಿ ಸಾಂಪ್ರದಾಯಿಕವಾಗಿ ನಮ್ಮ ಪರಂಪರೆಯಲ್ಲಿ ಹೆಣ್ಣಿನ ಹೆರುವ ಕ್ರಿಯೆಯ ಮೂಲಕ ಅದನ್ನೊಂದು ಅದ್ಭುತವನ್ನಾಗಿ ಪರಿಗಣಿಸಿರುವುದು ತನ್ಮೂಲಕ ಮಕ್ಕಳನ್ನು ಹೆತ್ತಿಲ್ಲವೆಂಬ ಕಾರಣಕ್ಕೆ, ಅದಕ್ಕೆ ಕಾರಣ ಪುರುಷನಿದ್ದರೂ ಕೂಡ ಹೆಣ್ಣನ್ನೇ 'ಬಂಜೆ' ಎಂದು ಆರೋಪಿ ಸ್ಥಾನದಲ್ಲಿ ನಿಲ್ಲಿಸಿ ಕಟಕಿ, ವ್ಯಂಗ್ಯದ ನುಡಿಗಳ ಮೂಲಕ ಅಪಮಾನಿಸುವ ಪ್ರಕ್ರಿಯೆಯನ್ನು ಗಮನಿಸಬಹುದು.




ಮಕ್ಕಳಿಲ್ಲದವರ ಬಾಳು ಬಾಳೆಲೆಯಲ್ಲಿ ಹಾಸುಂಡು ಬೀಸಿ ಒಗೆದ್ಹಂಗ ಎಂಬ ಜನಪದದ ನಿಲುವಿನಲ್ಲೂ ಬಂಜೆಯ ಬಾಳು ನಿರರ್ಥಕ ಎಂದು ವಾದಿಸುವ ಪ್ರವೃತ್ತಿ ಇರುವುದನ್ನು ಮನಗಾಣಬಹುದು. ಹೀಗಿರುವಾಗ ಮಾಲಗತ್ತಿಯವರು ನೊಂದವರ ನೋವನ್ನು ಪ್ರತಿಮೀಕರಿಸುವ ವಿಧಾನ ಅದ್ಭುತವಾಗಿದೆ. ಹಡೆದಾಕೆಯ ಹೆರುವ ನೋವಿಗಿಂತ ಅಧಿಕತಮವಾಗಿ ಹಡೆಯಲಾರದಾಕೆ ಸಮಾಜದಿಂದ ಅಪಮಾನಗೊಂಡು ಪಡುವ ವೇದನೆ ಅಧಿಕವಾದುದು. ಆ ವೇದನೆಗೆ ತುಳಿತಕ್ಕೊಳಗಾದವರ ನೋವನ್ನು ಸಮೀಕರಿಸಿ ಕಾವ್ಯಾತ್ಮಕವಾಗಿ ಕಟ್ಟಿರುವುದು ಅವರ ಸ್ತ್ರೀಪರ ಸಂವೇದನೆಗೆ ಮುಖ್ಯ ಉದಾಹರಣೆಯಾಗಿದೆ.

ಮಾಲಗತ್ತಿಯವರ 'ಕಾರ್ಯ' ಕಾದಂಬರಿಯಲ್ಲಿ ಬಂಗಾರವ್ವನ ಸ್ಮಶಾನಯಾತ್ರೆಯ ಸಂದರ್ಭದಲ್ಲಿನ ಅಕ್ಕವ್ವನ ಪರಿಸ್ಥಿತಿ ದಲಿತ ಜಗತ್ತಿನ ಒಳಗಡೆಯೇ ಹಸಿವಿನ ಭೀಕರತೆಯನ್ನು ವಾಸ್ತವನೆಲೆಯಲ್ಲಿ ಅದ್ಭುತವಾಗಿ ಹಿಡಿದಿಟ್ಟಿದೆ. "... ಕಾರ್ಯಕ್ಕೆ ಹೊರಟ ಹೆಂಗಸರ ತಂಡದಲ್ಲಿ ಅಕ್ಕವ್ವ ತನ್ನ ಕೈಯಲ್ಲಿರುವ ತುಂಬಿದ ತಂಬಿಗೆಯನ್ನು ಬೇರೊಬ್ಬಳ ಕೈಯಲ್ಲಿ ಕೊಟ್ಟು ಗಕ್ಕನೆ ನಿಂತುಬಿಟ್ಟಳು. ಅತ್ತು ಜೋತುಬಿದ್ದ ಮುಖ ಕುಂಬಳಕಾಯಿಯಷ್ಟು ಅಗಲಾಯಿತು. ತಾನು ಕಾಯುವ ಎಮ್ಮೆ ಕಳದ್ಹೋಗಿ ಮೂರು ತಿಂಗಳಾಗಿತ್ತು. ಅದಕ್ಕಾಗಿ ಬಳ್ಳಿದ ಅಕ್ಕವ್ವ ಎಮ್ಮೆಯ ಕೋಡಿನ ಆಕಾರದ ಅದರ ಕೊಂಬೆಣಸು ನೋಡಿ ಗುರುತಿಸಿದಳು. ಒಂದು ಕ್ಷಣ ಸತ್ತ ಬಂಗಾರೆವ್ವಳನ್ನು ನೆನೆದು ಎಮ್ಮೆಗಾಗಿ ಹಿಂದಿರುಗಿದಳು. ಮತ್ತೆ ಮನೆಗೆ ಬರುತ್ತೋ ಇಲ್ಲವೋ ಎನ್ನುವ ಸಂಶಯದಿಂದ ಇದನ್ನು ನೋಡಿದ ಕೆಲ ಹೆಂಗಸರು ಮೂಗು ಮುರಿಯುತ್ತ ಮುಂದೆ ಬರುತ್ತಿದ್ದರು" *(ಪು. ೬೧)*.

ಇಂಥದೇ ದಲಿತ ಬದುಕಿನ ಹಸಿವಿನ ದಾರುಣತೆಯನ್ನು ಅದರೆಲ್ಲಾ ವಾಸ್ತವದೊಂದಿಗೆ ಅತ್ಯಂತ ಸಮರ್ಥವಾಗಿ ದೇವನೂರರ 'ಒಡಲಾಳ' ಕಾದಂಬರಿಯು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ದೇವನೂರರ ಕಥೆಗಳಲ್ಲೂ ಇಂಥ ಮನಕಲಕುವ ಅನೇಕ ಚಿತ್ರಣಗಳಿವೆ. 'ಒಡಲಾಳ' ಕಾದಂಬರಿಯಲ್ಲಿ ಇದ್ದುದರಲ್ಲೇ ಸ್ವಲ್ಪ ಸ್ಥಿತಿವಂತರೆನ್ನಬಹುದಾದ ಸಣ್ಣಯ್ಯನ ಶ್ರೀಮಂತಿಕೆ ಎಂದರೆ "ಸಣ್ಣಯ್ಯನ ಮೂರು ಮಕ್ಕಳು ಒಂದರ ಕಾಲ ಇನ್ನೊಂದರ ಮೇಲಾಕಿ ಬಿದ್ದಿದ್ದವು. ಅವುಗಳು ಹೊದ್ದಿದ್ದ ಹೊಸ ದುಪ್ಪಟ್ಟ ಮೂವರನ್ನು ಹೊದ್ದುಕೊಳ್ಳಲು ತನ್ನ ಶಕ್ತನುಸಾರ ಯತ್ನಿಸುತ್ತಿತ್ತು." ಜತೆಗೆ ಕಳೆದುಹೋದ ಹುಂಜವನ್ನು ಸಾಕವ್ವ ತನ್ನ ಸವತಿ ಕೆಂಪಮ್ಮನ ತಿಪ್ಪೆಯಲ್ಲಿ ಹುಡುಕುವ ರೀತಿಯಂತೂ ಅತ್ಯಂತ ವಾಸ್ತವವಾಗಿ ಬಡತನದ ದಾರುಣತೆಯನ್ನು ಪರಿಚಯಿಸುತ್ತದೆ. ಇಡೀ ಕಾದಂಬರಿಯೇ ಒಡಲಿನ ಆಳದ ಹಸಿವನ್ನು ಅತ್ಯಂತ ಸಮರ್ಥವಾಗಿ ಧ್ವನಿಸಿದೆ.

ದಲಿತ ಸಾಹಿತ್ಯದ ಒಂದು ಮುಖ್ಯ ಮಿತಿ ಎಂದರೆ ದಲಿತ ಬರಹಗಾರರು ಬರೆದಷ್ಟು ಸಂಖ್ಯೆಯಲ್ಲಿ ಮಹಿಳಾ ಲೇಖಕಿಯರು ಬರೆದಿಲ್ಲ, ಇದರಿಂದ ಮಹಿಳಾಪರ ಕಾಳಜಿಯ ನಡುವೆಯೂ ಪುರುಷಕೇಂದ್ರಿತ ಯೋಚನಾಕ್ರಮ ಅಲ್ಲಲ್ಲಿ ವ್ಯಕ್ತವಾಗುವುದನ್ನು ಗುರುತಿಸಬಹುದು. ಇದು ಅಪ್ರಜ್ಞಾಪೂರ್ವಕವಾಗಿ ಮಾಡಿದ್ದರೂ ಲೇಖಕಿಯರೂ ಚಳವಳಿಯ ಒಂದು ಭಾಗವಾದಾಗ ಹೆಚ್ಚು ಸಮರ್ಪಕವಾಗಿ ಸಮಾನತೆಯನ್ನು ಆಲೋಚಿಸಲು ಸಾಧ್ಯ ಎಂಬ ದೃಷ್ಟಿಯಿಂದ ಇದನ್ನು ಉಲ್ಲೇಖಿಸುತ್ತಿದ್ದೇನೆ.

ದೇವನೂರರ ಮತ್ತು ಮಾಲಗತ್ತಿಯವರ ಕೃತಿಗಳ ಶೀರ್ಷಿಕೆಯನ್ನು ಗಮನಿಸಿದರೂ 'ಮೂಕನಿಗೆ ಬಾಯಿ ಬಂದಾಗ', 'ಗೌರ್ಮೆಂಟ್ ಬ್ರಾಹ್ಮಣ', 'ಗ್ರಸ್ತರು', 'ದತ್ತ' ಇಲ್ಲೆಲ್ಲಾ ಪುರುಷಕೇಂದ್ರಿತ ಅನುಭವಗಳೇ ಕೃತಿಯ ಜೀವಾಳವಾಗಿವೆ. ಮಾಲಗತ್ತಿಯವರಿಗಿಂತ ಸ್ವಲ್ಪ ಭಿನ್ನವಾಗಿ ಮಹಾದೇವ ಅವರ 'ಕುಸುಮಬಾಲೆ' ಹಾಗೂ ಸ್ತ್ರೀ - ಪುರುಷರ ಸಮಸ್ಯೆಗಳ ಪರವಾಗಿ ನಿಲ್ಲುವ 'ಮಾರಿಕೊಂಡವರು', 'ಒಡಲಾಳ', 'ಡಾಂಬರು ಬಂದುದು', 'ಮೂಡಲ ಸೀಮೇಲಿ ಕೊಲೆ - ಗಿಲೆ ಮುಂತಾಗಿ', ಬರಹಗಳು ಸ್ವಲ್ಪಮಟ್ಟಿಗೆ ಸ್ತ್ರೀಯರ ಬದುಕಿನ ಅನುಭವಗಳ ಹಿನ್ನೆಲೆಯಲ್ಲೂ ನೋಡುವ ಬಗೆಯದಾಗಿವೆ. ಆದರೆ ವ್ಯಾಪಕವಾಗಿ ಗಮನಿಸಿದರೆ ಪುರುಷ ದೃಷ್ಟಿಕೋನದ ಹಿನ್ನೆಲೆಯಲ್ಲೇ ಸ್ತ್ರೀ ಬದುಕಿನ ಸಂವೇದನೆಗಳು ಅರಳಿವೆ. ಇದಕ್ಕೆ ಪೂರಕವಾಗಿ ಶಿಕ್ಷಣದ ಮೂಲಕ ದಲಿತ ಜಗತ್ತಿನ ಶೋಷಣೆಯ ತೆರೆ ಸರಿಯಲು ಸಾಧ್ಯ ಎಂಬ ಪ್ರಜ್ಞೆಯೂ ಇವರ ಬರಹಗಳಲ್ಲಿ ಕಾಣಿಸಿಕೊಳ್ಳುತ್ತದೆ. ಶಿಕ್ಷಣ ಪಡೆದ ದಲಿತ ಮಹಿಳೆ ಬದಲಾಗಬಹುದೆಂಬ ಸೂಚನೆ ಸೂಕ್ಷ್ಮವಾಗಿ 'ಒಡಲಾಳ'ದ ಪುಟ್ಟಗೌರಿ ಪಾತ್ರ ಸಾಂಕೇತಿಸಿದರೆ ಉಳಿದಂತೆ ಇವರಿಬ್ಬರ ಬರಹಗಳಲ್ಲಿ ಬದಲಾವಣೆಯ ಗಾಳಿಯನ್ನು ವಿದ್ಯಾವಂತ ಪುರುಷ ಪಾತ್ರಗಳೇ ತರುತ್ತವೆ ಎಂಬ ಧೋರಣೆ ಇದೆ. 'ಒಡಲಾಳ'ದ ಶಿವು, 'ಕಾರ್ಯ'ದ 'ಸೂರ್ಯಕಾಂತ', 'ಗ್ರಸ್ತರು' ಕಥೆಯ ಕೆಲಸ ಗಿಟ್ಟಿಸಿಕೊಂಡ ಶಿಕ್ಷಣ ಪಡೆದ ನಾಯಕ ತನ್ನ ತಾಯಿಗೆ "ಈಗ ನಾವು ಬದ್ಕಿದೇವಾ ?" ಎಂದು ಶೋಷಣೆಯ ಬವಣೆಯಲ್ಲಿ ಬದುಕಿಯೂ ಸತ್ತಂತಿರುವ ತಮ್ಮ ಬದುಕಿನ ಬಗ್ಗೆ ಚೂಪಾಗಿ ಪ್ರಶ್ನಿಸುವ ಮನೋಭಾವದಲ್ಲೆಲ್ಲಾ ಶಿಕ್ಷಣ ಪಡೆದ ದಲಿತರ ಪ್ರಜ್ಞಾವಂತಿಕೆಯನ್ನೇ ಈ ಲೇಖಕರು ತಮ್ಮ ಕೃತಿಗಳಲ್ಲಿ ಹಿಡಿದಿಟ್ಟಿರುವುದನ್ನು ಮನಗಾಣಬಹುದಾಗಿದೆ.

ಒಟ್ಟಿನಲ್ಲಿ, ದೇವನೂರು ಮತ್ತು ಮಾಲಗತ್ತಿಯವರು ದಲಿತ ಹೆಣ್ಣಿನ ಎರಡು ರೀತಿಯ ಚಿತ್ರಣಗಳನ್ನು ಮುಂದಿರಿಸುತ್ತಾರೆ. ಒಂದು, ಸಾಮಾಜಿಕ ಸಮಸ್ಯೆಗಳಿಂದ ಜರ್ಜರಿತವಾದ ರೋಗಿಷ್ಠ ಸ್ಥಿತಿಯಲ್ಲಿರುವ ಹೆಣ್ಣು. ಎರಡು, ಇಡೀ ಮನೆಯ ಜವಾಬ್ದಾರಿಯನ್ನು ವಹಿಸಿಕೊಂಡು ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವ ಅತೀವ ಛಲವಾದಿ ಹೆಣ್ಣು. ಅಂದರೆ, ಇಡೀ ಆರ್ಥಿಕ ವ್ಯವಸ್ಥೆ ಮತ್ತು ಕುಟುಂಬ ಆಕೆಯಿಂದ ನಿಯಂತ್ರಿತವಾಗುತ್ತದೆ. ಆಕೆಯ ಎದುರು ಪುರುಷ ದುರ್ಬಲನಾಗಿ ಕಾಣುತ್ತಾನೆ. ಉದಾಹರಣೆಗೆ, 'ಒಡಲಾಳ'ದ ಸಣ್ಣಯ್ಯ, 'ಮಾರಿಕೊಂಡವರು' ಕಥೆಯ ಬೀರ, 'ಗೌರ್ಮೆಂಟ್ ಬ್ರಾಹ್ಮಣ'ದ ಮಾಜಿ ಪ್ರೇಯಸಿಯ ಪ್ರಿಯತಮ ಮೊದಲಾದವರು. ಕುವೆಂಪು ಮೊದಲಾದ ಲೇಖಕರು ಚಿತ್ರಿಸುವ ಸಂದರ್ಭದಲ್ಲಿ ದಲಿತ ಹೆಣ್ಣು ಮೇಲ್ಜಾತಿಯ ಗಂಡಸರ ಕಾಮಕ್ಕೆ ಬಲಿಯಾದುದರ ಚಿತ್ರಣಗಳನ್ನು ನೀಡಿದರೆ ಮಾಲಗತ್ತಿ - ಮಹಾದೇವರಲ್ಲಿ ಮೇಲ್ಜಾತಿಯ ಹೆಣ್ಣು ದಲಿತ ಗಂಡನ್ನು ಬಳಸಿಕೊಂಡ ಪರಿಯನ್ನು ನೀಡುತ್ತಾರೆ. ತನ್ಮೂಲಕ ದಲಿತರಿಗೆ ಮೇಲ್ಜಾತಿಯ ಗಂಡಿನಿಂದ ಮಾತ್ರವಲ್ಲ ಮೇಲ್ಜಾತಿಯ ಹೆಣ್ಣಿನಿಂದಲೂ ಶೋಷಣೆ ನಡೆಯುತ್ತದೆ ಎಂಬುದನ್ನು ಚಿತ್ರಿಸುತ್ತಾರೆ.

ಈ ಮೇಲಿನ ಚರ್ಚೆ ದೇವನೂರು ಮತ್ತು ಮಾಲಗತ್ತಿಯವರ ಕೃತಿಗಳಲ್ಲಿ ವ್ಯಕ್ತವಾದ ಹೆಣ್ಣಿನ ಚಿತ್ರಣದ ಕೆಲವು ಒಳನೋಟಗಳು ಮಾತ್ರ. ಅವುಗಳ ವಿವರವಾದ ವಿಶ್ಲೇಷಣೆಗೆ ಇಲ್ಲಿ ಹೆಚ್ಚು ಗಮನ ನೀಡಿಲ್ಲ ಎಂಬುದನ್ನು ಒಪ್ಪಿಕೊಳ್ಳಬಹುದು. ಅದರೊಂದಿಗೆ ಸಮಗ್ರ ದಲಿತ ಸಾಹಿತ್ಯದಲ್ಲಿ ಚಿತ್ರಿತವಾದ ಹೆಣ್ಣಿನ ಸ್ವರೂಪದ ಚಿತ್ರಣದ ಆಳವಾದ ಸಂಶೋಧನೆಯಾಗಬೇಕು. ನಾನು ಆರಂಭದಲ್ಲಿ ಹೇಳಿದಂತೆ ದಲಿತ ಸ್ತ್ರೀಯರನ್ನು ಅರ್ಥ ಮಾಡಿಕೊಳ್ಳಲು, ಮೀಸಲಾತಿಯಂಥ ವಿಷಯಗಳಲ್ಲಿ ಖಚಿತವಾದ ನಿಲುವನ್ನು ತಾಳಲು ಅವು ನಮಗೆ ತಾರ್ಕಿಕ ಸಹಾಯ ನೀಡುತ್ತವೆ.

ಡಾ॥ ನಿಕೇತನ
ಶಾಲಿನಿಕೇತನ, ನಾಯರ್‌ಕೆರೆ ಮೊದಲ ಅಡ್ಡರಸ್ತೆ, ಅಂಬಲಪಾಡಿ ಪೋಸ್ಟ್, ಉಡುಪಿ



# ಬಹುರಾಷ್ಟ್ರೀಯ ಕಂಪನಿಗಳ ಕರಾಮತ್ತು

**ಕೇಂ**ದ್ರದಲ್ಲಿ ಆಡಳಿತ ನಡೆಸುತ್ತಿದ್ದ ಕಾಂಗ್ರೆಸ್ ಸರ್ಕಾರ ೧೯೯೧ ರಲ್ಲಿ ಆರ್ಥಿಕ ಉದಾರೀಕರಣ ನೀತಿಯನ್ನು ಒಪ್ಪಿಕೊಂಡು ಬಹುರಾಷ್ಟ್ರೀಯ ಕಂಪನಿಗಳಿಗೆ ಭಾರತದಲ್ಲಿ ವ್ಯಾಪಾರ ವಹಿವಾಟು ನಡೆಸಲು ಅನುಮತಿಸಿ ತಪ್ಪು ಮಾಡಿತು. ಅವುಗಳು ಭಾರತದೊಳಗಡೆ ಲಗ್ಗೆಯಿಟ್ಟು ಈ ಹದಿನೈದು ವರ್ಷದೊಳಗೆ ಇಲ್ಲಿನ ಸಾಂಸ್ಕೃತಿಕ ಜನಜೀವನವನ್ನು ಸಂಪೂರ್ಣವಾಗಿ ಪಲ್ಲಟಿಸುವುದರೊಂದಿಗೆ ಇಲ್ಲಿನ ಗುಡಿ ಕೈಗಾರಿಕೆಗಳನ್ನು ಮೂಲೋತ್ಪಾಟನೆ ಮಾಡಿದವು. ಈ ಮಾತನ್ನು ನಾನಿಲ್ಲಿ ಏಕೆ ಹೇಳುತ್ತೇನೆಂದರೆ ಇವತ್ತು ಇವು ಭಾರತವನ್ನು ಮತ್ತೊಂದು ರೀತಿಯಲ್ಲಿ ದಾಸ್ಯದತ್ತ ನೂಕುತ್ತಿವೆ.

ಹಿಂದೆ ಸಮುದ್ರದ ದಡದಲ್ಲಿ ನೈಸರ್ಗಿಕವಾಗಿ ಸಿಗುತ್ತಿದ್ದ ಉಪ್ಪಿನ ಮೇಲೆ ಸ್ವಾಮ್ಯವನ್ನು ಸ್ಥಾಪಿಸಿದ ಇವು ಉಪ್ಪಿನಲ್ಲಿ 'ಅಯೋಡಿನ್' ಅಂಶದ ಕೊರತೆಯಿರುವುದರಿಂದ 'ಗಳಗಂಡ ರೋಗ' ಬರುತ್ತದೆಯೆಂದು ಅಪಪ್ರಚಾರ ಮಾಡಿ ಉಪ್ಪನ್ನು ಪುಡಿ/ಹರಳು ರೂಪದಲ್ಲಿ ಪ್ಯಾಕೆಟ್‌ಗಳಲ್ಲಿ ತುಂಬಿ ಅದರ ಮೇಲೆ 'ಅಯೋಡಿನ್‌ಯುಕ್ತ' ಎಂದು ಛಾಪಿಸಿ ಮಾರುಕಟ್ಟೆಗೆ ಬಿಟ್ಟು ಲಾಭ ಮಾಡಿಕೊಳ್ಳುತ್ತಿವೆ. ಈ ಪ್ಯಾಕೆಟ್ ಉಪ್ಪಿನಲ್ಲಿ ಹಿಂದಿನ ನೈಜ ರುಚಿ ಇಲ್ಲ. ಹೀಗಾಗಿ ಉಪ್ಪರಳಿಗೂ ಇವು ಚ್ಯುತಿ ತಂದವು.

ನಮ್ಮ ಪೂರ್ವಜರು ಕುರಿ ಹಿಂಡು, ದನದ ಹಿಂಡು ಕಟ್ಟಿಕೊಂಡು ಇರುವಷ್ಟು ಜಮೀನಿನ ತುಂಬ ಕೊಟ್ಟಿಗೆ ಗೊಬ್ಬರ ಹರಡಿ ಅಧಿಕ ಇಳುವರಿ ಫಸಲನ್ನು ತೆಗೆದು, ತಮಗಾಗುವಷ್ಟು ಇಟ್ಟುಕೊಂಡು, ಮಿಕ್ಕಿದ್ದನ್ನು ಸಂತೆಗೆ ತಂದು ಮಾರುತ್ತಿದ್ದರು. ಶುಚಿ-ರುಚಿಯಿಂದ ಕೂಡಿರುತ್ತಿದ್ದ ಆಹಾರ ತಿಂದು ಜನರು ಗಟ್ಟಿಮುಟ್ಟಾಗಿದ್ದರು.

ಇಂದು ಆಧುನಿಕತೆಯ ಸೋಗಿನಲ್ಲಿ ಅಧಿಕ ಇಳುವರಿ ತಂತ್ರದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ರಾಸಾಯನಿಕ ಗೊಬ್ಬರವನ್ನು ಹೊಲಗಳಿಗೆ ಎರಚಲು ರೈತರಿಗೆ ಪುಸಲಾಯಿಸಿದವು. ಪರಿಣಾಮ ರೈತ ಜೀವಿ ಎಂದೂ ಕಂಡರಿಯದ ಕೇಳರಿಯದ ನಮೂನಿ ಕೀಟಬಾಧೆ ರೋಗಬಾಧೆಯನ್ನು ಕಂಡ. ಇವುಗಳನ್ನು ಹೋಗಲಾಡಿಸಲು ಮತ್ತೆ ಅದೇ ಕಂಪನಿಗಳು ಉತ್ಪಾದಿಸಿದ ಕೀಟನಾಶಕ, ಕಳೆನಾಶಕ, ಶಿಲೀಂಧ್ರನಾಶಕ ಔಷಧಿಯನ್ನು ಸಿಂಪಡಿಸಿದ. ರೋಗ ವಾಸಿಯಾಗುವುದರ ಬದಲಿಗೆ ಇಳುವರಿಯಲ್ಲಿ ವ್ಯತ್ಯಾಸ ಕಂಡು ಸಾಲಕುಪ್ಪೆ ಮಾಡಿಕೊಂಡು ನೇಣಿಗೆ ಕೊರಳೊಡ್ಡಿದ!

ಹೀಗೆ ಕಂಗೆಟ್ಟ ರೈತನಿಗೆ ಕೃಷಿ ತಜ್ಞರು ಸಾವಯವ ಕೃಷಿ, ಜೈವಿಕ ಕೃಷಿ ಕೈಗೊಳ್ಳುವಂತೆ ಪ್ರೇರೇಪಿಸಿದರೂ ಆಧುನಿಕತೆಯ ಬಿರುಗಾಳಿಯಲ್ಲಿ ಒಂಟಿಯಾಗಿದ್ದಾನೆ. ಎಲ್ಲೋ ಒಬ್ಬಿಬ್ಬರು ಈ ವಿಧಾನಗಳಲ್ಲಿ ಯಶಸ್ವಿಯಾಗಿದ್ದರೂ ಬಹಳಷ್ಟು ಜನ ರೈತರು ರೆಡಿಮೇಡ್ ರಾಸಾಯನಿಕ ಗೊಬ್ಬರಕ್ಕೆ ಅಂಟಿಕೊಂಡಿದ್ದಾರೆ. ಕಾರಣ ಅವರಿಂದು ದನ, ಕುರಿ, ಎತ್ತು, ಎಮ್ಮೆ, ಕತ್ತೆ, ಮೇಕೆ ಸಾಕಿ ನಿರ್ವಹಣೆ ಮಾಡಲು ಅಸಮರ್ಥರಾಗಿದ್ದಾರೆ.

ಈ ರಾಸಾಯನಿಕ ಗೊಬ್ಬರಗಳ ಪರಿಣಾಮವಾಗಿ ಹಿಂದೆ ರೈತರ ಹೊಲಗದ್ದೆಗಳಲ್ಲಿ ನೈಸರ್ಗಿಕವಾಗಿ ದೊರೆಯುತ್ತಿದ್ದ ನಾನಾ ನಮೂನಿ ಸೊಪ್ಪುಸದೆ (ಕೊಳವಂಕ, ಬಳೆವಡ್ಕ, ಮಳದಾಸ್ಲೆ, ಕಿರಿಕ್ಸಾಲೆ, ಅನಗೊನ್ನೆ, ಕೊಟ್ಟನಗುರಿಕೆ, ಆಲೇಸೊಪ್ಪು, ಅಜ್ಜಿಸೊಪ್ಪು, ಗೊರ್ಜಿಸೊಪ್ಪು) ಮಾಯವಾಗಿ ಪಾರ್ಥೇನಿಯಂ ಕಳೆ ಹೆಚ್ಚಾಗಿದೆ.

ವ್ಯಕ್ತಿಯ ಜೀವ ಪೋಷಣೆಗೆ ಕಾರಣವಾದ ಎಲ್ಲಾ ಆಹಾರ ಪದಾರ್ಥಗಳಲ್ಲೂ ಕಾಯಿಪಲ್ಲೆ, ಹಣ್ಣುಗಳಲ್ಲೂ ರಾಸಾಯನಿಕ ಗೊಬ್ಬರ, ಕೀಟನಾಶಕಗಳ ಅಂಶ ಬೆರೆತು ಎಲುಬು, ಮೆದುಳು ಜೀವಸತ್ವ ಹಾಗೂ ವಂಶವಾಹಿ ಜೀನುಗಳ ಉತ್ಪತ್ತಿಯ ಮೇಲೂ ಭೀಕರ ಪರಿಣಾಮ ಉಂಟಾಯಿತು. ಮಕ್ಕಳು ಚಿಕ್ಕ ವಯಸ್ಸಿನಲ್ಲೇ ಅಂಗವಿಕಲತೆಗೆ, ಬುದ್ಧಿಮಾಂದ್ಯತೆಗೆ ಮತ್ತು ದೃಷ್ಟಿದೋಷಗಳಂತಹ ರೋಗರುಜಿನಗಳಿಗೆ ತುತ್ತಾಗುತ್ತಿದ್ದಾರೆ. ವಯಸ್ಕರು ಅಕಾಲ ಮರಣ, ಅಕಾಲ ವೃದ್ಧಾಪ್ಯ, ಅಕಾಲ ನೆರೆಗೂದಲು, ಕೀಲು, ಮೂಳೆ ನೋವಿಗೆ ತುತ್ತಾಗುತ್ತಿದ್ದಾರೆ. ಪ್ರಯುಕ್ತವಾಗಿ ವ್ಯಕ್ತಿ ವಿಷ ತಿಂದು ವಿಷವನ್ನೇ ಕಕ್ಕುವಂತೆ ಮಾಡಿದ ಈ ಕಂಪನಿಗಳ ವಾಣಿಜ್ಯ ಮಸಲತ್ತನ್ನು ರಾಷ್ಟ್ರಾದ್ಯಂತ ಪ್ರಚಾರ ಮಾಡಿ ರೈತರು ಸಾವಯವ ಕೃಷಿ, ಜೈವಿಕ ಕೃಷಿ ಅಥವಾ ಸುಭಾಷ್ ಪಾಳೇಕರರ ಶೂನ್ಯ ಕೃಷಿ ಬಂಡವಾಳ ಪದ್ಧತಿಯನ್ನು ಕೈಗೊಳ್ಳುವಂತೆ ಪ್ರಚಾರಾಂದೋಲನ ಕೈಗೊಳ್ಳಬೇಕಾಗಿದೆ.

ಅಲ್ಲದೆ ಈ ಕಂಪನಿಗಳು ಪಡೆದ ಬೀಜದ ಪೇಟೆಂಟ್‌ನಿಂದ ನಮ್ಮ ಹಿಂದಿನ ನಾಟಿ ತಳಿ, ಬೀಜಗಳು ಮಾಯವಾಗಿ (ಇವುಗಳಲ್ಲಿ ರೋಗನಿರೋಧಕ ಶಕ್ತಿ ಹೆಚ್ಚಿತ್ತು) ಅವುಗಳ ಜಾಗದಲ್ಲಿ ಹೈಬ್ರಿಡ್ ಬೀಜ, ತಳಿಗಳದೇ ಕಾರುಬಾರಾಗಿದೆ. ಇವು ಒಮ್ಮೊಮ್ಮೆ ಹೆಚ್ಚು ಇಳುವರಿ ಕೊಡುವುದು ಹೋಗಲಿ ಕಾಳು ಕಟ್ಟದಿರುವುದೇ ದೊಡ್ಡ ತೊಂದರೆಯಾಗಿದೆ. ಉದಾ: ಮಹಿಕೋ ಹತ್ತಿ ಬೀಜ, ಬಿ.ಟಿ. ಹತ್ತಿತಳಿ, ನಾನಾ ಕಂಪನಿಗಳ ಬ್ರಾಂಡ್ ಹೊತ್ತ ಸೂರ್ಯಕಾಂತಿ ಬೀಜಗಳ ಪ್ಯಾಕೆಟ್.

ಇನ್ನು ತಂಪು ಪಾನೀಯ ಉದ್ಯಮಕ್ಕೆ ಬಂದರೆ ಈ ಕಂಪನಿಗಳು ಉತ್ಪಾದಿಸುವ ಕೋಕಾ ಕೋಲಾ, ಥಮ್ಸ್ ಅಪ್, ಮಿರಿಂಡಾ, ಫಾಂಟಾ, ಪೆಪ್ಸಿಯಂತಹ ಪೇಯಗಳಿಂದ ಕಲ್ಪವೃಕ್ಷವೆಂದು ಹೆಸರು ಪಡೆದಿದ್ದ ತೆಂಗಿಗೆ ನುಶಿರೋಗ ತಗುಲಿ ತೆಂಗಿನ ಉದ್ಯಮ ಹಿನ್ನಡೆ ಸಾಧಿಸಿತು. ಮಧ್ಯಮ ವರ್ಗದ ಸುಶಿಕ್ಷಿತ ಜನರು ಅದರಲ್ಲೂ ಕಾಲೇಜು ಕಲಿಯುವ ಪೋರ ಪೋರಿಯರು ಇವುಗಳತ್ತ ಬಹುಆಕರ್ಷಿತರಾದರು. ಇದು ಎಲ್ಲಿಯತನಕ ಹೋಯ್ತು ಅಂದ್ರೆ ಮದುವೆ ಮಂಟಪದಲ್ಲಿ ನವ ದಂಪತಿಗಳು ಕೋಕಾಕೋಲಾ, ಪೆಪ್ಸಿಗಳನ್ನು ಪರಸ್ಪರ ಹೀರುತ್ತಲೇ ಫೋಟೋ ತೆಗೆಸಿಕೊಂಡರು. ಇವರನ್ನು ಅನುಕರಣೆ ಮಾಡಿದ ಅವಿದ್ಯಾವಂತ ಹಳ್ಳಿಯ ನವದಂಪತಿಗಳೂ ಮಿರಿಂಡಾ, ಪೆಪ್ಸಿಗಳನ್ನು ಹೀರುತ್ತಲೇ ಫೋಟೋ ತೆಗೆಸಿ ಆಲ್ಬಂಗೆ ಹಾಕಿ ಖುಷಿಪಟ್ಟರು. ಈ ಪೇಯಗಳ ಇಷ್ಟೊಂದು ಜನಪ್ರಿಯತೆ ಹೆಚ್ಚಲು ಕಾರಣ, ಕಂಪನಿಗಳು ಚಿತ್ರರಂಗದ ಖ್ಯಾತ ನಟನಟಿಯರನ್ನು, ಕ್ರಿಕೆಟ್ ರಂಗದ ಕಲಿಗಳನ್ನು ಜಾಹೀರಾತಿಗೆ ಬಳಸಿಕೊಂಡದ್ದು.

ಇತ್ತೀಚೆಗೆ ಈ ಪೇಯಗಳಲ್ಲಿ ಹುಳು ಇನ್ನಿತರ ಕೀಟಗಳು ಕಂಡುಬಂದು ಇವುಗಳ ಸೇವನೆ ಆರೋಗ್ಯಕ್ಕೆ ಹಾನಿಕರವೆಂಬ ಅಂಶವನ್ನು ಪತ್ರಿಕೆಗಳು ಬಯಲುಮಾಡಿದ್ದು ಸಂತಸದ ಸಂಗತಿಯಾದರೂ ನಮ್ಮ ಯುವಜನರು ಇನ್ನೂ ಅವುಗಳಿಗೆ ಅಂಟಿಕೊಂಡಿರುವುದು ವ್ಯಥೆಯ ಸಂಗತಿಯಾಗಿದೆ. ಇವು ಇಲ್ಲಿಂದ ಕಾಲ್ತೆಗೆಯುವವರೆಗೂ ಆರೋಗ್ಯ ಹಾಗೂ ಎಳೆನೀರು ಉದ್ಯಮಕ್ಕೆ ಉಳಿಗಾಲವಿಲ್ಲ!

ಈ ಕಂಪನಿಗಳ ಲಕ್ಷ್ಯ ಹೂಡಿದ ಬಂಡವಾಳಕ್ಕೆ ದುಪ್ಪಟ್ಟು ಲಾಭ ಬಿಟ್ಟರೆ ಬೇರಿಲ್ಲ. ಸಮಾಜದ ಸ್ವಾಸ್ಥ್ಯದ ಪ್ರಗತಿಯನ್ನು ಕಟ್ಟಿಕೊಂಡು ಅವುಗಳಿಗೇನಾಗಬೇಕಿದೆ! ಇವು ಹೀಗೇ ಮುಂದುವರಿದರೆ ಇನ್ನು ಕೆಲವೇ ವರ್ಷಗಳಲ್ಲಿ ಭಾರತವನ್ನು ಬಡತನದ ಅಂಚಿನತ್ತ, ನಿಗೂಢತಮ ರೋಗರುಜಿನಗಳತ್ತ ದೂಡುವುದು ಖಂಡಿತ.

**ಕಂಪ್ಲಪ್ಪ ಚನ್ನಸಾಗರ**
ಅಧ್ಯಾಪಕರು, ಸರಕಾರಿ ಪದವಿ ಪೂರ್ವ ಕಾಲೇಜು, ವೆಂಕಟಾಪುರ, ಪಾವಗಡ ತಾಲ್ಲೂಕು

# ಕನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ

(ಕ್ರಿ.ಶ. ೫೦೦ - ೮೫೦ರವರೆಗೆ)

ಕೆಲವು ಹಿಂದಿನ ಘಟನೆಗಳನ್ನು ವಿವರಿಸಲು, ದಾಖಲಿಸಲು, ಕಲ್ಲಿನ ಮೇಲೆ, ತಾಮ್ರದ ಮೇಲೆ ಕೆತ್ತಿರುವುದನ್ನು ಶಾಸನ ಎಂದು ಕರೆಯುತ್ತೇವೆ. ಶಾಸನ ಎಂದರೆ 'ರಾಜಾಜ್ಞೆ' ಎಂದರ್ಥ. ಹಿಂದೆ ರಾಜರು ತಮ್ಮ ಆಜ್ಞೆಗಳನ್ನು ತಿಳಿಸಲು, ದಾನದ ಉಲ್ಲೇಖ ಮಾಡಲು, ಯುದ್ಧದಲ್ಲಿ ಹೋರಾಡಿದವರ ಸ್ಮಾರಕ ನಿರ್ಮಿಸಲು, ಸಲ್ಲೇಖನ ವ್ರತ ಕೈಗೊಂಡವರ, ಸಹಗಮನ ಮಾಡಿಕೊಂಡವರ ಸ್ಮಾರಕ ನಿರ್ಮಿಸಲು ಇನ್ನೂ ಮುಂತಾದ ಉದ್ದೇಶಗಳಿಗಾಗಿ ಶಾಸನಗಳನ್ನು ಹಾಕಿಸುತ್ತಿದ್ದರು. ರಾಜರುಗಳು ಮಾತ್ರವೇ ಅಲ್ಲದೆ ಮಂತ್ರಿಗಳು, ದಂಡನಾಯಕರು, ಗ್ರಾಮದ ಮುಖ್ಯಸ್ಥರು, ಸೈನ್ಯಾಧೀಕ್ಷರು ಮುಂತಾದ ಹಿರಿಯರು ಶಾಸನಗಳನ್ನು ಹಾಕಿಸುತ್ತಿದ್ದರು.

ಈ ರೀತಿಯ ಶಾಸನಗಳ ನಿರ್ಮಾಣದಿಂದ ಆ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಮುಂತಾದ ಸಾಂಸ್ಕೃತಿಕ ವಿಚಾರಗಳು ತಿಳಿಯುತ್ತವೆ. ಇಂತಹ ಶಾಸನಗಳನ್ನು ಬರೆದವರು ಕೆಲವು ಕವಿಗಳೂ ಆಗಿರುವುದರಿಂದ ಈ ಶಾಸನಗಳಲ್ಲಿ ಸಹಜವಾಗಿಯೇ ಕಾವ್ಯಸ್ವರೂಪ ಎದ್ದುಕಾಣುತ್ತದೆ. ಆದರೆ ಸಾಹಿತ್ಯವನ್ನು ಹೇಳುವುದು ಈ ಶಾಸನಗಳ ಉದ್ದೇಶವಲ್ಲ, ಸಾಹಿತ್ಯದ ಅಂಶಗಳಿದ್ದರೆ ಅದು ಕೇವಲ ಪ್ರಾಸಂಗಿಕ ಎನ್ನಬಹುದು.

ನಮ್ಮಲ್ಲಿ ಲಭ್ಯವಿರುವ ಇಂತಹ ಸಾಹಿತ್ಯಕ ಅಂಶಗಳಿರುವ ಶಾಸನಗಳಿಂದ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಅರಿಯಲು ಸಹಾಯಕವಾಗಿದೆ. ಏಕೆಂದರೆ, ಕನ್ನಡದ ಮೊಟ್ಟಮೊದಲ ಉಪಲಬ್ಧ ಕೃತಿಯು 'ಕವಿರಾಜಮಾರ್ಗ'ವಾಗಿದೆ. ಈ ಕೃತಿಯಲ್ಲಿ ಕನ್ನಡ ಗದ್ಯ ಕವಿಗಳ, ಪದ್ಯ ಕವಿಗಳ ಹಾಗೂ ಕನ್ನಡ ಸಾಹಿತ್ಯ ಹುಲುಸಾಗಿ ಬೆಳೆದುದರ ಉಲ್ಲೇಖವಿದ್ದು, ಈ ಕವಿಗಳ ಕೃತಿಗಳು ಅನುಪಲಬ್ಧವಾಗಿವೆ.

ಆದ್ದರಿಂದ ಕವಿರಾಜಮಾರ್ಗ ಪೂರ್ವದ ಕನ್ನಡ ಸಾಹಿತ್ಯ ಅರಿಯಲು ಶಾಸನಗಳನ್ನೇ ಅವಲಂಬಿಸಬೇಕಾಗಿದೆ. ಈ ದೃಷ್ಟಿಯಿಂದ ಚಿದಾನಂದ ಮೂರ್ತಿಯವರ "ಶಾಸನಗಳು ಕನ್ನಡ ಸಾಹಿತ್ಯದ ತಲಕಾವೇರಿ, ಶಾಸನ ಸಾಹಿತ್ಯದ ಅಧ್ಯಯನವಿಲ್ಲದೆ ಕನ್ನಡ ಸಾಹಿತ್ಯದ ಅಧ್ಯಯನವು ಪೂರ್ಣವಾಗುವುದಿಲ್ಲ" ಎಂಬ ಮಾತು ನಿಜವೆನಿಸುತ್ತದೆ. ಹೀಗಾಗಿ ಕನ್ನಡ ಸಾಹಿತ್ಯಕ ಅಂಶಗಳಿರುವ ಶಾಸನಗಳನ್ನು ಹುಡುಕುತ್ತಾ ಹೊರಟರೆ ಕನ್ನಡದ ಮೊಟ್ಟಮೊದಲ ಉಪಲಬ್ಧ 'ಹಲ್ಮಿಡಿ ಶಾಸನ'ದಿಂದಲೇ ಅಧ್ಯಯನ ಮಾಡಬೇಕಾಗಿದೆ. ಈ ಶಾಸನದ ಕಾಲ ಕ್ರಿ.ಶ. ೪೫೦. ಅಲ್ಲಿಂದ ಕ್ರಿ.ಶ. ೮೫೦ರವರೆಗೆ ಕನ್ನಡ ಸಾಹಿತ್ಯಕ ಅಂಶಗಳುಳ್ಳ ಸುಮಾರು ೫೦ ಶಾಸನಗಳು ದೊರೆಯುತ್ತವೆ. ನನ್ನ ಲೇಖನದ ವ್ಯಾಪ್ತಿ ಕ್ರಿ.ಶ. ೪೫೦ರಿಂದ ಕ್ರಿ.ಶ. ೮೫೦ರವರೆಗೆ ಆಗಿದ್ದು ಕೇವಲ ಮೂರುನಾಲ್ಕು ಬಹುಮುಖ್ಯ ಶಾಸನಗಳನ್ನು ಆರಿಸಿಕೊಂಡಿದ್ದೇನೆ.

ಕ್ರಿ.ಶ. ೪೫೦ರ ಹಲ್ಮಿಡಿ ಶಾಸನವು ಗದ್ಯದಿಂದ ಕೂಡಿದ್ದು ಇದರಲ್ಲಿ ನಾವು ಸಾಹಿತ್ಯಕ ಅಂಶಗಳನ್ನು ಕಾಣಲು ಸಾಧ್ಯವಿಲ್ಲ. ಏಕೆಂದರೆ, ಈ ಶಾಸನದ ಲಿಪಿ ಕನ್ನಡದಲ್ಲಿದ್ದರೂ ಹೆಚ್ಚು ಸಂಸ್ಕೃತ ಭಾಷೆಯನ್ನು ಬಳಸಲಾಗಿದೆ. ಇಲ್ಲಿ ಕೇವಲ ೨೫ ಕನ್ನಡ ಪದಗಳಿವೆ ಎಂದು ವಿದ್ವಾಂಸರು ಗುರ್ತಿಸುತ್ತಾರೆ. ಆದ್ದರಿಂದ, ಹಲ್ಮಿಡಿ ಶಾಸನ ಕನ್ನಡ 'ಭಾಷೆ' ದೃಷ್ಟಿಯಿಂದ ಪ್ರಾಚೀನವೇ ಹೊರತು ಸಾಹಿತ್ಯದ ದೃಷ್ಟಿಯಿಂದಲ್ಲ. ಆದ್ದರಿಂದ ಈ ಶಾಸನದಲ್ಲಿ ಸಾಹಿತ್ಯಕ ಅಂಶಗಳನ್ನು ಗುರ್ತಿಸಲು ಸಾಧ್ಯವಿಲ್ಲ.

ಕನ್ನಡದ ಸಾಹಿತ್ಯಕ ಅಂಶವಿರುವ ಮೊಟ್ಟಮೊದಲ ಶಾಸನವೆಂದರೆ ಚಿತ್ರದುರ್ಗ ಜಿಲ್ಲೆಯ 'ತಮಟಕಲ್ಲು ಶಾಸನ'. ಈ ಶಾಸನವು ಲಿಪಿ ಹಾಗೂ ಭಾಷಾ ಸ್ವರೂಪದಿಂದ ಪೂರ್ವದ ಹಳಗನ್ನಡ ಭಾಷೆಯಾಗಿದ್ದು, ಇದರ ಕಾಲ ಕ್ರಿ.ಶ. ೫೦೦ ಎಂದು ವಿದ್ವಾಂಸರು ಗುರ್ತಿಸಿದ್ದಾರೆ. ಇದು ಗುಣಮಧುರನ ಪ್ರಶಸ್ತಿ ಶಾಸನವಾಗಿದ್ದು, ಸುಂದರ ಪದ್ಯದಿಂದ ಕೂಡಿದ ಚೊಕ್ಕವಾದ ಸ್ವಭಾವ ಚಿತ್ರವಾಗಿದೆ. ಆ ಪದ್ಯ ಈ ರೀತಿ ಇದೆ.

ಫಣ ಮಣಿ ಅನ್ತು ಭೋಗಿ ಫಣದುಳ್ಮಣಿ ವಿಲ್ಮನದೋನ್
ರಣಮುಖದುಳ್ಳೆ ಕಾಲನರಿಯಕ್ಕುರ್ಮನಿನ್ದ್ಯ ಗುಣನ್
ಪ್ರಣಯಿ ಜನಕ್ಕೆ ಕಾಮನಸಿತೋತ್ಪಲ ವರ್ಣನವನ್
ಗುಣಮಧುರಾನ್ನ ದಿವ್ಯ ಪುರುಷನ್ಪುರುಷ ಪ್ರವರನ್

(ಎಪಿಗ್ರಾಫಿಯ, XI, ಚಿತ್ರದುರ್ಗ, ಶಾ. ಸಂ. ೪೩)

ಈ ಪದ್ಯದ ಸಾರಾಂಶ ಇಂತಿದೆ: ಹಣೆಯಲ್ಲಿ ರತ್ನವನ್ನು ಧರಿಸಿದ ಆದಿಶೇಷನಂತೆ ಮಹಾಭೋಗಿಯಾದ, ಹಣೆಯಲ್ಲಿ ರತ್ನವನ್ನು ಧರಿಸಿರುವ ರಾಜನಾದರೂ ಬಿಲ್ಲಿನಂತೆ ಬಾಗುವ ವಿನಯಶಾಲಿ, ರಣರಂಗದಲ್ಲಿ ಯಮನಂತಿರುವವನು, ಶತ್ರುಗಳೂ ಸಹ ನಿಂದಿಸಲು ಸಾಧ್ಯವಿಲ್ಲದಂತಹ ಗುಣವುಳ್ಳವನು, ಪ್ರಣಯಿಗಳಿಗೆ ಮನ್ಮಥನಂತಿರುವವನೂ, ಕಪ್ಪು ಬಣ್ಣದವನೂ ಆದ ಗುಣಮಧುರನು ದಿವ್ಯಪುರುಷ ಹಾಗೂ ಪುರುಷಶ್ರೇಷ್ಠ.

ಗುಣಮಧುರ ಎಂಬ ರಾಜನ ರೂಪ, ಗುಣ, ಪರಾಕ್ರಮ ವರ್ಣಿಸುವ ಹಾಗೂ ರಣರಂಗದಲ್ಲಿ ಹೋರಾಡಿ ಮಡಿದ ಪ್ರಶಸ್ತಿ ಶಾಸನವಾಗಿರುವ ಈ ಶಾಸನವು ಕರ್ನಾಟಕದ ಪ್ರಾಚೀನ ಉಪಲಬ್ಧ ವೀರಗಲ್ಲಾಗಿದೆ.

ಈ ಪದ್ಯದ ವೃತ್ತವು "ರತ್ನಾಕರನ ಪ್ರಕಾರ ೬, ೧೦ನೇ ಸ್ಥಾನದಲ್ಲಿ ಯತಿ ಬಂದರೆ 'ಸತ್ಕುಟಕ' ವೃತ್ತವಾಗುತ್ತದೆ. ೭, ೬, ೪ನೇ ಸ್ಥಾನದಲ್ಲಿ ಯತಿ ಬಂದರೆ 'ಕೋಕಿಲಕ' ವೃತ್ತವಾಗುತ್ತದೆ. ಆದ್ದರಿಂದ ಮೇಲಿನ ಪದ್ಯ ಇವೆರಡೂ ಆಗಿರದೆ ಸಂಸ್ಕೃತದ ಅತ್ಯಷ್ಟಿ ಛಂದಸ್ಸಿನ ಬೇರೊಂದು ವೃತ್ತವಾಗಿರುವ ಸಾಧ್ಯತೆ ಇದೆ" ಎಂದು ಚಿದಾನಂದಮೂರ್ತಿಯವರು ಹೇಳುತ್ತಾರೆ. ಆದರೆ ಈ ವೃತ್ತವು ಅತ್ಯಷ್ಟಿ ಛಂದಸ್ಸಿನ ಕನಕಾಬ್ಜಿನಿ ವೃತ್ತವಾಗಿದೆ ಎನ್ನಬಹುದು.

ಕನಕಾಬ್ಜಿನಿ ವೃತ್ತ ನಿಯಮದ ಪ್ರಕಾರ ನಾಲ್ಕು ಪಾದಗಳಿವೆ. ಪ್ರತಿ ಪಾದಗಳಲ್ಲಿಯೂ ೧೩ ಅಕ್ಷರಗಳು ಬರುತ್ತವೆ. ಪ್ರತಿಪಾದದಲ್ಲಿ ಕ್ರಮವಾಗಿ ನ. ಜ. ಭ. ಜ, ಜಗಣಗಳು ಬಂದು ಕೊನೆಯಲ್ಲಿ ಒಂದು ಲಘು, ಒಂದು ಗುರು ಉಳಿಯುತ್ತದೆ. ಪ್ರತಿಪಾದದ ಕೊನೆಯಲ್ಲಿ ಮತ್ತು ೮ನೇ ಸ್ಥಾನದಲ್ಲಿ ಯತಿ ಬಂದಿರುವುದನ್ನು ಈ ಪದ್ಯದಲ್ಲಿ ಕಾಣಬಹುದು.

ನಂತರದ ಶಾಸನ ಪದ್ಯವೆಂದರೆ ಕ್ರಿ.ಶ. ೬೫೦ರ 'ಶ್ರವಣಬೆಳಗೊಳದ ಶಾಸನ'. ಈ ಶಾಸನವು ನಂದಿಸೇನ ಎಂಬ ಜೈನ ಮುನಿಯು ಸಲ್ಲೇಖನ ವ್ರತದಿಂದ ಉಪವಾಸ ಮಾಡಿ ಸಮಾಧಿಮರಣ ಪಡೆದ ವಿವರವನ್ನು ಕಾವ್ಯಾತ್ಮಕವಾಗಿ ಬಿಂಬಿಸುತ್ತದೆ.

ಈ ಪದ್ಯವು ಈ ರೀತಿ ಇದೆ:

*ಸುರಚಾಪಂ ಬೋಲೆ ವಿದ್ಯುಲ್ಲತೆಗಳ ತೆರವೋಲ್ಮಂಜು ವೋಲ್ತೋ ಬೇಗಂ*
*ಪಿಂಗುಂ ಶ್ರೀ ರೂಪ ಲೀಲಾಧನ ವಿಭವ ಮಹಾರಾಶಿಗಳ್ನಿಲ್ಲವಾರ್ಗ್ಗಂ*
*ಪರಮಾರ್ಥಂ ಮೆಚ್ಚೆ ನಾ ನೀ ಧರಣಿಯುಳಿರವಾನೆನ್ದು ಸನ್ಯಾಸನಂಗೆ*
*ಯ್ದುರು ಸತ್ವನ್ನನ್ದಿಸೇನ ಪ್ರವರ ಮುನಿವರನ್ದೇವ ಲೋಕಕ್ಕೆ ಸನ್ದಾನ್.*

ಕಾಮನಬಿಲ್ಲಿನಂತೆ, ಮಿಂಚಿನಂತೆ, ಮಂಜಿನಂತೆ ಬೇಗ ನಾಶವಾಗುವ ಐಶ್ವರ್ಯ, ರೂಪ, ಲೀಲೆ, ಹಣ, ವೈಭವ ಮುಂತಾದವುಗಳು ಯಾರಿಗೂ ಶಾಶ್ವತವಲ್ಲ. ಇಂತಹ

---

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಅರಿಯಲು ಕ್ರಿ. ಶ. ೫೦೦ರಿಂದ ೮೫೦ರವರೆಗಿನ ಶಾಸನಗಳು ಮಹತ್ವದ ಪಾತ್ರಗಳನ್ನು ವಹಿಸುತ್ತವೆ. ಕನ್ನಡ ಶಾಸನಗಳನ್ನವಲಂಬಿಸಿ ಧಾರ್ಮಿಕ ಚರಿತ್ರೆ, ರಾಜಕೀಯ ಚರಿತ್ರೆ, ಸಾಮಾಜಿಕ ಚರಿತ್ರೆ, ಆರ್ಥಿಕ, ಶೈಕ್ಷಣಿಕ ಅಧ್ಯಯನಗಳು ನಡೆದಿವೆಯೇ ಹೊರತು ಸಾಹಿತ್ಯಕ ಅಧ್ಯಯನಗಳು ತೀರ ಕಡಿಮೆ ಎನ್ನಬಹುದು.

■ ವಿ. ಜಯರಾಮ್ ■

ಗುಣಮಧುರನ ತಮಟಕಲ್ಲು ಶಾಸನ ಕ್ರಿ.ಶ. ೫೦೦, ಕನ್ನಡದ ಮೊಟ್ಟಮೊದಲ ಸಾಹಿತ್ಯಕ ಅಂಶವುಳ್ಳ ಪದ್ಯ

ನಂದಿಸೇನ ಪ್ರವರಮುನಿಯ ಶ್ರವಣಬೆಳಗೊಳದ ಶಾಸನ ಕ್ರಿ.ಶ. ೬೫೦

ನಶ್ವರವಾದ ಪ್ರಪಂಚದಲ್ಲಿ ನಾನು ಇರುವುದಿಲ್ಲವೆಂದು ನಂದಿಸೇನ ಪ್ರವರ ಮುನಿಯು ಸಲ್ಲೇಖನ ವ್ರತದಿಂದ ಸಮಾಧಿಮರಣ ಪಡೆದು ದೇವಲೋಕಕ್ಕೆ ಹೋದುದನ್ನು ಈ ಶಾಸನದಲ್ಲಿ ಕಾವ್ಯಾತ್ಮಕವಾಗಿ ವರ್ಣಿಸಲಾಗಿದೆ.

ಶ್ರವಣಬೆಳಗೊಳದ ಈ ಶಾಸನವು ಇಡೀ ಜೈನಧರ್ಮದ ತತ್ವವನ್ನು ಹಿಡಿದಿಟ್ಟಿರುವ ಪದ್ಯವಾಗಿದ್ದು, ನಂದಿಸೇನನ ಇಹವಿರಕ್ತಿಯನ್ನು ಬಹಳ ನಾಟಕೀಯವಾಗಿ ಪರಿಣಾಮ ಕಾರಿಯಾಗಿ ಅಭಿವ್ಯಕ್ತಿಗೊಳಿಸುವ ಪದ್ಯವಾಗಿದೆ. ಈ ಪದ್ಯದ "ಶ್ರೀ ರೂಪ ಲೀಲಾಧನ ವಿಭವ ಮಹಾರಾಶಿಗಳ್ ನಿರ್ಲ್ಲವಾರ್ಗಂ" ಎಂಬ ಸಾಲು ಪಂಪನ ಆದಿಪುರಾಣ ದಲ್ಲಿ ಬರುವ "ಅಮರೇಂದ್ರೋನ್ನತಿ ಖೇಚರೇಂದ್ರ ವಿಭವಂ ಭೋಗೀಂದ್ರ ಭೋಗಂ ಮಹೇಂದ್ರ ಮಹೈಶ್ವರ್ಯಮಧ್ರುವಂ" ಎಂಬ ಪದ್ಯವನ್ನು ನೆನಪಿಗೆ ತರುತ್ತದೆ. ಇದರಿಂದಾಗಿ ಶ್ರವಣಬೆಳಗೊಳದ ಈ ಶಾಸನ ಪದ್ಯದಿಂದ ಪಂಪ ಸ್ಫೂರ್ತಿಗೊಂಡವನಂತೆ ಕಾಣುತ್ತಾನೆ.

ಈ ಪದ್ಯವು ಲಿಪಿ ಮತ್ತು ಭಾಷೆಯ ದೃಷ್ಟಿಯಿಂದ ಪೂರ್ವದ ಹಳಗನ್ನಡವಾಗಿದೆ ಎಂದು ತಿಳಿದುಬರುತ್ತದೆ. ಹಾಗೆಯೇ ಛಂದಸ್ಸಿನ ದೃಷ್ಟಿಯಿಂದ ಈ ಶಾಸನವು ಅಕ್ಷರ ವೃತ್ತಗಳಾದ ಮಹಾಸ್ರಗ್ಧರಾ ವೃತ್ತವಾಗಿದೆ. ಮಹಾ ಸ್ರಗ್ಧರಾವೃತ್ತದ ನಿಯಮದ ಪ್ರಕಾರ ಈ ಪದ್ಯದಲ್ಲಿ ನಾಲ್ಕು ಚರಣಗಳಿದ್ದು, ಪ್ರತಿ ಸಾಲಿನಲ್ಲಿ ೨೨ ಅಕ್ಷರಗಳು ಬರುತ್ತವೆ. ಪ್ರತಿ ಸಾಲಿನಲ್ಲಿ ಕ್ರಮವಾಗಿ ಸ. ತ. ತ. ನ. ಸ. ರ. ರಗಣಗಳು ಬಂದು, ಕೊನೆಯಲ್ಲಿ ಒಂದು ಗುರು ಉಳಿಯುತ್ತದೆ. ಪ್ರತಿ ಪಾದದ ೧೫ನೇ ಅಕ್ಷರದಲ್ಲಿ ಯತಿ ಬಂದಿರುವುದನ್ನು ಕಾಣಬಹುದು.

ಇದೇ ರೀತಿ ಶ್ರವಣಬೆಳಗೊಳದಲ್ಲಿ ಸಾಹಿತ್ಯಕ ಅಂಶವಿರುವ ೨೦-೩೦ ಶಾಸನಗಳು ಸಿಗುತ್ತವೆ. ಜೈನ ಧರ್ಮಕ್ಕೆ ಸಂಬಂಧಿಸಿದ್ದು, ಜೈನ ಸಂನ್ಯಾಸಿಗಳ ಅಥವಾ ಸಂನ್ಯಾಸಿನಿಯರ ಶೀಲ, ತಪಸ್ಸು, ದೇಹತ್ಯಾಗ, ಸ್ವರ್ಗ ಸಂಪಾದನೆಗಳ ಉಜ್ವಲ ಚಿತ್ರಗಳನ್ನು, ಜೈನಧರ್ಮಪರವಾದ ಪ್ರಶಸ್ತಿಗಳನ್ನು ಈ ಶಾಸನಗಳು ಒದಗಿಸುತ್ತವೆ. ಅಲ್ಲದೆ ಈ ದೃಷ್ಟಿಯಿಂದ ಶ್ರವಣಬೆಳಗೊಳದ ಬೆಟ್ಟವೊಂದು ಚಿತ್ರಕೂಟ. ಒಂದೊಂದು ಶಾಸನವೂ ಪುಟ್ಟ ಭಾವಗೀತೆಯಾಗಿ ಸೊಗಸಾದ ಉಪಮೆ ರೂಪಕಗಳಿಂದ ಆಕರ್ಷಕವಾಗಿದೆ.

ಸಾಹಿತ್ಯದ ದೃಷ್ಟಿಯಿಂದ ಇನ್ನೊಂದು ಮಹತ್ವದ ಶಾಸನ ವೆಂದರೆ ಬಾದಾಮಿ ಶಾಸನ. ಇದರ ಕಾಲ ಕ್ರಿ.ಶ. ೭೦೦. ಬಾದಾಮಿಯ ಕಪ್ಪೆ ಅರಭಟ್ಟನ ಶಾಸನದಲ್ಲಿ ಕನ್ನಡದ ದೇಸಿ ಛಂದಸ್ಸಿನ ತಾಯಿಬೇರೆಂದು ಕರೆಯಬಹುದಾದ ೪ ತ್ರಿಪದಿಗಳಿವೆ.

ಆ ಪದ್ಯಗಳು ಈ ರೀತಿ ಇವೆ:

ಕಪ್ಪೆ ಅರಭಟ್ಟನ್ ಶಿಷ್ಟಜನಪ್ರಿಯನ್<br>
ಕಷ್ಟ ಜನ ವರ್ಜಿತನ್ ಕಲಿಯುಗ ವಿಪರೀತನ್<br>
ವರನ್ತೇಜಸ್ವಿನೋ ಮೃತ್ಯುರ್ನ ತು ಮಾನಾ<br>
ವಖಣ್ಡನಮ್ ಮೃತ್ಯುಸ್ತತ್ಕ್ಷಣಿಕೋ<br>
ದುಃಖಮ್ಮಾನಭಂಗನ್ದಿನೇ ದಿನೇ<br>
ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ<br>
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್<br>
ಮಾಧವನೀತನ್ ಪೆರವಿನಲ್ಲ<br>
ಒಳ್ಳಿತ್ತ ಕೆಯ್ವೊರಾರ್ಪೊಲ್ಲದುಮದರಂತೆ<br>
ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ<br>
ಮಿಲ್ಲಿ ಸಂದಿಕ್ಕುಮದು ಬಂದು<br>
ಕಟ್ಟದ ಸಿಂಗಮನ್ ಕೆಟ್ಟೊಡೇನೆಮಗೆಂದು<br>
ಬಿಟ್ಟವೊಲ್ಕಲಿಗೆ ವಿಪರೀತಂಗಹಿತರ್ಕಳ್<br>
ಕೆಟ್ಟರ್ ಮೇಣ್ ಸತ್ತರ ವಿಚಾರಮ್

ಈ ಶಾಸನದ ಮೊದಲ ೨ ಸಾಲುಗಳನ್ನು ಆರ್. ಎಸ್. ಪಂಚಮುಖಿಯವರು ದ್ವಿಪದಿ ಛಂದಸ್ಸಿನಲ್ಲಿದೆ ಎಂದು ಗುರ್ತಿಸಿದ್ದಾರೆ. ಈ ಶಾಸನದಲ್ಲಿ ಒಂದು ದ್ವಿಪದಿಯಲ್ಲದೆ ೪ ತ್ರಿಪದಿಗಳೂ ಇದ್ದು ಕಪ್ಪೆ ಅರಭಟ್ಟ ಎಂಬ ವ್ಯಕ್ತಿಯ ಗುಣಸ್ವಭಾವ, ಶೌರ್ಯ, ಪರಾಕ್ರಮಗಳನ್ನು ವರ್ಣಿಸುವ ಪ್ರಶಸ್ತಿ ಶಾಸನವಾಗಿದೆ.

ಈ ಶಾಸನದ ಸಾರಾಂಶವನ್ನು ಹೀಗೆ ಸಂಗ್ರಹಿಸ ಬಹುದು : ಕಪ್ಪೆ ಅರಭಟ್ಟನು ಒಳ್ಳೆಯ ಜನರಿಗೆ ಬೇಕಾದವನು, ಕೆಟ್ಟ ಜನರಿಗೆ ಬೇಡವಾದವನು, ಕಲಿಯುಗ ವಿಪರೀತನೆಂದು ಪ್ರಸಿದ್ಧನಾದವನು.

ತೇಜಸ್ವಿಯಾದವನಿಗೆ ಸಾಯುವುದು ಒಳ್ಳೆಯದು. ಆದರೆ ಮಾನಭಂಗವಲ್ಲ, ಸಾವಿನ ದುಃಖ ಈ ಕ್ಷಣದ್ದು. ಮಾನಭಂಗದ ದುಃಖ ನಿರಂತರವಾದದ್ದು.

ಸಾಧುವಿಗೆ ತಾನೂ ಸಾಧು, ಮಹಾಯೋಧನಿಗೆ ತಾನೂ ಮಹಾಯೋಧ. ತೊಂದರೆ ಕೊಡುವಂತಹ ಶೂರನಿಗೆ ಕಲಿಯುಗ ವಿಪರೀತನೆನಿಸಿದ ಈತನು ಸಾಕ್ಷಾತ್ ವಿಷ್ಣುವಲ್ಲದೆ ಬೇರೆಯಲ್ಲ.

ಕಟ್ಟಿ ಹಾಕಿದ ಸಿಂಹವನ್ನು ಬಿಟ್ಟರೆ ನಮಗೇನೆಂದು ಸಿಂಹವನ್ನು ಬಂಧನದಿಂದ ಬಿಟ್ಟಹಾಗೆ ಕಲಿಯುಗ ವಿಪರೀತ ನಾದ ಕಪ್ಪೆ ಅರಭಟ್ಟನಿಗೆ ಎದುರು ಬಿದ್ದು ಆತನ ಶತ್ರುಗಳು ತಮ್ಮ ಅವಿವೇಕದಿಂದ ಹಾಳಾದರು (ಹತರಾದರು). ಹೀಗೆ ಈ ಶಾಸನದಲ್ಲಿ ತಲಸ್ಪರ್ಶಿಯಾಗಿ ಕಪ್ಪೆ ಅರಭಟ್ಟನ ಪರಾಕ್ರಮವನ್ನು ಕಾವ್ಯಮಯವಾಗಿ ವರ್ಣಿಸಲಾಗಿದೆ.

ಈ ಶಾಸನ ತನ್ನ ಕವಿತಾಗುಣದಿಂದ ಮಾತ್ರವಲ್ಲದೆ ಛಂದಸ್ಸಿನ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಕನ್ನಡ ಛಂದಸ್ಸಿನ ತಾಯಿಬೇರಾದ ತ್ರಿಪದಿಯ ಪ್ರಾಚೀನ ರೂಪವನ್ನು ಇಲ್ಲಿ ಕಾಣುತ್ತೇವೆ. ನಮಗೆ ಸಿಕ್ಕಿರುವ ಮೊದಲ ತ್ರಿಪದಿ ಗಳಿವು. ತ್ರಿಪದಿ ಮೂಲತಃ ಜನಪದ ಛಂದಸ್ಸು. ಆದರೆ ಈ ಬಾದಾಮಿ ಶಾಸನದ ತ್ರಿಪದಿಗಳು ಜನಪದವಾಗಿರದೆ ಪ್ರೌಢವಾಗಿದ್ದು, ಪಂಡಿತ ರಚಿತವೆಂದು ತೋರುತ್ತದೆ.

ಸಾಧುಗೆ ಸಾಧು ಎಂಬೊಂದು ಪದ್ಯವನ್ನು ಬಿಟ್ಟರೆ, ಉಳಿದವುಗಳಲ್ಲಿ ಲಾಲಿತ್ಯವಾಗಲಿ ಅರ್ಥಸುಖತೆಯಾಗಲಿ ಇಲ್ಲ. ಮುಂದೆ ಚಂಪೂ ಕಾವ್ಯಗಳ ನಡುವೆ ಕಂಡುಬರುವ ತ್ರಿಪದಿಗಳನ್ನು ಇವು ಹೋಲುತ್ತವೆ. ಒಬ್ಬ ಕನ್ನಡ ವೀರನ ಆವೇಶಯುತವಾದ ಸ್ವಭಾವ ಚಿತ್ರವು ಅಲ್ಲಿದೆ ಎಂಬುದು ಸರಿ, ಆದರೆ ಅದರಲ್ಲಿ ಭಾವ ಭಾಷೆಗಳ ಯೋಗ್ಯ ಮಿಲನ ಉಳ್ಳ ಸ್ವಯಂಪೂರ್ಣವಾದ ಭಾವಗೀತೆಯ ಸತ್ವವೂ ತುಂಬಿದೆ. ಇದು ತನಗಿಂತ ಹಿಂದಿನ ಜನಪದ ಸಾಹಿತ್ಯದ ಅಸ್ತಿತ್ವವನ್ನು ಸ್ಥಾಪಿಸುವಲ್ಲಿ ಉಪಾದೇಯವಾಗಿದೆ.

ತ್ರಿಪದಿಯ ನಿಯಮದಂತೆ ಈ ಪದ್ಯವನ್ನು ಗಣ ವಿಭಾಗ ಮಾಡಿದಾಗ ಒಟ್ಟು ೧೧ ಗಣಗಳಿದ್ದು, ೬ ಮತ್ತು ೧೧ ನೇ ಸ್ಥಾನದಲ್ಲಿ ಬ್ರಹ್ಮಗಣ ಬಂದಿರುವುದನ್ನು ಗಮನಿಸಬಹುದು. ಎರಡನೇ ಪಾದದ ೩ನೇ ಗಣದಲ್ಲಿ ಯತಿ ಬಂದಿರುವುದನ್ನು ಈ ಶಾಸನದಲ್ಲಿ ಕಾಣಬಹುದು.

ಇಷ್ಟೇ ಶಾಸನಗಳಲ್ಲದೆ ಕ್ರಿ.ಶ. ೭೫೦ರ ಚಿಕ್ಕಮಗಳೂರಿನ 'ಸಿಂಹನ ಗದೆ' ತಾಮ್ರಶಾಸನವು ಕನ್ನಡದ ಅತ್ಯಂತ ಪ್ರಾಚೀನ ಉಪಲಬ್ಧ ಕಂದ ಪದ್ಯಗಳಿರುವ ಶಾಸನವಾಗಿದೆ. ಕ್ರಿ.ಶ. ಸು. ೮೦೦ರ ಶಿವಮೊಗ್ಗದ 'ಹೊಂಬುಜ ಶಾಸನ' ದಲ್ಲಿಯೂ ೪ ತ್ರಿಪದಿಗಳಿರುವುದನ್ನು ನೋಡಬಹುದು. ಕ್ರಿ.ಶ. ೮೦೦ರ ಕಾಲಕ್ಕೆ ಸೇರಿದ ಸೊರಬದ ಶಾಸನ, ಇನ್ನೂ ಹಲವಾರು ಸಾಹಿತ್ಯಕ ಅಂಶಗಳಿರುವ ಶಾಸನಗಳು ಕ್ರಿ.ಶ. ೮೫೦ರವರೆಗೆ ದೊರೆಯುತ್ತವೆ.

ಈ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಅರಿಯಲು ಕ್ರಿ. ಶ. ೫೦೦ರಿಂದ ೮೫೦ರವರೆಗಿನ ಶಾಸನ ಗಳು ಮಹತ್ವದ ಪಾತ್ರಗಳನ್ನು ವಹಿಸುತ್ತವೆ. ಕೊನೆಯ ದಾಗಿ ಕನ್ನಡ ಶಾಸನಗಳನ್ನವಲಂಬಿಸಿ ಧಾರ್ಮಿಕ ಚರಿತ್ರೆ, ರಾಜಕೀಯ ಚರಿತ್ರೆ, ಸಾಮಾಜಿಕ ಚರಿತ್ರೆ, ಆರ್ಥಿಕ, ಶೈಕ್ಷಣಿಕ ಅಧ್ಯಯನಗಳು ನಡೆದಿವೆಯೇ ಹೊರತು ಸಾಹಿತ್ಯಕ ಅಧ್ಯಯನಗಳು ತೀರ ಕಡಿಮೆ ಎನ್ನಬಹುದು.

ಎ. ಜಯರಾಮ್
ಕನ್ನಡ ಉಪನ್ಯಾಸಕ, ದಿ ಆಕ್ಸ್‌ಫರ್ಡ್ ಕಾಲೇಜ್ ಆಫ್ ಇಂಜಿನಿಯರಿಂಗ್,
ಬೊಮ್ಮನಹಳ್ಳಿ, ಹೊಸೂರು ಮುಖ್ಯರಸ್ತೆ ಬೆಂಗಳೂರು -೬೮



# ಗುರು-ಶುಕ್ರಗಳ ಸಮಾಗಮ

## ನಭಾವಲೋಕನ

ಸಂಜೆಯ ಆಕಾಶದಲ್ಲಿ ಕಾಣುವ ಪ್ರಕಾಶಮಾನ ಚುಕ್ಕೆಗಳು ಗುರು ಮತ್ತು ಶುಕ್ರ. ಪಶ್ಚಿಮ ದಿಕ್ಕಿನಲ್ಲಿ ಇವುಗಳ ಸಮಾಗಮವನ್ನು ನೋಡಲು ಈಗ ಅಪೂರ್ವ ಅವಕಾಶ. ಈ ತಿಂಗಳು ಮತ್ತು ಮುಂದಿನ ತಿಂಗಳು ಇವು ಪರಸ್ಪರ ಸಮೀಪಿಸುವುದನ್ನು ಗುರುತುಹಾಕಿಟ್ಟುಕೊಂಡರೆ ಶುಕ್ರ ಎಷ್ಟು ವೇಗವಾಗಿ ಚಲಿಸುತ್ತಿದೆ ಎಂಬುದರ ಕಲ್ಪನೆ ಬರುತ್ತದೆ. ಗುರು ವಾಸ್ತವವಾಗಿ ಒಫಿಯೂಕಸ್ ಎಂಬ ಪುಂಜದಲ್ಲಿದೆ. ಶುಕ್ರ ಅದನ್ನು ದಾಟಿ ಮುಂದೆ ಓಡುವುದನ್ನು ನೋಡಲು ಈಗ ಒಳ್ಳೆಯ ಅವಕಾಶ. ನವೆಂಬರ್ ೧ರಂದು ಚಂದ್ರ ಶುಕ್ರ ಒಟ್ಟಾಗುವಾಗ ಗುರು ಎಷ್ಟೊಂದು ದೂರದಲ್ಲಿದೆ ಎನ್ನಿಸುತ್ತದೆ. ಡಿಸೆಂಬರ್ ೧ರಂದು ಪುನಃ ಗಮನಿಸಿ; ಗುರು, ಶುಕ್ರ ಮತ್ತು ಚಂದ್ರ ಮೂರೂ ಒಟ್ಟಿಗೇ ಸೇರಿರುತ್ತವೆ. ಕ್ಯಾಮೆರಾಗಳಿಗೆ ಕೆಲಸ ಕೊಡಬಹುದು.

ಈ ತಿಂಗಳು ಮೋಡಗಳ ಕಾಟ ಕಡಿಮೆ; ಆದ್ದರಿಂದ ಆಕಾಶಜ್ಞಾನವನ್ನು ವಿಸ್ತರಿಸಲು ಒಳ್ಳೆಯ ಅವಕಾಶ. ಗ್ರಹಗಳ ಜೊತೆಗೆ ಸುತ್ತಲಿನ ನಕ್ಷತ್ರಗಳನ್ನೂ ಪರಿಚಯ ಮಾಡಿಕೊಳ್ಳಬಹುದು. ಒಂದನೆಯ ತಾರೀಖು ಶುಕ್ರದ ಜೊತೆಗೂಡುವ ಚಂದ್ರ ಎರಡು ದಿನಗಳ ನಂತರ ಗುರು ಗ್ರಹದ ಜೊತೆಗೂಡುತ್ತದೆ. ೬ರಂದು ಅರ್ಧ ಚಂದ್ರದ ಹಿಂದೆ ನೆಪ್ಚೂನ್ ಮರೆಯಾಗುವುದನ್ನು ಬೆಂಗಳೂರಿನಿಂದ ನೋಡಲು ಸಾಧ್ಯವಾಗದಿದ್ದರೂ, ಅಕ್ಕಪಕ್ಕದಲ್ಲಿ ನೋಡಬಹುದು. ೧೩ರ ಸಂಜೆ ಹುಣ್ಣಿಮೆ ಚಂದ್ರನ ಪಕ್ಕದಲ್ಲಿ ಕೃತ್ತಿಕಾ ಪುಂಜವನ್ನು ಕಾಣಬಹುದು. ಈ ಕಾರಣದಿಂದ ಈ ತಿಂಗಳ ಹೆಸರು ಕಾರ್ತೀಕ. ೨೦ರಂದು ಮಘಾ ನಕ್ಷತ್ರದ ಪಕ್ಕದಲ್ಲಿ ಚಂದ್ರ ಕಾಣುತ್ತದೆ. ೨೧ರಂದು ಶನಿಯ ಪಕ್ಕ, ೨೪ರಂದು ಚಿತ್ರಾ ನಕ್ಷತ್ರದ ಪಕ್ಕ ಕಾಣುತ್ತದೆ. ೨೮ರಂದು ಜ್ಯೇಷ್ಠಾ ನಕ್ಷತ್ರಕ್ಕೆ ಅಂಟಿಕೊಂಡ ಹಾಗೇ ಕಾಣುತ್ತದೆ. ಆದರೆ ಸಂಜೆಗೆಂಪಿನ ಕಾರಣ ಇದನ್ನು ನೋಡಲು ಸಾಧ್ಯವೇ ಇಲ್ಲ. ಸಮೀಪದಲ್ಲಿ ಬುಧ ಮಂಗಳ ಇವೂ ಇರುತ್ತವೆಯಾದರೂ ಸೂರ್ಯನ ಬೆಳಕೇ ಅಡ್ಡ. ಸೋಹೋ ಎಂಬ ಉಪಗ್ರಹ ಕಳಿಸುವ ಸೂರ್ಯನ ಚಿತ್ರಗಳಲ್ಲಿ ಇವನ್ನು ಕಾಣಬಹುದು. ಉಪಗ್ರಹ ಸೂರ್ಯನ ಜೊತೆಗೆ ಬೇರೆ ನಕ್ಷತ್ರಗಳು ಮತ್ತು ಗ್ರಹಗಳನ್ನೂ ತೋರಿಸಬಲ್ಲುದು.

ಸಂಜೆಯ ಆಕಾಶ ಶುಭ್ರವಾಗಿದ್ದರೆ ಪಶ್ಚಿಮದ ಅಂಚಿನ ಆಕಾಶಗಂಗೆಯ ಭಾಗವನ್ನು ನೋಡಲು ಮರೆಯದಿರಿ. ದ್ರೌಪದಿ ಪುಂಜದಲ್ಲಿ ಆಂಡ್ರೊಮಿಡಾ ಗೆಲಾಕ್ಸಿ ಬರಿಗಣ್ಣಿಗೆ ಕಂಡಿತೆಂದರೆ ಆಕಾಶ ಶುಭ್ರವಾಗಿದೆ ಎಂದರ್ಥ. ಅಂದರೆ ಕೃತಕ ಬೆಳಕಿನ ಉಪದ್ರವವೂ ಇಲ್ಲ ಎಂದರ್ಥ. ಹಾಗಾದರೆ ಆಕಾಶಗಂಗೆಯ ಹರಿವನ್ನು ಕಾಣಬಹುದು. ನೈಋತ್ಯದಿಂದ ಈಶಾನ್ಯಕ್ಕೆ ಹರಿಯುವ ಈ ನದಿಯುದ್ದಕ್ಕೂ ನಕ್ಷತ್ರದ ದಟ್ಟಣೆ ಹೆಚ್ಚು ಎಂದು ಗಮನಿಸಬಹುದು. ರಾಜಹಂಸ, ಗರುಡ, ವೀಣಾ ಪುಂಜಗಳ ನಡುವೆ ಹಾದು ಕುಂತಿ ಪುಂಜದತ್ತ ಸಾಗುವುದು. ಈ ಮೂರು ಪುಂಜಗಳ ಪ್ರಖರ ನಕ್ಷತ್ರಗಳು ರಚಿಸುವ ತ್ರಿಕೋಣಕ್ಕೆ ಬೇಸಗೆ ತ್ರಿಕೋಣ ಎಂದೇ ಹೆಸರಿದೆ. ಪೂರ್ವದಲ್ಲಿ ವೃಷಭರಾಶಿಯ ನೋಟವಿದೆ. ಕೆಂಪು ನಕ್ಷತ್ರ ರೋಹಿಣಿ ಮತ್ತು ನಕ್ಷತ್ರ ಗುಚ್ಛ ಕೃತ್ತಿಕಾ ಕಾಣುವುವು. ಸುಮಾರು ಏಳು ಗಂಟೆಗೆ ಓರೈಯನ್ (ಮಹಾವ್ಯಾಧ) ಉದಯವಾಗುವುದು. ಆಗ ಆಕಾಶಗಂಗೆಯ ಇನ್ನೊಂದು ಭಾಗ ಕಾಣುತ್ತದೆ. ನವೆಂಬರ್ ಎಂದರೆ ಲಿಯೋನಿಡ್ಸ್ ಉಲ್ಕಾವೃಷ್ಟಿ ಎಂದೇ ಅನೇಕ ಹವ್ಯಾಸೀ ವೀಕ್ಷಕರು ನೆನಪಿನಲ್ಲಿಟ್ಟುಕೊಂಡಿರುತ್ತಾರೆ. ಪ್ರತಿ ವರ್ಷ ೧೭ರಂದು ಉಲ್ಕೆಗಳ ಮಳೆ ಉಂಟು. ಈ ಬಾರಿ ಚಂದ್ರನ ಬೆಳಕಿನ ಕಾರಣ ಕ್ಷೀಣ ಉಲ್ಕೆಗಳು ಕಾಣದಿರಬಹುದು.

ಈ ತಿಂಗಳು ಒಂದೆರಡು ಧೂಮಕೇತುಗಳು ದುರ್ಬೀನಿನಿಂದ ಕಾಣುವಷ್ಟು ಪ್ರಕಾಶ ಪಡೆಯುತ್ತವೆ. ೧೮೯೬ರಲ್ಲಿ ಪತ್ತೆಯಾಗಿ ಈವರೆಗೂ ಯಾರ ದೃಷ್ಟಿಗೂ ಸಿಕ್ಕದಿದ್ದ ಜಿಯೋಕೋಬಿನಿ ಅಲ್ಲದೆ ಮೆಕ್ನಾಟ್, ೧೭ ಹೋಮ್ಸ್ ದ ಅರೆಸ್ಟ್ ಇವು ಹೆಸರುಗಳು. ಮೆಕ್ನಾಟ್ ಸಂಜೆ ಸುಮಾರು ಏಳುಗಂಟೆಯ ವರೆಗೂ ಪಶ್ಚಿಮ ದಿಕ್ಕಿನಲ್ಲಿ ಕಾಣುತ್ತದೆ. ಹೋಮ್ಸ್ ಬೆಳಗಿನ ಜಾವ ಕಾಣುತ್ತದೆ. ಪೂರ್ವ ಎಂದು ಬೇರೆಯಾಗಿ ಹೇಳಬೇಕಾಗಿಲ್ಲ. ಸಾಧಾರಣವಾಗಿ ಧೂಮಕೇತು ಸಂಜೆ ಕಂಡರೆ ಪಶ್ಚಿಮದಲ್ಲಿ, ಮುಂಜಾವು ಕಂಡರೆ ಪೂರ್ವದಲ್ಲಿ ಎಂದೇ ಖಚಿತ. ದ ಅರೆಸ್ಟ್ ಎಂಬುದು ಕುಂಭದಿಂದ ದಕ್ಷಿಣಕ್ಕೆ ಬಕ ಎಂಬ ಪುಂಜದಲ್ಲಿ ಕಾಣುತ್ತದೆ.

ನವೆಂಬರ್ ೧ರ ಸಂಜೆ ಚಂದ್ರ ಮತ್ತು ಶುಕ್ರ

ಡಿಸೆಂಬರ್ ೧ರ ಸಂಜೆ ಚಂದ್ರ, ಶುಕ್ರ ಮತ್ತು ಗುರು

### ಖಗೋಳ ದಿನಚರಿ

೧ ಶುಕ್ರ ಚಂದ್ರ ಸಮಾಗಮ *
೩ ಗುರು ಚಂದ್ರ ಸಮಾಗಮ *
೬ ಚಾಂದ್ರಮಾಸದ ಮೊದಲ ಪಾದ
ನೆಪ್ಚೂನ್ ಆಚ್ಛಾದನೆ
(ಭಾರತಕ್ಕೆ ಕಾಣುವುದಿಲ್ಲ)
೧೩ ಹುಣ್ಣಿಮೆ ೧೧:೪೭ಕ್ಕೆ
೧೪ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೧೭ ಲಿಯೋನಿಡ್ಸ್ ಉಲ್ಕಾ ವೃಷ್ಟಿ *
೧೯ ಚಾಂದ್ರಮಾಸದ ಕೊನೆಯ ಪಾದ
೨೧ ಚಂದ್ರ - ಶನಿ ಸಮಾಗಮ
೨೭ ಅಮಾವಾಸ್ಯೆ ೨೨:೨೫ಕ್ಕೆ
ಚಂದ್ರ - ಸೂರ್ಯ - ಬುಧ - ಮಂಗಳ ಸಮಾಗಮ
೨೮ ಚಂದ್ರ - ಜ್ಯೇಷ್ಠಾ ಸಮಾಗಮ *
೨೯ ಮಂಗಳ - ಬುಧ - ಜ್ಯೇಷ್ಠಾ ಸಮಾಗಮ
ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
ಡಿಸೆಂಬರ್ ೧ ಶುಕ್ರ - ಗುರು - ಚಂದ್ರ ಸಮಾಗಮ *
ಶುಕ್ರದ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ)

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - [illegible]





## ಭವದ ಹಕ್ಕಿ

*ವಾಸುದೇವ ನಾಡಿಗ*

**ಪುಟ : ೮೮** **ಬೆಲೆ : ರೂ. ೪೦**

**ಸುಮುಖ ಪ್ರಕಾಶನ,** ನಂ. ೧೭೪೩/೨೮, ೧ನೇ ಮುಖ್ಯರಸ್ತೆ ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೨೩.

'ಮುದ್ದಣ ಕಾವ್ಯ ಪ್ರಶಸ್ತಿ' ಪಡೆದ ಈ ಕವಿತಾ ಸಂಕಲನವು ವೈವಿಧ್ಯಮಯ ವಸ್ತು ವಿಶೇಷತೆಯಿಂದ ಕೂಡಿದೆ. ಇಲ್ಲಿನ ಕವಿತೆಗಳು ಸೊಗಸಾಗಿದ್ದು 'ಭವ'ದ ನಭಕ್ಕೆ ಸಂಬಂಧಿಸಿವೆ. 'ಕವಿತೆ' – ಕಲ್ಪನಾಲೋಕದ ಮಾಂತ್ರಿಕ ಹೆಣಿಗೆ ಎಂಬುದು ಇಲ್ಲಿನ ಕವಿತೆಗಳಿಗೆ ಅನ್ವಯಿಸುವುದಿಲ್ಲ 'ಭವದ ಹಕ್ಕಿ', 'ಬಿಡುಗಡೆಯೆಡೆಗೆ', 'ಬದುಕುವ ಬಗೆಗೆ', 'ನಾನು', 'ಗೊಂದಲಿಗರು', 'ಹೆದ್ದಾರಿಗಳು', 'ಪ್ರಶ್ನೆಗಳು'– ಇಲ್ಲೆಲ್ಲಾ ಕವಿತೆಯ ವಸ್ತುವಿನೊಡನೆ ಭಾವತಲ್ಲೀನತೆಯ ಜತೆಗೆ ಚಿಂತನೆಯ ಗಾಢ ನಂಟಿದೆ. ಹಾಗಾಗಿ ಇಲ್ಲಿನ ಕವಿತೆಗಳಲ್ಲಿ ಚಿಂತನೆಯೇ ಮುಖ್ಯವಾಗಿ ಕವಿತೆಗಳು ಗಂಭೀರವಾಗಿಯೇ ಮನ ಸೆಳೆಯುತ್ತವೆ. ಕಿರಿದಾದ ಪದಗಳಲ್ಲಿ ಹಿರಿದಾದ ಅರ್ಥ ನೀಡುವ ಕವಿತೆಯ ಸಾಲುಗಳು ಮನೋಹರವಾಗಿವೆ.



## ಸಾಹಿತಿಗಳಿಗೆ ಒಂದು ಗತಿ ಕಾಣಿಸುವದು
**(ಲಲಿತ ಪ್ರಬಂಧಗಳು)**

*ಎಂ. ಡಿ. ಗೋಗೇರಿ*

**ಪುಟ : ೧೩೨** **ಬೆಲೆ : ರೂ. ೬೦**

**ಸಾಹಿತ್ಯ ಸೌಧ ಪ್ರಕಾಶನ,** ನವ ಅಯೋಧ್ಯಾನಗರ ಹಳೇ ಹುಬ್ಬಳ್ಳಿ, ಹುಬ್ಬಳ್ಳಿ - ೨೪.

ಇಲ್ಲಿನ ಪ್ರಬಂಧಗಳು ಈಗಾಗಲೆ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನಪ್ರಿಯವಾಗಿವೆ. ಇಲ್ಲಿ ಒಟ್ಟು ಇಪ್ಪತ್ತು ಲಲಿತ ಪ್ರಬಂಧಗಳಿವೆ. ಈ ಪ್ರಬಂಧಗಳ ಬರವಣಿಗೆ ಮುಖ್ಯವಾಗಿ ಎರಡು ರೀತಿಯಲ್ಲಿವೆ. ಮೊದಲನೆಯದು ಮುಖ್ಯ ವಿಚಾರವೊಂದರ ಬಗೆಗಿನ ಕಳಕಳಿಯಿಂದಲೇ ರೂಪುಗೊಂಡಿದ್ದರೂ ಸರಳವಾಗಿ ಹಾಸ್ಯಭರಿತವಾಗಿ ಮೂಡಿಬಂದ ಪ್ರಬಂಧಗಳು. 'ಸಾಹಿತಿಗಳಿಗೆ ಒಂದು ಗತಿ ಕಾಣಿಸುವದು', 'ಜಗತ್ತೇ ಜೇಬಿನಲ್ಲಿ', 'ಬಾರ್ ಓಪನಿಂಗ್', 'ಗುನ್ಯಾ ಡಾಕ್ಟರ್', 'ನಾಯಿ ಇದೆ ಎಚ್ಚರಿಕೆ'– ಇಂತಹ ಪ್ರಬಂಧಗಳು. ಎರಡನೆಯವು, ಗಂಭೀರವಾದ ವಿಚಾರಗಳನ್ನು ಸರಳವಾಗಿ, ಆಪ್ತವಾಗಿ ಬರೆದ ಎಳೆಗಳು. 'ಬದುಕಿನ ಮೌಲ್ಯಗಳು', 'ನನ್ನ ಗುರುಗಳು' – ಇವು ಈ ಬಗೆಯವು ಮತ್ತೆ ಮತ್ತೆ ಓದಿ ಖುಷಿಕೊಡುತ್ತವೆ.

## ಮೀನ್ ಪಳ್ದಿ

*ಡಾ॥ ಆರ್. ವಿ. ಭಂಡಾರಿ*



**ಪುಟ : xiv + ೧೬೬** **ಬೆಲೆ : ರೂ. ೧೦೦**

**ಅಕ್ಷಯ ಪ್ರಕಾಶನ,** ನಂ. ೨೭೯, ೩ನೇ ಮುಖ್ಯ ರಸ್ತೆ ೨ನೇ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು-೧೯.

ಕನ್ನಡದ ಗಟ್ಟಿ ಬರಹಗಾರರಲ್ಲಿ ಒಬ್ಬರಾದ ಆರ್. ವಿ. ಭಂಡಾರಿಯವರು ವಿವಿಧ ಬರಹಗಳ ಮೂಲಕ ಪರಿಚಿತರಾದವರು. 'ಮೀನ್ ಪಳ್ದಿ' ಕಥಾ ಸಂಕಲನವು ಮೂವತ್ತು ವರ್ಷಗಳಲ್ಲಿ ಅವರು ಆಗಾಗ ಪತ್ರಿಕೆಗಳಿಗೆ ಬರೆದ ಕತೆಗಳು. ಈ ಸಂಕಲನದಲ್ಲಿ ಬಹುಮುಖೀ ವಸ್ತು ಸ್ವರೂಪವುಳ್ಳ ಹದಿನೇಳು ಕತೆಗಳು ಇವೆ. ಇವೆಲ್ಲಾ ಸಮಾಜದ ಅಧಿಕಾರಸ್ಥ ಜನರ ನೆರಳಿನಲ್ಲಿ ಜೀವನ ಸಾಗಿಸುವ ಕೆಳವರ್ಗ, ಕೆಳಜಾತಿ ದೆಸೆಯಿಂದ ನರಕದ ಬದುಕನ್ನು ಸಾಗಿಸುತ್ತಿರುವ ಜನರ ಪರಿಸ್ಥಿತಿಯನ್ನು ಚೆನ್ನಾಗಿ ವಿಶ್ಲೇಷಿಸುತ್ತವೆ. ಇಲ್ಲಿನ ಕತೆಗಳ ರಚನೆಯ ಹಿಂದೆ ನಿರಂತರ ತುಡಿವ ಮನಸ್ಸಿದೆ. 'ಮರದ ಕೆಳಗೆ ಬಿದ್ದ ಕೋಡ' ಕತೆಯ 'ನಾಯಕ'ನಿಗೆ ನೀಡಿರುವ ಮುಖ್ಯಗಮನವು ನಂತರದ ಕತೆಗಳಲ್ಲಿ ಇತರೆಡೆಗೂ ಹರಿದಿದೆ.



## ಸಮುದ್ರ ಮತ್ತು ಮಳೆ

*ನಾಗತಿಹಳ್ಳಿ ರಮೇಶ*

**ಪುಟ : xxvi + ೧೦೫** **ಬೆಲೆ : ರೂ. ೭೫**

**ಸೃಷ್ಟಿ ಪ್ರಕಾಶನ,** ಸ್ಪರ್ಧಾ ಪ್ರಪಂಚ, ನಂ. ೫೫೦, ೨ನೇ ಮೈನ್ ವಾಟರ್ ಟ್ಯಾಂಕ್ ರಸ್ತೆ, ಆರ್. ಬಿ. ಐ. ಲೇಔಟ್ ಪುಟ್ಟೇನಹಳ್ಳಿ, ಜೆ. ಪಿ. ನಗರ, ೭ನೇ ಫೇಸ್, ಬೆಂ. - ೭೮.

ಬಹುಮುಖ ಪ್ರತಿಭೆಯ, ಸೂಕ್ಷ್ಮ ಮನಸ್ಸಿನ ಕ್ರಿಯಾಶೀಲ ಲೇಖಕರಾದ ನಾಗತಿಹಳ್ಳಿ ರಮೇಶರ ಮೊದಲ ಪದ್ಯ ಕೃತಿಯಿದು. ಮೊದಮೊದಲ ಕವನಗಳಾದರೂ ಎಳಸಿಲ್ಲದೆ, ತತ್ತ್ವಪದ, ಜಾನಪದ ಹಾಗೂ ಮಣ್ಣಿನ ಸೊಗಡಿನಿಂದಲೇ ಆತ್ಮ ಸಂಬಂಧಗಳನ್ನು ನಿವೇದಿಸುವ ಸಾಂಸ್ಕೃತಿಕ ಸಂಕಥನಗಳಿವು. 'ಸಮುದ್ರ ಮತ್ತು ಮಳೆ' ಎಂಬುದು 'ಅವ್ವ'ನಿಗೂ ಲೇಖಕನಿಗೂ ಬೆಳೆದ ಪ್ರೀತಿಯ ಕುರುಹಾಗಿ, 'ಅವ್ವ'ನನ್ನು ಜೀವಂತದ ಸೆಲೆಯಂತೆ ಪ್ರತೀಕದಂತೆ ಚಿತ್ರಿಸಿರುವ ಪದ್ಯಗಳಿವು. 'ಅವ್ವ', 'ಅಪ್ಪ', 'ಅಜ್ಜ' – ಹೀಗೆ ಇಲ್ಲಿನ ಈ ಕವಿತೆಗಳು ಬದುಕಿಗಂಟಿದ ನಂಟಿನಿಂದಲೇ ಅರಿವು ಮೂಡಿಸಿದ ಫಲಗಳಾಗಿವೆ. ಇದರೊಟ್ಟಿಗೆ ವೈವಿಧ್ಯಮಯ ವಸ್ತು ವಿಶೇಷತೆಯನ್ನೂ ಒಳಗೊಂಡಿವೆ.



## ಶರಣ ಸಾಹಿತ್ಯ ಮತ್ತು ಸಂತ ಸಾಹಿತ್ಯ : ಜನಪರ ಚಿಂತನೆಗಳು

*ಡಾ॥ ಕಾಶೀನಾಥ ಅಂಬಲಗೆ*

**ಪುಟ : viii + ೭೨** **ಬೆಲೆ : ರೂ. ೫೦**

**ಪ್ರಗತಿ ಪ್ರಕಾಶನ,** 'ಬೇವು ಬೆಲ್ಲ', ಜಯನಗರ ವಿಶ್ವವಿದ್ಯಾಲಯ ರಸ್ತೆ, ಗುಲಬರ್ಗಾ – ೫೮೫ ೧೦೫.

ಶರಣರ ಸಾಹಿತ್ಯ ಮತ್ತು ಉತ್ತರ ಭಾರತದ ಸಂತರ ಸಾಹಿತ್ಯವನ್ನು ಒಟ್ಟಿಗೆ ಪರಿಚಯಿಸುವ ಕೃತಿ ಇದಾಗಿದೆ. ಮನುಷ್ಯನ ಘನತೆಯನ್ನು ಎತ್ತಿಹಿಡಿಯುವ, ಸಮಾನತೆ, ವರ್ಣರಹಿತ ಸಮಾಜ, ಸರ್ವರಿಗೂ ಸಮಬಾಳು ಎಂಬ ವಿಚಾರಗಳಿಂದ ಕೂಡಿದ ಈ ಎರಡೂ ಸಾಹಿತ್ಯ ವಿಚಾರಗಳನ್ನು ಇಲ್ಲಿನ ಲೇಖನಗಳು, ಸರಳವಾಗಿ ಬಿಡಿ ಬಿಡಿಯಾಗಿ ಕಟ್ಟಿಕೊಡುತ್ತವೆ. ವಚನಗಳ, ಕೀರ್ತನೆಗಳ ಮೂಲಕವೇ 'ಕಾಯಕ', 'ಮಹಿಳಾ ಪರ ಚಿಂತನೆ', 'ಪುರೋಹಿತವಾದ', 'ಮೂರ್ತಿಪೂಜೆ', 'ಭೂತ-ಬೇತಾಳಗಳು' 'ವಿನಯ', 'ಸತ್ಸಂಗ', 'ಅರಿವೇ ಗುರು' – ಮೊದಲಾದ ವಿಷಯಗಳ ತೌಲನಿಕ ಅಧ್ಯಯನದ ವಿವರಗಳು ಇಲ್ಲಿವೆ. ಪಾಂಡಿತ್ಯದ ಭಾರದಿಂದ ಬೀಗದೆ, ಸರಳವಾಗಿ, ಹಿತಮಿತವಾಗಿರುವ ಇಲ್ಲಿನ ಬರವಣಿಗೆ ಸಾಮಾನ್ಯರ ಓದಿಗೂ ದಕ್ಕುವಂತಿದೆ. ಶರಣರ, ಸಂತರ ವಿಚಾರ ಕುರಿತ ಉತ್ತಮ ಪ್ರವೇಶಿಕೆ ಈ ಕೃತಿಯಲ್ಲಿದೆ. ಸಾರ್ವಕಾಲಿಕವಾದ ಜೀವಪರ ಚಿಂತನೆಗಳಿಗೆ ಮಿಡಿವ ಲೇಖಕರ ಆಸಕ್ತಿಯನ್ನು ಇಲ್ಲಿನ ಪ್ರತಿಯೊಂದು ಲೇಖನದಲ್ಲೂ ಕಾಣಬಹುದಾಗಿದೆ.

## ಅಂಬೇಡ್ಕರ್ ಸಂವೇದನೆ

*ಡಾ॥ ಎಚ್. ಟಿ. ಪೋತೆ*



**ಪುಟ : x + ೧೧೬** **ಬೆಲೆ : ರೂ. ೧೦೦**

**ಕುಟುಂಬ ಪ್ರಕಾಶನ,** ವರ್ಷಾ ನಿಲಯ, ಪ್ಲಾಟ ನಂ. ೮೧/೮೨ ಪ್ರಬುದ್ಧನಗರ ಕುಸುನೂರ, ವಿಶ್ವವಿದ್ಯಾಲಯ ಅಂಚೆ ಗುಲಬರ್ಗಾ.

ಪ್ರಗತಿಪರ ಚಿಂತಕರಾದ, ದಲಿತ, ಬಂಡಾಯ ನೆಲೆಯಲ್ಲಿ ಸಾಹಿತ್ಯ ಚಟುವಟಿಕೆ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಡಾ॥ ಎಚ್. ಟಿ. ಪೋತೆಯವರ ಮಹತ್ವದ ಕೃತಿಯಿದು. ಒಟ್ಟಾರೆಯಾಗಿ ಅಂಬೇಡ್ಕರ್ ಸಂವೇದನೆಯನ್ನು ಹನ್ನೊಂದು ಲೇಖನಗಳ ಮೂಲಕ ಇಲ್ಲಿ ಕಟ್ಟಿಕೊಟ್ಟಿದ್ದಾರೆ. 'ಅಂಬೇಡ್ಕರ್ - ಸಾಮಾಜಿಕ ಚಳುವಳಿ', 'ಅಂಬೇಡ್ಕರ್ ಬದುಕು - ಬುದ್ಧನ ಬೆಳಕಿನಲ್ಲಿ', 'ಅಂಬೇಡ್ಕರ್ – ಗಾಂಧಿ ಮುಖಾಮುಖಿ', 'ಅಂಬೇಡ್ಕರ್- ಲೋಹಿಯಾ ಸಾಂಸ್ಕೃತಿಕ ಅನುಸಂಧಾನ' – ಹೀಗೆ ಕ್ರಮವಾಗಿ ಅಂಬೇಡ್ಕರ್ ವಿಚಾರಗಳ ವಸ್ತುನಿಷ್ಠ ಚಿಂತನೆ, ವಿಶ್ಲೇಷಣೆ ಇಲ್ಲಿದೆ. 'ಅಂಬೇಡ್ಕರ್ ಇಲ್ಲದ ಐವತ್ತು ವರ್ಷಗಳು' – ಎಂಬ ಕೊನೆಯ ಲೇಖನ ಅಂಬೇಡ್ಕರ್ ಚಿಂತನೆ ಮತ್ತು ದಲಿತರ ಬದುಕು - ಎರಡನ್ನೂ ಮುಖಾಮುಖಿಯಾಗಿಸಿ, ದಲಿತರು ಮಾಡಿಕೊಳ್ಳಬೇಕಾದ ಆತ್ಮಾವಲೋಕನದ ಅಗತ್ಯವನ್ನು ಒತ್ತಿಹೇಳುತ್ತಾ, ತತ್ತ್ವ ಅಥವಾ ಸಿದ್ಧಾಂತಗಳು ಕ್ರಿಯಾಶೀಲವಾಗುವ ನೆಲೆಗಳನ್ನು ಚರ್ಚಿಸಿದೆ. ಅಂಬೇಡ್ಕರ್ ವಿಚಾರಗಳನ್ನು ಕುರಿತ ಗಟ್ಟಿಯಾದ ಬರಹಗಳಿವು.

**– ಡಾ॥ ಸುಜಾತ ಲಕ್ಷ್ಮೀಪುರ**
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯

# ಇಂಥವರು ಇದ್ದರು, ಮುಂದೆಯೂ ಇರುತ್ತಾರೆ

**ಜೀ**ವನಕ್ಕೆ ಅನೇಕ ಪಥಗಳಿವೆ. ಪಾವಿತ್ರ್ಯದ ಮಜಲು ಜೀವನಕ್ಕೆ ರಂಗು ತಂದಿದೆ. ಮಾನವ ಮಾನವರಲ್ಲಿ ಇರುವ ಭೇದ ಬಹುಶಃ ಯಾವ ಪ್ರಾಣಿ ವರ್ಗದಲ್ಲಿ ಇರಲಾರದು. ಎಷ್ಟೊಂದು ಒಳ ಸುಳಿಗಳನ್ನು ಬೆಳೆಸಿಕೊಂಡು ಮಾನವ ಬದುಕುತ್ತಿದ್ದಾನಲ್ಲ! ಇದೆಲ್ಲ ಇಹದ ಬದುಕಿಗಾಗಿಯೇ ?

ಮನುಷ್ಯ ಜೀವನದಲ್ಲಿ ಅತೀ ಎತ್ತರದಲ್ಲಿ ಇರುವ ಮೌಲ್ಯವೇ ತ್ಯಾಗವೆಂದು ಹೇಳಬಹುದಾಗಿದೆ. ಈ ಮೊದಲು ತ್ಯಾಗವೇ ಜೀವನ, ಜೀವನವೇ ತ್ಯಾಗವಾಗಿತ್ತು. ಇದಲ್ಲದೆ ಜೀವನ ನಿರ್ವಹಣೆಯಲ್ಲಿ ಶಿಸ್ತು ಇತ್ತು ಮತ್ತು ಅಗಾಧವಾದ ಮಾನವ ಪ್ರೇಮ ಸುಳಿದಾಡುತ್ತಿತ್ತು. ಇಂಥ ಪರಂಪರೆಯಲ್ಲಿ ಮನುಷ್ಯ ಸ್ವಾರ್ಥಿಯಾಗುತ್ತಲೇ ನಡೆದು ತನ್ನ ಮಾತ್ಸರ್ಯ, ಮೋಸ, ವಂಚನೆ, ಲೋಲುಪತೆಯ ದೊಡ್ಡ ಬೆಟ್ಟವನ್ನೇ ನಿರ್ಮಿಸಿದ್ದಾನೆ.

ಬಹು ವಿಧದ ಮಹತ್ವಾಕಾಂಕ್ಷೆ, ಅದೆಷ್ಟೋ ಉದ್ಯೋಗ, ಪ್ರಶಸ್ತಿ, ಪುರಸ್ಕಾರ ಹುಟ್ಟಿಸಿಕೊಂಡಿರುವ ಮನುಜ ಇನ್ನೂ ಮಾನವ ಗುಣಗಳನ್ನು ಬಿಟ್ಟಿಲ್ಲ; ಇದೇ ಸಂತೋಷದ ಸುದ್ದಿ. ಜೀವನ ಸ್ಥಿರವಾಗಿದೆ. ಜೀವನದೊಳಗೆ ಕಟ್ಟುನಿಟ್ಟಿನ ಮನಸ್ಸು ಕಾಲ ಕಾಲಕ್ಕೆ ಸ್ಫೂರ್ತಿ ನೀಡಿದ್ದರಿಂದಲೇ ಯುಗದ ಧರ್ಮ ನಿರ್ಮಿತಿಗೊಂಡು ಬಾಳಲು ಬದುಕಲು ಪ್ರೇರಣೆ ನೀಡಿದ್ದು ಇತಿಹಾಸದ ಭಾಗವೇ ಆಗಿದೆ. ಮನುಜನ ಬದುಕು ಬಹಳಷ್ಟು ತೇಜೋಮಯಗೊಳ್ಳಲು ಜನರ ಮಧ್ಯೆ ಕೆಲವು ವಿಶಿಷ್ಟ ವ್ಯಕ್ತಿಗಳು ಇರುತ್ತಾರೆ; ಅವರು ಜೀವನದ ಮೂಲಭೂತ ಸ್ವಾರಸ್ಯ ಸಡಗರವನ್ನು ಅರುಹುವರಾಗಿರುತ್ತಾರೆ. ಅಂಥ ಅನೇಕ ಉದಾಹರಣೆಗಳನ್ನು ನಾವು ನಿತ್ಯ ನೋಡುತ್ತೇವೆ. ಹೀಗೆ ನೋಡಿಕೊಂಡು ನಮ್ಮ ಜೀವನದ ನಿಲುವುಗಳನ್ನು ಒಲವುಗಳನ್ನು ಬದಲಿಸಿಕೊಂಡು ಬದುಕುವುದು ಒಳಿತೆಂದು ಭಾವಿಸುವಂತೆ ತೀವ್ರ ಚಿಂತನೆಗೆ ಒಳಗಾಗುತ್ತೇವೆ. ಗಾಂಧೀಜಿಯ ಜೀವನದೊಂದಿಗೆ ಅನೇಕ ಇಂಥ ಸಂಗತಿಗಳು ನಡೆದು ಅವರ ಜೀವನವನ್ನು ಪ್ರಭಾವಿಸಿದ್ದು ಅವರ ಆತ್ಮಕಥೆಯ ಭಾಗವೇ ಆಗಿದೆ. ಅವರ ಆತ್ಮ ಚರಿತ್ರೆಯಲ್ಲಿ ಸಂಭವಿಸಿದ ಒಂದು ಘಟನೆ ನಮ್ಮ ಜೀವನದೊಳಗೆ ಇಣುಕಿ ನೋಡಲು ಹಚ್ಚುವಂತಿದೆ !

''ಆಕೆಯ ಹೆಸರು ಸ್ಲೆಶಿನ್ ಎಂದು. ಕಲ್ಲನ್‌ಬಾಕ್ ನನಗೆ ಆಕೆಯ ಪರಿಚಯ ಮಾಡಿಸಿದರು. ಅವಳು ನನ್ನಲ್ಲಿ ಕೆಲಸಕ್ಕೆ ಸೇರಿದಾಗ ಅವಳ ವಯಸ್ಸು ಸುಮಾರು ೧೭ ಆಗಿತ್ತು. ಆಕೆಯ ವಿಲಕ್ಷಣ ಸ್ವಭಾವಗಳಲ್ಲಿ ಕೆಲವನ್ನ ಸಹಿಸಲು, ಒಂದೊಂದು ವೇಳೆ, ನನಗಾಗಲೀ ಕಲ್ಲನ್‌ಬಾಕ್ ರವರಿಗಾಗಲೀ ಸಾಧ್ಯವಾಗುತ್ತಿರಲಿಲ್ಲ. ಅವಳು ನಮ್ಮಲ್ಲಿ ಬಂದುದು ಸ್ಟೆನೋ ಟೈಪಿಸ್ಟ್ ಆಗುವುದಕ್ಕಿಂತ ಹೆಚ್ಚಾಗಿ ಕೆಲಸ ಮಾಡುವ ಅನುಭವವನ್ನು ಹೊಂದುವುದಕ್ಕಾಗಿ. ವರ್ಣದ್ವೇಷ ಅವಳ ಸ್ವಭಾವಕ್ಕೆ ವಿರುದ್ಧವಾಗಿದ್ದಿತು. ವಯಸ್ಸನ್ನಾಗಲಿ, ಅನುಭವವನ್ನಾಗಲಿ ಅವಳು ಲಕ್ಷ್ಯ ಮಾಡುವಂತೆ ತೋರುತ್ತಿರಲಿಲ್ಲ. ಯಾರ ವಿಚಾರದಲ್ಲಿಯೇ ಆಗಲಿ ತನ್ನ ಮನಸ್ಸಿಗೆ ತೋರಿದ ಅಭಿಪ್ರಾಯಗಳನ್ನು ಅವರ ಎದುರಿಗೆ ಹೇಳುವುದಕ್ಕಾಗಲಿ, ಅವರಿಗೆ ಅವಮಾನ ಮಾಡುವುದಕ್ಕಾಗಿ ಅವಳು ಹಿಂತೆಗೆಯುತ್ತಿರಲಿಲ್ಲ. ಆಕೆಯ ಈ ರಭಸದಿಂದ ನನಗೆ ಅನೇಕ ವೇಳೆ ಕಷ್ಟವುಂಟಾಗುತ್ತಿತ್ತು. ಆದರೆ ಆಕೆಯ ಅಕೃತ್ರಿಮ ಸರಳ ಸ್ವಭಾವದಿಂದ ಆ ಕಷ್ಟಗಳು ಕೂಡಲೆ ಪರಿಹಾರವಾಗುತ್ತಿದ್ದವು. ಆಕೆಯ ಇಂಗ್ಲಿಷ್ ಭಾಷೆ ನನ್ನ ಭಾಷೆಗಿಂತ ಚೆನ್ನಾಗಿದೆಯೆಂದು ನಾನು ಭಾವಿಸಿದ್ದುದರಿಂದಲೂ ಮತ್ತು ಆಕೆಯ ಕರ್ತವ್ಯ ನಿಷ್ಠೆಯಲ್ಲಿ ನನಗೆ ಪೂರ್ಣ ನಂಬಿಕೆಯಿದ್ದುದರಿಂದಲೂ ಆಕೆ ಟೈಪ್ ಮಾಡಿದ ಅನೇಕ ಕಾಗದಗಳಿಗೆ ಓದದೆಯೇ ರುಜು ಹಾಕುತ್ತಿದ್ದೆ.

''ಆಕೆಯ ತ್ಯಾಗವೂ ಅಪಾರವಾಗಿತ್ತು. ಬಹಳ ಕಾಲದವರೆಗೆ ಆಕೆ ತಿಂಗಳಿಗೆ ಆರು ಪೌಂಡುಗಳಿಗಿಂತ ಹೆಚ್ಚು ಸಂಬಳ ತೆಗೆದುಕೊಳ್ಳುತ್ತಿರಲಿಲ್ಲ. ಹತ್ತು ಪೌಂಡಿಗಿಂತ ಹೆಚ್ಚಾಗಿ ತೆಗೆದುಕೊಳ್ಳಲು ಕಡೆಯವರೆಗೆ ಒಪ್ಪಲೇ ಇಲ್ಲ. ಹೆಚ್ಚಾಗಿ ತೆಗೆದುಕೋ ಎಂದು ನಾನು ಹೇಳಿದಾಗಲೆಲ್ಲ ಆಕೆ 'ನಾನು ಸಂಬಳಕ್ಕಾಗಿ ಬಂದಿಲ್ಲ. ನನಗೆ ನಿಮ್ಮೊಂದಿಗೆ ಕೆಲಸ ಮಾಡಲು ಇಷ್ಟ. ನಿಮ್ಮ ಧ್ಯೇಯಗಳು ನನಗೆ ಪ್ರಿಯ. ಆದುದರಿಂದ ನಾನು ನಿಮ್ಮೊಂದಿಗೆ ಇದ್ದೇನೆ,' ಎಂದು ಗದರಿಸುತ್ತಿದ್ದಳು.

''ಒಂದು ಸಲ ಆಕೆ ನನ್ನಿಂದ ೪೦ ಪೌಂಡುಗಳನ್ನು ತೆಗೆದುಕೊಳ್ಳುವ ಸಂದರ್ಭವುಂಟಾಯಿತು. ಸಾಲವಾಗಿ ಮಾತ್ರ ತೆಗೆದುಕೊಳ್ಳುತ್ತೇನೆಂದು ಆಕೆ ಹಠ ಹಿಡಿದಳು. ಒಂದ ವರುಷ ಸಾಲವನ್ನು ಪೂರ್ತಿ ಹಿಂದಿರುಗಿಸಿದಳು. ಅವಳ ಧೈರ್ಯ, ಅವಳ ತ್ಯಾಗಕ್ಕೆ ಸಮವಾಗಿತ್ತು. ಸ್ಫಟಿಕದಂತೆ ಪವಿತ್ರರಾಗಿ ವೀರತ್ವದಲ್ಲಿ ಕ್ಷತ್ರಿಯರನ್ನು ಸಹ ಲಜ್ಜೆಗೊಳಿಸುವ ಕೆಲವು ಮಹಿಳೆಯರ ಪರಿಚಯದ ಸೌಭಾಗ್ಯ ನನಗೆ ಇದೆ. ಇಂತಹವರಲ್ಲಿ ಈ ಬಾಲಿಕೆಯೂ ಒಬ್ಬಳು.''

ಇವತ್ತಿನ ಪರಿಸ್ಥಿತಿ ? ಈ ಜಗತ್ತು ಇಷ್ಟೊಂದು ನಿರಾಳತೆಯಿಂದ ವರ್ತಿಸಲು ಬಿಡಲಾರದು. ಜಾಗತೀಕರಣ, ಔದ್ಯೋಗೀಕರಣ ಮುಂತಾದವುಗಳೊಂದಿಗೆ ವ್ಯಾಪಾರೀಕರಣ ಸೇರಿಕೊಂಡು ಮನುಷ್ಯರೆಲ್ಲರೂ ಹೆಚ್ಚೆಚ್ಚು ಸಂಬಳವನ್ನು ಬೇಡುವ ಕೂಲಿಗಳಾಗುತ್ತಿದ್ದಾರೆ. ಇದು ಅದೆಷ್ಟೋ ಮಾನವ ಮೌಲ್ಯಗಳನ್ನು ಹೀನಾಯಗೊಳಿಸಿದೆ ಎಂಬುದಕ್ಕೆ ಶಬ್ದಗಳೇ ಸಾಲದು.

ತ್ಯಾಗಕ್ಕೆ ಇರುವ ಮಹತ್ವ ಇನ್ನೊಂದಕ್ಕಿರಲಾರದು. ತ್ಯಾಗ ದಿವ್ಯತೆಯ ಇನ್ನೊಂದು ರೂಪವೇ ಆಗಿದೆ. ಹಾಸಿಗೆ ಇದ್ದಷ್ಟು ಕಾಲು ಚಾಚು ಎನ್ನುವ ಮಾತೊಂದಿದೆ. ಈ ಮಾತಿನಲ್ಲಿ ಜೀವನ ಸಾಗಿಸುವ ಮಹತ್ತರ ಸೂತ್ರವೇ ಅಡಗಿದೆ. ಆದರೆ ನಾವಿಂದು ವೈಭವ ಸಾಗರದ ಬೆನ್ನು ಹತ್ತಿ ಸಂತೃಪ್ತಿಯ ಮಹಾಸಾಗರವನ್ನು ಕಳೆದುಕೊಂಡವರಾಗಿದ್ದೇವೆ. ಮನುಷ್ಯನ ಬದುಕು ತೀರ ಅಧಃಪತನಕ್ಕೆ ಸಿಕ್ಕಿ ಯಾವುದೋ ಸರಪಳಿಯೊಳಗೆ ಬಂಧಿತವಾದಂತೆ ಭಾಸವಾಗುತ್ತಿದೆ. ಈ ಬಂಧಿತನವನ್ನು ಬಿಡಿಸುವ ತಾಕತ್ತು, ನಮ್ರತೆ ಮತ್ತು ವ್ರತನಿಷ್ಠೆಯಲ್ಲಿಯೇ ಅಡಕಗೊಂಡಿದೆ. ನಾವು ಹೇಗೆ ಬದುಕಬೇಕು, ಎಂಬುದಕ್ಕೆ ಲಾಲ್ ಬಹಾದ್ದೂರ್ ಶಾಸ್ತ್ರಿಯವರ ಜೀವನ ನಮಗೆ ದಾರಿ ತೋರುತ್ತದೆ. ಅವರು ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿದ್ದಾಗ ಒಬ್ಬ ೪೦ ರೂಪಾಯಿಗಾಗಿ ಪೀಡಿಸತೊಡಗಿದ. ನನ್ನ ಹತ್ತಿರ ಅಷ್ಟೊಂದು ಹಣವಿಲ್ಲೆಂದು ಅವನಿಗೆ ತಿಳಿಹೇಳಿದರು. ಏನಾದರೂ ಮಾಡಿ ಹಣ ಕೊಡಬೇಕೆಂದು ಪಟ್ಟುಹಿಡಿದ. ಈ ಸಂದರ್ಭ ಅರಿತು ಶಾಸ್ತ್ರಿಯವರ ಧರ್ಮಪತ್ನಿ ತನ್ನ ಹತ್ತಿರ ಇರುವ ೪೦ರೂಪಾಯಿ ಕೊಟ್ಟು ಆತನನ್ನು ಕಳುಹಿಸಿಕೊಡುತ್ತಾಳೆ. ಅವನು ಹೋದ ನಂತರ ಇಷ್ಟೊಂದು ಹಣ ನಿನ್ನ ಹತ್ತಿರ ಹೇಗೆ ಬಂದಿತು, ಎಂದು ವಿಚಾರಿಸಿದಾಗ ಸಂಸಾರ ನಡೆಸುವಾಗ ತಿಂಗಳಿಗೆ ೪೦ ರೂಪಾಯಿ ಖರ್ಚು ಮಾಡಿ ನೀವು ಕೊಟ್ಟ ಸಂಬಳದ ೫೦ ರೂಪಾಯಿಗಳಲ್ಲಿ ಹತ್ತು ರೂಪಾಯಿ ಈ ನಾಲ್ಕು ತಿಂಗಳು ಉಳಿತಾಯ ಮಾಡಿದ್ದನ್ನು ಕೊಟ್ಟೆ ಅಂದಳು. ಆವಾಗ ಶಾಸ್ತ್ರೀಜಿಯವರು ಏನೂ ಮರುಮಾತಾಡಲಿಲ್ಲ; ಆದರೆ ಕಾಂಗ್ರೆಸ್ ಕಚೇರಿಗೆ ಬಂದು ನನ್ನ ಸಂಸಾರ ನಡೆಸಲು ರೂ. ೪೦ ಮಾತ್ರವೇ ಅಗತ್ಯ. ಹೀಗಾಗಿ ಈ ತಿಂಗಳಿನಿಂದ ನನ್ನ ಪಗಾರವು ರೂ. ೪೦ ಮಾತ್ರ ಕೊಡುವಂತೆ ವಿನಂತಿ ಮಾಡಿಕೊಂಡರು.

ಒಬ್ಬರು ಇಬ್ಬರು ಇಂಥ ತ್ಯಾಗಕ್ಕೆ ಸಿದ್ಧರಾದರೆ ಸಾಲದು; ಇಂದು ಅಗತ್ಯಕ್ಕೆ ಬೇಕಾಗುವಷ್ಟು ಮಾತ್ರ

> ತ್ಯಾಗಕ್ಕೆ ಇರುವ ಮಹತ್ವ ಇನ್ನೊಂದಕ್ಕಿರಲಾರದು. ತ್ಯಾಗ ದಿವ್ಯತೆಯ ಇನ್ನೊಂದು ರೂಪವೇ ಆಗಿದೆ. ಹಾಸಿಗೆ ಇದ್ದಷ್ಟು ಕಾಲು ಚಾಚು ಎನ್ನುವ ಮಾತೊಂದಿದೆ. ಈ ಮಾತಿನಲ್ಲಿ ಜೀವನ ಸಾಗಿಸುವ ಮಹತ್ತರ ಸೂತ್ರವೇ ಅಡಗಿದೆ. ಆದರೆ ನಾವಿಂದು ವೈಭವ ಸಾಗರದ ಬೆನ್ನು ಹತ್ತಿ ಸಂತೃಪ್ತಿಯ ಮಹಾಸಾಗರವನ್ನು ಕಳೆದುಕೊಂಡವರಾಗಿದ್ದೇವೆ. ಮನಷ್ಯನ ಬದುಕು ತೀರ ಅಧಃಪತನಕ್ಕಿಳಿದು ಯಾವುದೋ ಸರಪಳಿಯೊಳಗೆ ಬಂಧಿತವಾದಂತೆ ಭಾಸವಾಗುತ್ತಿದೆ.
>
> ಸ. ರಾ. ಸುಳಕೂಡೆ

ಸಾರ್ವಜನಿಕ ಹಣದಲ್ಲಿ ಕೂಲಿ ತೆಗೆದುಕೊಳ್ಳುವ ಪರಿಪಾಠ ಬೆಳೆಯಬೇಕಾಗಿದೆ. ಪಗಾರಕ್ಕಾದರೂ ನಮ್ಮ ಆಸೆ ಸೀಮಿತ ಗೊಂಡರೆ ಅದೊಂದೇ ದೊಡ್ಡ ತ್ಯಾಗವಾಗಬಹುದು.

ಇಲ್ಲಿ ಇನ್ನೊಂದು ಪ್ರಸಂಗವನ್ನು ನಿವೇದಿಸುವುದು ಅಗತ್ಯವೆಂದು ಭಾವಿಸಿ ಉಲ್ಲೇಖಿಸಲಾಗಿದೆ. ಒಬ್ಬ ಸಂಪಾದಕನಿಗೆ ಆಸ್ಪತ್ರೆಯಲ್ಲಿರುವ ಪತಿಯನ್ನು ಗುಣಪಡಿಸಲು ಹಣವಿಲ್ಲದ್ದಕ್ಕೆ ಸಹಾಯ ಕೋರಿ ಒಂದು ಮನವಿ ಬಂದಿತು. ಆ ಮನವಿಯನ್ನು ನೋಡಿ ಮನಕರಗಿದ ಸಂಪಾದಕರು ಸಾರ್ವಜನಿಕರಿಂದ ಸಹಾಯ ಕೋರಿ ಮನವಿಯನ್ನು ಮುದ್ರಿಸಿದರು. ಆ ಮನವಿ ಓದಿದ ಸಾಧ್ವಿಯೊಬ್ಬಳು ತನ್ನ ಹತ್ತಿರ ಹಣವಿಲ್ಲದಿದ್ದರೂ ಸಹಾಯ ಮಾಡುವ ಮನಸ್ಸು ಮಾಡಿದಳು. ಅವಳು ಒಂದು ಲಾಟರಿ ಟಿಕೇಟನ್ನು ಕೊಂಡುಕೊಂಡು, ಮನವಿದಾರರ ವಿಳಾಸಕ್ಕೆ ಕಳುಹಿಸಿದಳು. ಆ ಲಾಟರಿ ತಿಕೇಟಿಗೆ ಎರಡೂವರೆ ಲಕ್ಷ ಬಹುಮಾನ ಬಂದಿತು. ಅವಳ ಗಂಡನ ಚಿಕಿತ್ಸೆಗೆ ಒಂದೂವರೆ ಲಕ್ಷ ಮಾತ್ರ ಬೇಕಾಗಿದ್ದಿತು. ಅಷ್ಟನ್ನು ಮಾತ್ರ ಇಟ್ಟುಕೊಂಡು, ಅವಳು ಉಳಿದ ಹಣವನ್ನು ಲಾಟರಿ ತಿಕೇಟು ಕಳುಹಿಸಿದ ಮಹಿಳೆಗೆ ಕಳುಹಿಸಿದಳು. ತನ್ನಲ್ಲಿ ಏನೂ ಇಲ್ಲದಿದ್ದರೂ ಹತ್ತು ರೂಪಾಯಿ ಲಾಟರಿ ತಿಕೇಟು ಕೊಂಡುಕೊಂಡು ಸಹಾಯ ಮಾಡುವ ಆ ಮನಸ್ಸು ಹೃದಯವಂತಿಕೆಗೆ, ಅಗತ್ಯಕ್ಕೆ ಮೀರಿ ಸಿಕ್ಕ ಹಣವನ್ನು ತಿರುಗಿಸಿ ಕೊಡುವ ಮನೋಭಾವ ಇದೊಂದು ತ್ಯಾಗದ ಹೆಗ್ಗುರುತೆಂದೇ ಹೇಳಬಹುದು. ಇಂದು ನಾವೆಲ್ಲರೂ ಅನುಕೂಲತೆಗಳ ಹೆಚ್ಚಳಕ್ಕಾಗಿಯೇ ಗುದ್ದಾಡುತ್ತಿದ್ದೇವೆ. ವೈಭವ, ಭವ್ಯತೆ, ಧಿಮಾಕಿನ ಗುಂಗಿನಲ್ಲಿಯೇ ವಿಹರಿಸುತ್ತಿದ್ದೇವೆ. ಅನುಕಂಪ, ಪರೋಪಕಾರ, ಕಿಂಚಿತ್ ತ್ಯಾಗಕ್ಕೂ ನಮ್ಮ ಮನಸ್ಸು ಒಪ್ಪದು. ನಾವು ಏನೆಲ್ಲವನ್ನೂ ವ್ಯಾವಹಾರಿಕ ದೃಷ್ಟಿಯಿಂದಲೇ ತೂಗಿಸಿ ನೋಡುತ್ತಿದ್ದೇವೆ. ನಮ್ಮ ತೂಗುವಿಕೆಯು ಮಾನವ ಸಂವೇದನೆಯನ್ನು ಕಳೆದುಕೊಂಡು ನಿಂತಿದೆ. ಈ ಬದುಕಿನ ಬಹು ದೊಡ್ಡದಾಗಿರುವ ತ್ಯಾಗ ಪ್ರಾಮಾಣಿಕತೆಗಳನ್ನು ಸರಳ ಸಜ್ಜನಿಕೆಯನ್ನು ತೊರೆದು ನಿಂತು ನಾವು ಏನನ್ನೋ ಗಳಿಸಿಕೊಂಡು ಸೋಗು ಹಾಕಿಕೊಂಡು ಜೀವಿಸುತ್ತಿದ್ದೇವೆ. ಇಂತಾದರೂ ನಮ್ಮ ಒಳ ಮನಸ್ಸು ಮಾತ್ರ ಚುಚ್ಚುತ್ತಲೇ ಇರುತ್ತದೆಂಬುದನ್ನು ನಾವೆಂದೂ ಮರೆಯಬಾರದು.

ಅನೇಕ ಸಾಮಾನ್ಯರೂ ನಮ್ಮ ಮಧ್ಯೆ ಈ ವ್ಯವಸ್ಥೆಯನ್ನು ನಿತ್ಯ ಶೃಂಗರಿಸುತ್ತಲೇ ಇದ್ದಾರೆ. ಅವರ ಕೈಗಳು ಕೊಳೆಯಾಗಿ, ಗಡುಸಾಗಿ, ಸವೆದು ಸವೆದುಹೋಗಿದ್ದರೂ ಕೊಳೆ ಎತ್ತುವುದನ್ನು ಅವರು ನಿಲ್ಲಿಸಲ್ಲ. ಈ ಮನುಕುಲದ ಶ್ರೇಯಸ್ಸಿಗೆ ಅವರು ಸದಾ ಚಿಂತಿತರಾಗಿ, ಸಕಲ ಸಂಪತ್ತು ತೊರೆದು ನಿಂತು ಮುನ್ನಡೆಯಲ್ಲಿಯೇ ಖುಷಿ ಪಡುವ ಅಭ್ಯಾಸ ವನ್ನು ಇಟ್ಟುಕೊಂಡಿದ್ದಾರೆ. ಅವರು ಈ ಹಿಂದೆಯೂ ಇದ್ದರು, ಇಂದೂ ಇದ್ದಾರೆ, ಮುಂದೆ ಈ ಹಾದಿಯಲ್ಲಿಯೇ ನಡೆದು ಈ ಜನಕ್ಕೊಂದು ಗುರಿ ಉದ್ದೇಶ ತೋರುವ ಅಸಾಮಾನ್ಯರು ಬರುತ್ತಾರೆಂಬುದರಲ್ಲಿ ಯಾವ ಸಂಶಯವಿಲ್ಲ.

ಮಾನವ ಬದುಕಿನ ಓರೆಕೋರೆಗಳು ಏನೇ ಇರಲಿ, ಆದರೆ ಬದುಕಿನಲ್ಲಿ ಪ್ರಾಮಾಣಿಕತೆ, ತ್ಯಾಗ, ಸೇವಾ ಮನೋಭಾವ ನಿರಂತರವಿರುವಂತೆ ನಾವು ಚಲನಶೀಲ ರಾಗುವ ಅಗತ್ಯವಿದೆ. ಇಂದು ನಾವು ತ್ಯಾಗದ ಮನೋ ಧರ್ಮ ಬೆಳೆಸಿಕೊಳ್ಳದೆ ಸದಾ ಸ್ವಾರ್ಥ ಚಿಂತೆಯಲ್ಲಿಯೇ ಮೈಮರೆತು ಕುಳಿತರೆ ಭವಿಷ್ಯತ್ತು ಗೊಂಬೆಗಳ ಸಾಲಿನಂತೆ ಮಾನವರ ಜೀವನವಾಗುವುದರಲ್ಲಿ ಸಂಶಯವಿಲ್ಲ.

ಸ. ರಾ. ಸುಳಕೂಡೆ
೧೩೭೯, ರಾಮತೀರ್ಥ ನಗರ, ಬೆಳಗಾವಿ

## ಸಾದರ ಸ್ವೀಕಾರ

ಅಚಲಾ (ಕಥಾ ಸಂಕಲನ) — ಪಾರ್ವತಿ ಜಿ. ಐತಾಳ್
ಪುಟ : ೧೪೮ — ಬೆಲೆ : ರೂ. ೭೦
ಧೃತಿ ಪ್ರಕಾಶನ, ಜಿ-೩, ಹಯಗ್ರೀವ ಅಪಾರ್ಟ್‌ಮೆಂಟ್ಸ್, ನಂ. ೧,೨, ದತ್ತಾತ್ರೇಯ ದೇವಸ್ಥಾನ ರಸ್ತೆ ೧ನೇ ಕ್ರಾಸ್, ೫ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦೦೧೯

ಬಾಳ ಠಾಕ್ರೆ ಮತ್ತು ಇತರ ಸಂದರ್ಶನಗಳು — ಕೆ. ಟಿ. ವೇಣುಗೋಪಾಲ್
ಪುಟ : ೧೦೧ — ಬೆಲೆ : ರೂ. ೮೦

ಗುರ್ಬಾಣಕ್ಕಿ (ಕಥಾ ಸಂಕಲನ) ರಾಜೀವ ನಾರಾಯಣ ನಾಯಕ
ಪುಟ : ೯೦ — ಬೆಲೆ : ರೂ. ೮೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಕರ್ನಾಟಕ ಸಂಘ, ಸಿ. ಎಸ್. ಎಂ. ಮಾರ್ಗ, ಮಾತುಂಗ, ಮುಂಬೈ - ೪೦೦೦೧೬

ಕನ್ನಡಿ (ಚುಟುಕುಗಳು ಮತ್ತು ಹೈಕುಗಳು) ಶಾರದಾ ಮುಳ್ಳೂರ
ಪುಟ : ೫೨ — ಬೆಲೆ : ರೂ. ೨೫

ನೀರಜ (ಮಗು ಪದ್ಯಗಳು) — ಶಾರದಾ ಮುಳ್ಳೂರ
ಪುಟ : ೭೮ — ಬೆಲೆ : ರೂ. ೩೦

ಮಂದಹಾಸ (ಹೈಕುಗಳು) — ಶಾರದಾ ಮುಳ್ಳೂರ
ಪುಟ : ೪೮ — ಬೆಲೆ : ರೂ. ೩೫
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
ವಿನಯ ಪ್ರಕಾಶನ, ಜಮಖಂಡಿ - ೫೮೭೩೦೧ ಬಾಗಲಕೋಟೆ ಜಿಲ್ಲೆ

ಶಾಸ್ತ್ರೀಯ ಭಾಷೆಯಾಗಿ ಕನ್ನಡ
ಪುಟ : ೩೬ — ಬೆಲೆ : ರೂ. ೧೦
ಕನ್ನಡ ಗೆಳೆಯರ ಬಳಗ, ನಂ. ೬, ರಾಘವೇಂದ್ರ ಕಾಂಪ್ಲೆಕ್ಸ್, ೨ನೇ ತಿರುವು, ಸಿ.ಕೆ.ಸಿ. ಗಾರ್ಡನ್, ಬೆಂಗಳೂರು - ೨೭

ಮರಳ ಮೇಲಿನ ಹೆಜ್ಜೆಗಳು (ವಿಜ್ಞಾನ ಲೇಖನಗಳು) — ಕೊಳ್ಳೇಗಾಲ ಶರ್ಮ
ಪುಟ : ೧೧೨ — ಬೆಲೆ : ರೂ. ೬೦

ಸಂಕ್ಷಿಪ್ತ ಕೃಷಿ- ಪರಿಸರ ಸಚಿತ್ರ ಶಬ್ದಾರ್ಥಕೋಶ — ಪ್ರ. ಸಂ.: ಪ್ರೊ|| ಬಿ. ವಿ. ವೆಂಕಟರಾವ್
ಪುಟ : ೭೨ — ಬೆಲೆ : ರೂ. ೪೫

ಪರಿಣಾಮಕಾರಿ ಓದು. ಏನು ? ಹೇಗೆ ? ಪಿ. ಚಂದ್ರಶೇಖರಯ್ಯ
ಪುಟ : ೭೨ — ಬೆಲೆ : ರೂ. ೩೦

ಕಿವುಡು ಮಗು ಮಾತಾಡಬಲ್ಲದು — ಡಾ|| ಜಿ. ಪುರುಷೋತ್ತಮ
ಪುಟ : ೮೦ — ಬೆಲೆ : ರೂ. ೩೫

ಕಿವಿ ಮೊರೆತ, ತಲೆ ಸುತ್ತು — ಡಾ|| ಜಿ. ಪುರುಷೋತ್ತಮ
ಪುಟ : ೬೪ — ಬೆಲೆ : ರೂ. ೩೦

ಸಂತೆಯಲ್ಲಿ ಸುಬ್ರಹ್ಮಣ್ಯ — ಎನ್ಕೆ. ಸುಬ್ರಹ್ಮಣ್ಯ
ಪುಟ : ೧೧೬ — ಬೆಲೆ : ರೂ. ೫೫

ಕಾಲರಾ ನಂಜು. ಪ್ರೊ|| ಶಂಭುನಾಥ್ ಡೇ ಅವರ ಸಂಶೋಧನೆಗಳು — ಡಾ|| ಎಮ್. ಎಸ್. ಎಸ್. ಮೂರ್ತಿ
ಪುಟ : ೭೨ — ಬೆಲೆ : ರೂ. ೩೫
ಮೇಲಿನ ಏಳು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ. ಎಂಬೆಸಿ ಸೆಂಟರ್ ಕ್ರೆಸೆಂಟ್ ರಸ್ತೆ, ಬೆಂಗಳೂರು ೫೬೦೦೦೧

ಅಕ್ಷರ ಪ್ರಕಾಶನ (ಅಕ್ಷರ ಲೋಕದ ಅನನ್ಯರು ಮಾಲೆ) — ವಿವಿಧ ಲೇಖಕರು
ಪುಟ : ४೦ — ಬೆಲೆ : ನಮೂದಿಸಿಲ್ಲ

ಮನೋಹರ ಗ್ರಂಥಮಾಲೆ ಸಂ.: ಶ್ರೀಧರ ಹೆಗಡೆ ಭದ್ರನ್
ಪುಟ : ೬೮ — ಬೆಲೆ : ನಮೂದಿಸಿಲ್ಲ

ಮಿಂಚಿನ ಬಳ್ಳಿ ಗ್ರಂಥಮಾಲೆ ಸಂ.: ಶ್ರೀಧರ ಹೆಗಡೆ ಭದ್ರನ್
ಪುಟ : ೪೮ — ಬೆಲೆ : ನಮೂದಿಸಿಲ್ಲ

ಕಾವ್ಯಾಲಯ:: ಪ್ರಕಾಶಕರುಸಂ.: ಹೊರೆಯಾಲ ದೊರೆಸ್ವಾಮಿ
ಪುಟ : ४೮ — ಬೆಲೆ : ನಮೂದಿಸಿಲ್ಲ

ಡಿ.ವಿ.ಕೆ. ಮೂರ್ತಿ — ಸಂ.: ಭಾರತೀದೇವಿ
ಪುಟ : ೪೮ — ಬೆಲೆ : ನಮೂದಿಸಿಲ್ಲ

ಶಾರದಾ ಮಂದಿರ — ಸಂ.: ಪಿ. ಚಂದ್ರಿಕಾ
ಪುಟ : ೭೨ — ಬೆಲೆ : ನಮೂದಿಸಿಲ್ಲ

ರಾಘವೇಂದ್ರ ಪ್ರಕಾಶನ — ಸಂ.: ಜಿ. ಪಿ. ಬಸವರಾಜು
ಪುಟ : ೬೪ — ಬೆಲೆ : ನಮೂದಿಸಿಲ್ಲ

ಒಂದಾಣೆ ಮಾಲೆ — ಸಂ.: ವಾಮನ ನಂದಾವರ
ಪುಟ : ೪೦ — ಬೆಲೆ : ನಮೂದಿಸಿಲ್ಲ
ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
ಅಭಿನವ, ೧೭/೧೮-೨, ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦೦೪೦

ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿ-ಗತಿ — ಡಾ|| ಟಿ. ಆರ್. ಚಂದ್ರಶೇಖರ
ಪುಟ : ೪೪ — ಬೆಲೆ : ರೂ. ೧೦
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩೨೭೬

ಜುಗಲಬಂದಿ ಚಿಂತಕ ಯು. ಆರ್. ಅನಂತಮೂರ್ತಿ — ಜಿ. ಕೆ. ರವೀಂದ್ರಕುಮಾರ್
ಪುಟ : ೧೨೮ — ಬೆಲೆ : ರೂ. ೬೦
ಚೇತನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬಸವೇಶ್ವರ ರಸ್ತೆ, ೧೨ನೇ ಕ್ರಾಸ್, ಕೆ. ಆರ್. ಮೊಹಲ್ಲಾ, ಮೈಸೂರು - ೫೭೦೦೨೪

ಪೆಪೆ ಮತ್ತು ಇತರ ಕತೆಗಳು (ಅನುವಾದಿತ ಕತೆಗಳು) — ಎಲ್. ವಿ. ಶಾಂತಕುಮಾರಿ
ಪುಟ : ೧೨೮ — ಬೆಲೆ : ರೂ. ೬೫
ದೀಪಾಂಜಲಿ ಟ್ರಸ್ಟ್, ನಂ. ೮೨, ೪ನೇ ಅಡ್ಡರಸ್ತೆ ೩೬ನೇ ಮುಖ್ಯರಸ್ತೆ ಡಾಲರ್ಸ್ ಸ್ಕೀಂ, ೧ನೇ ಹಂತ, ಬಿ.ಟಿ.ಎಂ. ಲೇಔಟ್, ಬೆಂಗಳೂರು - ೫೬೦೦೬೮



# ಸುಭಾಷ್ ಪಾಳೇಕರರ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ



ಪ್ರಕಾಶಕರು : ಅಗ್ನಿ ಪ್ರಕಾಶನ
ಪುಟ : ೧೦೮ ಬೆಲೆ : ರೂ. ೬೦

ರೈತರು ನೆಮ್ಮದಿಯಾಗಿದ್ದರೆ ಆ ದೇಶವು ನೆಮ್ಮದಿಯಾಗಿರುತ್ತದೆಂಬ ಸತ್ಯಕ್ಕೆ ಭಾರತದಲ್ಲಿಂದು ಅನಾವೃಷ್ಟಿ ಬಡಿದಿದೆ. ಬಹುರಾಷ್ಟ್ರೀಯ ಕಂಪನಿಗಳ ವಿದೇಶಿ ತಳಿ ಬೀಜ, ರಾಸಾಯನಿಕ ಗೊಬ್ಬರ, ಕಳೆನಾಶಕ, ಕೀಟನಾಶಕಗಳೆಂಬ ಚಕ್ರವ್ಯೂಹದ ಸುಳಿಗೆ ಸಿಕ್ಕಿರುವ ರೈತರು ಬಹುವಾಗಿ ತತ್ತರಿಸಿಹೋಗಿದ್ದಾರೆ. ಬ್ಯಾಂಕಿನ ಸಾಲವನ್ನು ತೀರಿಸಲಾಗದೆ ದುಬಾರಿ ರಾಸಾಯನಿಕ ಗೊಬ್ಬರದಿಂದ ಫಸಲು ಕೈಗೆಬಾರದೆ ನೊಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ.

ರೈತರ ಪರ ಎನ್ನುವ ಸರ್ಕಾರಗಳು ಸಮಸ್ಯೆಯ ಮೂಲಕ್ಕೆ ಇಳಿಯದೆ ಕೇವಲ ಪರಿಹಾರ ಧನದ ಭಿಕ್ಷೆ, ಆಶ್ವಾಸನೆಗಳ ಮುಖೇನ ತಿಪ್ಪೆಸಾರಿಸುವ ಕೆಲಸ ಮಾಡಿ ಜಾರಿಕೊಳ್ಳುತ್ತಿದ್ದಾರೆ. ಕೃತಕ ಅಭಾವ ಸೃಷ್ಟಿಸಿ ರೈತರನ್ನು ರಸಗೊಬ್ಬರದ ಸುಳಿಗೆ ಸಿಕ್ಕಿಸಲು ಯತ್ನಿಸುತ್ತಿದ್ದಾರೆ. ವಿದೇಶಿ ಕಂಪನಿಗಳೊಂದಿಗೆ ಸ್ವದೇಶಿ ಮನಸ್ಸುಗಳು ಸೇರಿ ಹೆಣೆದ ಅಪಾಯಕಾರಿ ನೇಯ್ಗೆಯಲ್ಲಿ ಭಾರತವೂ ಸೇರಿದಂತೆ ಇತರ ರಾಷ್ಟ್ರಗಳ ರೈತರೂ ಸಿಲುಕಿಕೊಂಡಿದ್ದಾರೆ. ಇದರಿಂದ ಬಿಡಿಸಿಕೊಳ್ಳುವುದಾದರೂ ಹೇಗೆ ?

ಇಂತಹ ಆತಂಕಕಾರಿ ಸನ್ನಿವೇಶಕ್ಕೆ ಬಲಿಪಶುಗಳಾಗಿ ಮಾರ್ಪಡುತ್ತಿರುವ ಬಡ, ಮಧ್ಯಮ ಹಾಗೂ ಶ್ರೀಮಂತ ವರ್ಗದ ರೈತರಿಗೂ ಜೀವಾಮೃತವಾಗಬಲ್ಲ ಕೃಷಿತಜ್ಞ ಸುಭಾಷ್ ಪಾಳೇಕರರ ಚಿಂತನೆಯನ್ನು ಲೇಖಕ ಸ್ವಾಮಿ ಆನಂದ್ ಅವರು 'ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ' ಎನ್ನುವ ಕೃತಿಯಲ್ಲಿ ರೈತರೊಂದಿಗೆ ಕೂತು ಮಾತಾಡಿದ ರೀತಿಯಲ್ಲಿ ನಿರೂಪಿಸಿದ್ದಾರೆ.

ಆಧುನಿಕ ಕೃಷಿ ವಿಧಾನದಲ್ಲಿ ಬಳಸಲ್ಪಡುವ ರಾಸಾಯನಿಕ ಗೊಬ್ಬರ, ಟ್ರ್ಯಾಕ್ಟರ್, ಕೀಟನಾಶಕ, ಕಳೆ ನಾಶಕ ಇತ್ಯಾದಿಗಳನ್ನು ಬಳಸಿ ಸಾಲಗಾರರಾಗಿ ತತ್ತರಿಸಿ ಹೋಗಿರುವ ರೈತರು ಕೇವಲ ಸಗಣಿ-ಗಂಜಳ ಬಳಸಿ, ಹೊಲಗದ್ದೆ ತೋಟಗಳಲ್ಲಿ ಅಪರಂಜಿಯಂಥ ಬೆಳೆಯನ್ನು ಬೆಳೆಯುವ ವಿಧಾನವನ್ನು ಈ ಕೃತಿಯು ವೈಜ್ಞಾನಿಕ ದನಿಯಲ್ಲಿ ತಿಳಿಸಿಕೊಡುತ್ತದೆ.

ಈ ನೈಸರ್ಗಿಕ ಕೃಷಿ ಪದ್ಧತಿಯನ್ನು ಮಹಾರಾಷ್ಟ್ರ ಸರ್ಕಾರವು ಈಗಾಗಲೇ ತನ್ನ ಕೃಷಿ ನೀತಿಯನ್ನಾಗಿ ಸ್ವೀಕರಿಸಿ ಆಚರಣೆಗೆ ತಂದುಕೊಂಡಿದೆ. ಭಾರತದ ಒಡಲಾಳದ ಸೊಲ್ಲಾಗಿ ಕ್ರಿಯೆಯಾಗಿ ಹರಡಿ ಬೇರುಬಿಟ್ಟುಕೊಂಡು ಬೆಳೆದರೆ ಈ ನೀತಿಯು ರೈತರನ್ನು ಆತ್ಮಹತ್ಯೆಯ ದವಡೆಯಿಂದ ಪಾರುಮಾಡಬಲ್ಲ ಸಂಜೀವಿನಿ ಆಗಬಲ್ಲದೇನೋ ಎಂಬುವ ಅನುಭವ, ಈ ಕೃತಿಯನ್ನು ಓದುತ್ತಿದ್ದಾಗ ಮೂಡುತ್ತದೆ. ಅಂಥ ಮೂಡಣದಿಕ್ಕಾಗುವ ಸತ್ವವನ್ನು ಲೇಖಕರು ಇಲ್ಲಿ ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ.

ತನ್ನಷ್ಟಕ್ಕೆ ತಾನೇ ಹುಟ್ಟಿ ಮುಗಿಲ ಮುಟ್ಟುವಂತೆ ಬೆಳೆದು ನೂರಾರು ಸಾವಿರಾರು ಮೈಲು ವಿಸ್ತಾರಕ್ಕೆ ಹಬ್ಬಿದ ನೈಸರ್ಗಿಕ ಅರಣ್ಯಗಳು... ಮಾನವ ಹುಟ್ಟುವ ಮುನ್ನದ ಲಕ್ಷಾಂತರ ವರ್ಷಗಳಿಂದ ನಿರಂತರವಾಗಿ ಇದ್ದವು... ಹುಟ್ಟು ಸಾವು ಕಂಡವು... ಈಗಲೂ ಇರುವಂಥವು... ಯಾವುದೇ ರಾಸಾಯನಿಕ ಗೊಬ್ಬರಗಳ ಸ್ಪರ್ಶವಿಲ್ಲದೆ. ಮಾನವ ಬೇಸಾಯ ಕಲೆ ಹುಟ್ಟಿ ೧೦ಸಾವಿರ ವರ್ಷಗಳಾದರೆ, ಬೇಸಾಯಕ್ಕೆ ಸಗಣಿ ಸೇರ್ಪಡೆಗೊಂಡು ೫-೬ ಸಾವಿರ ವರ್ಷಗಳಾಗಿವೆ.

ಈ ವಿಧದ ನೈಸರ್ಗಿಕ ಕೃಷಿಯ 'ಮೂಲ ಗುರುಗಳು' ಬುಡಕಟ್ಟು ಜನಾಂಗದವರು. ಕಾಡಿನ ಸಮೃದ್ಧತನದ ನಾಡಿಮಿಡಿತವನ್ನು ನಿರಂತರವಾಗಿ ಆಲಿಸುತ್ತಾ ಅಲ್ಲಿಂದ ಪಡೆದ ವಿವೇಕವನ್ನು ತಮ್ಮ ಬೇಸಾಯ ಪದ್ಧತಿಗೂ ಅಳವಡಿಸಿಕೊಂಡು ಭಿನ್ನನೆಲೆಯಲ್ಲಿ ವಿಸ್ತರಿಸಿಕೊಂಡು ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದವರು. ಇಂಥ ಕೃಷಿ ಜ್ಞಾನವನ್ನುಹೊಂದಿದ್ದ ವಿದರ್ಭ ಪ್ರದೇಶದ ಬುಡಕಟ್ಟು ಜನಾಂಗದ ಕೃಷಿಕರೊಂದಿಗೆ ಕೃಷಿ ವಿಜ್ಞಾನಿ ಸುಭಾಷ್ ಪಾಳೇಕರ್ ಸೇರಿಕೊಂಡರು. ೫-೬ ವರ್ಷ ಅವರ 'ಶಿಷ್ಯರಾಗಿ' ಜ್ಞಾನ ಪಡೆದು, ಅವುಗಳನ್ನು ಪ್ರಯೋಗಾತ್ಮಕವಾಗಿ ಮತ್ತು ವೈಜ್ಞಾನಿಕವಾಗಿ ಅಭ್ಯಸಿಸಿ ಪೂರ್ವಿಕರ ಕೃಷಿಜ್ಞಾನದ ಬಗ್ಗೆ ವಿಸ್ಮಯಗೊಂಡಿದ್ದರು. ಆನಂತರ ಪಾಳೇಕರ್ ನೈಸರ್ಗಿಕ ಕೃಷಿ ಪದ್ಧತಿಯ ಧ್ವನಿಯಾದರು. ಸುಭಾಷ್ ಪಾಳೇಕರರು ನಡೆಸುವ ನೈಸರ್ಗಿಕ ಕೃಷಿ ಪದ್ಧತಿಯು ಆರಂಭಗೊಳ್ಳು ವುದು ಶೂನ್ಯ ಬಂಡವಾಳದಿಂದ ಅಥವಾ ತೀರಾ ಕಡಿಮೆ ಮಟ್ಟದ ಬಂಡವಾಳದಿಂದ. ಇದು ಬಡ ಮತ್ತು ಮಧ್ಯಮ ವರ್ಗದ ರೈತರಿಗೆ ವರದಾನದಂತಿದೆ. ಅಂಗಡಿಯಿಂದ ಯಾವುದೇ ವಿಧದ ರಾಸಾಯನಿಕ ಗೊಬ್ಬರ, ಬೀಜ, ಕೀಟನಾಶಕ, ಎನ್.ಪಿ.ಕೆ ಗೊಬ್ಬರ, ಎಂಡೋಸಲ್ಫಾನ್ ಮುಂತಾದವುಗಳನ್ನು ಕೊಂಡುಕೊಳ್ಳಬಾರದೆಂಬ ಷರತ್ತು ವಿಧಿಸಿ, ನಿಸರ್ಗ ಕೃಷಿ ಪದ್ಧತಿಯನ್ನು ಅನುಸರಿಸುವ ಅಗತ್ಯವನ್ನು ಒತ್ತಿ ಹೇಳಿದರು. ಇದನ್ನು ಪಾಲಿಸಿದಲ್ಲಿ ಹೊಲ ಗದ್ದೆ ತೋಟಗಳು ಹೇಗೆ ವಿಷಮುಕ್ತವಾಗಬಲ್ಲವು ... ಭೂಮಿ ಆರೋಗ್ಯವಂತವಾದಂತೆ ಅಲ್ಲಿನ ಜೀವಾಣುಗಳು ವೃದ್ಧಿಗೊಳ್ಳುವ ವಿಸ್ಮಯದೊಂದಿಗೆ, ಫಸಲುಗಳು ಕಾಲ ಕಾಲಕ್ಕೆ ವರ್ಷವರ್ಷಕ್ಕೂ ವೃದ್ಧಿಯಾಗುವ ಸಮೃದ್ಧಿಗೊಳ್ಳುವ ಪರಿಯನ್ನು ಸ್ವಾಮಿ ಆನಂದ್‌ರವರು ನಿದರ್ಶನ ಸಮೇತ ನಮ್ಮ ಮುಂದಿರಿಸುತ್ತಾರೆ.

ಹಾಗೆಯೇ ಭೂಮಿಯ ಜೀವಾಣುಗಳನ್ನು ರಕ್ಷಿಸಿ ಸಮೃದ್ಧಗೊಳಿಸಲು ರಾಸಾಯನಿಕ ಗೊಬ್ಬರಗಳ ಬದಲು ಸಗಣಿ, ಗಂಜಲ, ಸುಣ್ಣ, ಕಪ್ಪು ಬೆಲ್ಲ, ಕಡ್ಲೆ ಹಿಟ್ಟು ಮುಂತಾದವನ್ನು ಬಳಸಿ, ಇತಿ ಮಿತಿಯ ನೀರಿನ ಬಳಕೆಯೊಂದಿಗೆ ಸಾಗುವಳಿ ಮಾಡಬೇಕು. ಎರೆಹುಳು, ಗೆದ್ದಲು, ಹಾವು, ಇಲಿ, ಕೀಟ, ಕಪ್ಪೆ, ಹಕ್ಕಿ, ಕಳೆ ಇಂತವು ಗಳನ್ನು ನಾಶಗೊಳಿಸಬಾರದು; ಇವುಗಳನ್ನು ನಿಸರ್ಗವು ನಿಯಂತ್ರಿಸಬಲ್ಲದು; ಹಾಗೆಯೇ ಇವುಗಳು ನೇರವಾಗಿ ಮತ್ತು ಪರೋಕ್ಷವಾಗಿ ಬೆಳೆಯನ್ನು ಸಂರಕ್ಷಿಸುವ ಕಾರ್ಯದಲ್ಲಿ ಹೇಗೆ ಭಾಗಿಯಾಗಬಲ್ಲವು ಎಂಬುವಂಥ ಸೂಕ್ಷ್ಮ ವಿವರಗಳನ್ನು ಮತ್ತು ರೈತರ ಆಲೋಚನಾ ಕ್ರಮದ ದಿಗಂತವನ್ನು ವಿಸ್ತರಿಸುವಂಥ ಯೋಚನೆಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ.

ಕೃಷಿ ವಿಜ್ಞಾನಿ ಸುಭಾಷ್ ಪಾಳೇಕರರ ನಿರಂತರ ಪ್ರಯತ್ನಗಳಿಂದಾಗಿ ನಮ್ಮ ಪುರಾತನ ಸಾಂಪ್ರದಾಯಿಕ ನೈಸರ್ಗಿಕ ಕೃಷಿ ಪದ್ಧತಿಯು ಸಾಮಾನ್ಯ ರೈತರಿಗೂ ತಲುಪುವಂತಾಗಿದೆ. ಇದರ ನಿರ್ಣಾಯಕ ಹಾಗೂ ಗಮನಾರ್ಹ ಚಲನೆಗೆ ಕಾರಣವಾಗುವ ನಾಲ್ಕು ಮುಖ್ಯಾಂಶಗಳಿಗೆ ಬೀಜಾಮೃತ, ಜೀವಾಮೃತ, ಹೊದಿಕೆ (ಆಚ್ಛಾದನ) ಹಾಗೂ ಆರ್ದ್ರತೆ ಎಂಬಂಥ ಹೆಸರುಗಳನ್ನು ಪಾಳೇಕರರು ನೀಡಿದ್ದಾರೆ.

**ಬೀಜಾಮೃತ :** ವಿವಿಧ ಪ್ರಮಾಣದಲ್ಲಿ ಸಗಣಿ, ಗಂಜಲ, ಸುಣ್ಣ, ನೀರನ್ನು ಮಿಶ್ರಣಗೊಳಿಸಿ ತಯಾರಿಸಿದ ದ್ರವದಲ್ಲಿ ಒಂದು ನಿಮಿಷ ಕಾಲ ಬಿತ್ತುವ ಬೀಜಗಳನ್ನು ನೆಡುವ ಸಸಿಗಳ ಬೇರಿನ ಅಥವಾ ಕಾಂಡ ಭಾಗವನ್ನು ಅದ್ದಬೇಕು. ಇದರಿಂದಾಗಿ ಬೀಜಗಳನ್ನು ಮೊಳಕೆ ಒಡೆಯುವ ತನಕ ಹಾಳಾಗದಂತೆ ಚೈತನ್ಯಯುಕ್ತಗೊಳಿಸಬಹುದಾಗಿದೆ.

**ಜೀವಾಮೃತ :** ಸಗಣಿ, ಗಂಜಳ, ಕಪ್ಪುಬೆಲ್ಲ, ಕಡ್ಲೆ ಹಿಟ್ಟು, ಒಂದು ಹಿಡಿ ಮಣ್ಣು ಮತ್ತು ನೀರನ್ನು ಕೂಡಿಸಿ ತಯಾರಿಸುವಂಥದ್ದು. ಇದನ್ನು ನಿಗದಿತ ಸಮಯದಲ್ಲಿ ನೀರಿನಂತೆ ಹಾಯಿಸಬೇಕು. ಹಾಗೆ ತಯಾರಾದ ಜೀವಾಮೃತವನ್ನು ಕೋಲಿನಿಂದ ಪ್ರದಕ್ಷಿಣಾಕಾರವಾಗಿ ತಿರುಗಿಸಿ ಕಲಸಬೇಕು. (ಅಪ್ರದಕ್ಷಿಣಾಕಾರದಲ್ಲಿ ತಿರುಗಿಸ ಬೇಡಿ ಎನ್ನುತ್ತಾರೆ ಲೇಖಕರು.) ಕೃಷಿಗೆ ಬಳಸುವಂಥ ಹಸುವಿನ ಸಗಣಿ ಮತ್ತು ಗಂಜಳದಲ್ಲಿ ಉತ್ಕೃಷ್ಟ ಮಟ್ಟದ ರೋಗ ನಿವಾರಕ ಶಕ್ತಿ ಹಾಗೂ ಬಯೋಡೈನಾಮಿಕ್ ಗುಣಗಳಿವೆ. ಹಸುವಿನ ಸಗಣಿ, ಗಂಜಳ ಸಿಗದಿದ್ದಲ್ಲಿ, ದೇಶಿ ತಳಿಯ ಎತ್ತು ಎಮ್ಮೆಗಳ ಸಗಣಿ-ಗಂಜಳವನ್ನು ನೈಸರ್ಗಿಕ ಕೃಷಿಗೆ ಬಳಸಿಕೊಳ್ಳಬಹುದಾಗಿದೆ.

**ಹೊದಿಕೆ ಮತ್ತು ಆರ್ದ್ರತೆ :** ಇವು ಒಂದರೊಳಗೊಂದು ಬೆಸೆದುಕೊಂಡಿರುವಂಥವು. ಮಣ್ಣಿನ ತೇವಾಂಶದ ರಕ್ಷಣೆ, ಜೀವಾಣುಗಳ ಸಮೃದ್ಧಿ, ಕಳೆ ನಿವಾರಣೆ, ಬೆಳೆಗೆ ಬೇಕಾದ ಹ್ಯೂಮಸ್ ಹೊದಿಕೆ ಮತ್ತು ಆರ್ದ್ರತೆಯಿಂದ ಸೃಷ್ಟಿಯಾಗುತ್ತದೆ.

ಹೀಗೆ ನೈಸರ್ಗಿಕ ಕೃಷಿಯ ನಾಲ್ಕು ಮುಖ್ಯಾಂಶಗಳಿಗೆ

— ಸಿ. ರಾಮಸ್ವಾಮಿ —

ಸಂಬಂಧಿಸಿದ ವಿವರಗಳು, ಒಳನೋಟಗಳು, ಚಿಂತನೆಗಳನ್ನು ಸರಳವಾಗಿ, ಆಪ್ತವಾಗಿ ಕೃತಿಯ ಉದ್ದಕ್ಕೂ ನಿರೂಪಿಸಲಾಗಿದೆ.

ಅಧಿಕ ನೀರು ಮತ್ತು ಅಧಿಕ ಗೊಬ್ಬರ ಬಳಸಿದಷ್ಟೂ ಇಳುವರಿ ಜಾಸ್ತಿ ಎಂಬ ನಂಬಿಕೆಯನ್ನು ನೈಸರ್ಗಿಕ ಕೃಷಿ ಮುಲಾಜಿಲ್ಲದೆ ನಿರಾಕರಿಸುತ್ತದೆ. ಸಸ್ಯ, ಮರಗಳೆಲ್ಲವೂ ದ್ಯುತಿಸಂಶ್ಲೇಷಣೆ ಕ್ರಿಯೆಯಿಂದ ಶೇ. ೯೮.೫ರಷ್ಟು ಆಹಾರವನ್ನು ವಾತಾವರಣದಿಂದಲೂ ಉಳಿದ ಶೇ. ೧.೫ರಷ್ಟು ಆಹಾರವನ್ನು ನೆಲದಿಂದಲೂ ಪಡೆದುಕೊಳ್ಳುತ್ತವೆ. ಈ ಕಳೆಯಲ್ಲಿ ಯಾವ ಗೊಬ್ಬರವೂ ಇಲ್ಲದೆ ಹುಲುಸಾಗಿ ಬೆಳೆದ ಹಾದಿ ಬದಿಯ ಸಸ್ಯಗಳನ್ನು ಮತ್ತು ಕಾಡುಗಳನ್ನು ಲೇಖಕರು ಉದಾಹರಿಸುತ್ತಾರೆ.

ನಿಸರ್ಗ ಕೃಷಿಯಲ್ಲಿ ದೀರ್ಘಕಾಲದ ಬೆಳೆಗಳೊಂದಿಗೆ ಅಲ್ಪ ಕಾಲದ ವಿವಿಧ ಬೆಳೆಗಳನ್ನು ಅಳವಡಿಸಿಕೊಳ್ಳುವ ಕ್ರಮ, ಸೂಕ್ತ ಋತು ಸಂದರ್ಭಗಳು, ರೈತರಿಗೆ ಉಂಟಾಗುವ ಅನುಕೂಲ ಅನಾನುಕೂಲಗಳು ಈ ಕುರಿತು ಕೃತಿಯಲ್ಲಿರುವ ಒಳನೋಟಗಳು ವಿಸ್ಮಯಗೊಳಿಸುತ್ತವೆ. ಇಲ್ಲಿ ಯಾರು ಯಾರನ್ನೂ ಏನನ್ನೂ ಕೊಲ್ಲುವಂತಿಲ್ಲ. ಇದರೊಂದಿಗೆ ಒಡನಾಡುವ ಕಪ್ಪೆ, ಕೀಟ, ಹಾವು, ಕಳೆ, ಎರೆಹುಳ, ಗೆದ್ದಲು, ಜೇನುನೊಣ, ಜೇಡ, ಹಕ್ಕಿ , ಸೂಕ್ಷ್ಮಾಣುಗಳು ಇದ್ದಾಗಲೇ ಸಮೃದ್ಧಿಯಾದ ಬೆಳೆ ತಗೆಯಬಹುದಾಗಿದೆ ಎನ್ನುವುದು ಈ ಕೃಷಿ ಪದ್ಧತಿಯ ನಿಯಮ !

ಈ ಪುರಾತನ ನೈಸರ್ಗಿಕ ಬೇಸಾಯ ಕ್ರಮವು ಇಂದು ಜಗತ್ತಿಗೆ ಬೇಕಾದ ನಿಜಕೃಷಿ ತತ್ವವಾಗಿದೆ. ವಿಷಮುಕ್ತ ಆಹಾರ, ತರಕಾರಿ, ಗಾಳಿ, ನೆಲ, ನೀರು, ಈ ವಾತಾವರಣದಂಥ ಪರಿಸರ ಪಡೆಯಲು ರೈತರು ರಸಗೊಬ್ಬರ, ಬಾವಿಸ್ಟಿನ್, ಫೋರೇಟು, ವರ್ಮಿಕಾಂಪೊಸ್ಟ್, ಅಗ್ನಿಹೋತ್ರಿ, ಎನ್.ಪಿ.ಕೆ ಮುಂತಾದ ಗೊಬ್ಬರಗಳ ಹಿಡಿತದಿಂದ ಹೊರಬರಬೇಕೆನ್ನುವುದು ಈ ಕೃತಿಯ ಕಾಳಜಿಯಾಗಿದೆ. ಬುದ್ಧನ ಚಿಂತನೆಯಿಂದ ಪ್ರಭಾವಿತರಾದ ಜಪಾನಿನ ಫುಕುವೋಕ ಅವರು ಹಲವು ದಶಕಗಳ ಹಿಂದೆಯೇ ನಿಸರ್ಗಕೃಷಿಯಲ್ಲಿ ಹಲವು ಪ್ರಯೋಗ ನಡೆಸಿ ಯಶಸ್ವಿಯಾಗಿದ್ದರು.

ಹಸಿರು ಕ್ರಾಂತಿಯ ಪ್ರಭಾವದಿಂದ ಇಂದಿಗೂ ಹೊರಬರಲಾಗದ ರೈತರು ರಾಸಾಯನಿಕ ಗೊಬ್ಬರಗಳ ಸುಳ್ಳು ಆಕರ್ಷಣೆಗೆ ಒಳಗಾಗಿ ಪತಂಗಗಳಾಗಿ ಮಾರ್ಪಟ್ಟು ಸ್ವತಃ ದಹಿಸಿಕೊಳ್ಳುವಂತೆ ಆತ್ಮಹತ್ಯೆ ಹಾದಿ ಕಂಡುಕೊಳ್ಳುತ್ತಿರುವುದು ದುರಂತದ ವಿಚಾರವಾಗಿದೆಯಲ್ಲದೆ ದೇಶದ ನೈತಿಕ ಪ್ರಜ್ಞೆಯನ್ನು ಪ್ರಶ್ನಿಸುವಂತಿದೆ. ಹಸಿರುಕ್ರಾಂತಿಯ ಅವಗುಣವನ್ನು ನಿರ್ಲಕ್ಷಿಸಿದ, ಸಂಘಪರಿವಾರದವರು ಪ್ರತಿಪಾದಿಸುವ ಅಣುಬಾಂಬ್ – ಅಣುವಿದ್ಯುತ್ 'ಅಭಿವೃದ್ಧಿ' ಯನ್ನು ಸಮರ್ಥಿಸುವ ವಿಜ್ಞಾನಿ ಅಬ್ದುಲ್ ಕಲಾಂ ಅವರು ಕೂಡ ಎರಡನೇ ಹಸಿರುಕ್ರಾಂತಿಗೆ ಕರೆ ನೀಡಿದ್ದರು. ಎಂಥ ದುರಂತವಿದು !

ಈ ಕೃತಿಯ ಮುನ್ನುಡಿಯಲ್ಲಿ ಖ್ಯಾತ ಸಾಹಿತಿ ದೇವನೂರ ಮಹಾದೇವರು ''ಇದು ನಿಜಕ್ಕೂ ಪ್ರಕೃತಿ ಪವಾಡ ಬೇಸಾಯ... ಅರ್ಧ ಎಕ್ರೆಯಲ್ಲಿ ಒಂದ್ ಎಕ್ರೆಯಲ್ಲಿ ಬೇಸಾಯ ಮಾಡಿದ್ರೆ ಸಾಕು ರೈತ ಗೌರವಯುತ ಸ್ವಾವಲಂಬಿ ಬದುಕನ್ನು ನಿರ್ವಹಿಸಬಹುದು. ಈ ಕೃಷಿ ಪದ್ಧತಿಯನ್ನು ವ್ಯಾಪಕಗೊಳಿಸಿದರೆ ರೈತರ ಬದಲು ರಸಗೊಬ್ಬರ, ಕ್ರಿಮಿನಾಶಕಗಳು ಆತ್ಮಹತ್ಯೆ ಮಾಡಿಕೊಳ್ಳುತ್ತವೆ. ಸಾವಯವ ಗೊಬ್ಬರಗಳು, ಹೈಬ್ರಿಡ್ ಬೀಜಗಳು ಮತ್ತು ಸಾಲಗಳೂ ಆತ್ಮಹತ್ಯೆ ಮಾಡಿಕೊಳ್ಳುತ್ತವೆ'' ಎಂದಿದ್ದಾರೆ. ಬೆನ್ನುಡಿಯಲ್ಲಿ ಅಗ್ನಿ ಶ್ರೀಧರ್‌ರವರು ಕೃತಿಯ ಸತ್ವವನ್ನು ಧ್ಯಾನಿಸಿದ್ದಾರೆ.

ಚಿಲಿ ದೇಶದ ಕವಿ, ಚಿಂತಕ, ಕಮ್ಯುನಿಸ್ಟ್ ರಾಜಕಾರಣಿ ಪಾಬ್ಲೊ ನೆರೂದ ನುಡಿದ ''ನಾವು ಬರೆಯುವ ಬರಹ ನೊಂದವರ ಪಾಲಿಗೆ ನೀಡುವ ರೊಟ್ಟಿಯಂತಿರಬೇಕು'' ಎಂಬ ಮಾತು 'ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ'ಯ ಸಂದರ್ಭದಲ್ಲಿ ನೆನಪಾಗುತ್ತದೆ.

**ಸಿ. ರಾಮಸ್ವಾಮಿ**
ಸೌಮ್ಯಶ್ರೀ ನಿಲಯ, ಆರ್. ಸಿ. ರೋಡ್, ಹೊಸ ಬಡಾವಣೆ
ಮಡಿಕೇರಿ -೫೭೧ ೨೦೧

# ಬುದ್ಧನಾಗುವ ಬಯಕೆ



ಒಂದು ನಡು ಇರುಳು
ನನಗೂ ಬುದ್ಧನಾಗುವ ಬಯಕೆ
ಬಿಟ್ಟೆನೆಂದರೂ ಬಿಡದ ನಿದ್ದೆ
ಮುದುಡಿ ಮಲಗಿದ್ದೆ, ಹಾಸು-ಹೊದಿಕೆಗಳ
ನನ್ನದೇ ಗಾಢ ಪ್ರಪಂಚದೊಳಗೆ

ಚಾಚಿ ಮಲಗುವಂತಿಲ್ಲ, ತಣ್ಣಗಿನ ನೆಲ
ಆಚೀಚೆ ಹೊರಳುವಂತಿಲ್ಲ,
ಮನೆಯ ಮಾಡನೂ ಮೀರಿ
ಒಸರುವ ಮಳೆನೀರು
ಹೊದಿಕೆಯ ತೂತಿನೊಳಗೆಲ್ಲೋ
ಸಿಕ್ಕಿಬಿದ್ದ ಕಾಲು
ಇದ್ದ ಕೈಯೆರಡೂ ತಲೆದಿಂಬು.

ಪಕ್ಕದಲಿ ರಾಣಿಯೂ ಇಲ್ಲ
ಬುದ್ಧನಾಗಲಿ ಹೇಗೆ ? ಎಷ್ಟೆಲ್ಲ
ಇಕ್ಕಟ್ಟುಗಳ ನಡುವೆ ಗುಡುಗು ಸಿಡಿಲಲ್ಲಿ
ಸುರಿವ ಮಳೆಯಲ್ಲಿ

ಎದ್ದು ಹೋಗಲಿ ಎಲ್ಲಿಗೆ ? ಹೋದರೂ
ಕೂರುವುದು ಯಾವ ಮರದ ಕೆಳಗೆ ?!

ಹೇಗೆ ಹೇಳುವುದು,
ಆದರೂ ಆಗಬಹುದು ಈ ಹಾಸಿಗೆಯೊಳಗೇ
ನನಗೆ ಜ್ಞಾನೋದಯ
ಎಂದೇ ಹಾಗೆ ಮಲಗಿದ್ದೆ
ಬೆಳಗು ಜಾವದಲಿ ಒಂದು ಕನಸಾಯ್ತು.

ಉರಿವ ಕೆಂಗಣ್ಣು ಹಾರಾಡುವ ನಾಲಿಗೆ
ಮೈಯ್ಯೆಲ್ಲ ಬಾಯಿ, ಬಾಯೊಳಗೆ ಕೋರೆ
ಊಟ ಬರೀ ಊಟ
ನನ್ನ ಊಟದಲಿ ಒಟ್ಟಕ್ಕುವ ರಕ್ತ
ತಟ್ಟೆಯ ತುಂಬ ಯಾರದೋ ರುಂಡ-ಮುಂಡ
ನನಗಿಂತ ದುರ್ಬಲರೆಲ್ಲ
ನನ್ನ ಊಟದ ಅಡುಗೆ !

**ಗಣೇಶ ಹೊಸ್ಮನೆ**
ಜಾನ್ಮನೆ.- ೫೮೧೩೧೫, ಶಿರಸಿ ಉತ್ತರ ಕನ್ನಡ

ಭಾರತೀಯ 'ವೈಚಾರಿಕತೆ'ಗೆ ಪರಂಪರೆ ಹಾಗೂ ಭಿನ್ನ ನೆಲೆಗಳಿವೆ. ಈ ಬಗೆಯ ವೈಚಾರಿಕ ಕೂಟಗಳನ್ನು ಚರಿತ್ರೆ, ಸಮಾಜ, ಪಂಡಿತರು ಒಟ್ಟಾಗಿ ಎಂಬಂತೆ ಒಂದು ದೂರದ ಅಂತರದಲ್ಲಿಯೇ ಇಟ್ಟು ವ್ಯವಸ್ಥಿತವಾಗಿ ಅವಜ್ಞೆಗೆ ಗುರಿಮಾಡಿರುವುದನ್ನು ಗುರುತಿಸಬಹುದು.

'ವೈಚಾರಿಕತೆ'ಯು ಎರಡು ನೆಲೆಗಳಲ್ಲಿ ಅಸ್ತಿತ್ವ ಹೊಂದಿರುತ್ತದೆ. ಒಂದು ಬೌದ್ಧಿಕ, ಮತ್ತೊಂದು ಕ್ರಿಯೆ. ಆಧುನಿಕ ವೈಚಾರಿಕತೆಗೆ ಜಾತ್ಯತೀತತೆ, ಪ್ರಜಾಪ್ರಭುತ್ವ, ಹೊಂದಾಣಿಕೆ, ಪರ್ಯಾಯ ಚಿಂತನೆ, ಬದ್ಧತೆಗಳೇ ಬುನಾದಿ. ಪ್ರತಿಭಟನೆ, ಕ್ರಾಂತಿ, ಹೋರಾಟ, ಸಂಘಟನೆಗಳೇ ಅಂಗ-ಅಂಶಗಳು.

ವೈದಿಕ ವಿಚಾರಧಾರೆ ತನ್ನ ಕಬಂಧ ಬಾಹುಗಳಿಂದ ಭಾರತೀಯ ಆಲೋಚನಾಕ್ರಮವನ್ನು ಆವರಿಸಿರುವುದಲ್ಲದೆ. ತನಗೆ ಸಡ್ಡುಹೊಡೆದ, ಹೊಸ ಜ್ಞಾನಮಾರ್ಗಗಳನ್ನು ಅನ್ವೇಷಿಸಿದ, ಪ್ರಯೋಗಿಸಿದ ಬೌದ್ಧ, ಜೈನ, ಚಾರ್ವಾಕ ಮತ್ತು ಉಳಿದ ವೈಚಾರಿಕ ಪಂಥಗಳನ್ನು ಬೌದ್ಧಿಕ ವಲಯದಿಂದ ದೂರವಿಟ್ಟಿರುವುದು ವೇದ್ಯ. ಅವೈದಿಕ ದನಿ ಕೇಳಿದಾಗಲೆಲ್ಲಾ ಅದು ಏಕಾಂಗಿಯಾಗುವಂತೆ ಮಾಡಿದ ವ್ಯವಸ್ಥೆ, ಪ್ರಭುತ್ವದೊಂದಿಗೆ ಮಧುರ ಸಂಬಂಧ ಹೊಂದಿತ್ತು, ಹೊಂದಿದೆ ಎಂಬುದೂ ಸತ್ಯ.

ವಚನಗಳು ಪರ್ಯಾಯ ಚಿಂತನೆಗಳನ್ನು ನೀಡಿದ ಕಾರಣಕ್ಕೆ ಅವು ಬಹುಕಾಲ ಅಜ್ಞಾತವೆನಿಸಿದ್ದವು. ಅವುಗಳನ್ನು ಕುರಿತ ಪ್ರಾರಂಭಿಕ ಅಧ್ಯಯನಗಳು ಅವುಗಳ ಕಾವ್ಯ ಸೌಂದರ್ಯಕ್ಕೆ ಆದ್ಯತೆ ನೀಡಿದವು. ನವ್ಯರು ವಚನಗಳ ಭಾಷಿಕ ಸೌಂದರ್ಯಕ್ಕೆ, ರಾಚನಿಕ ಸ್ವರೂಪಕ್ಕೆ ಮನಸೋತಂತೆ, ಅವುಗಳ 'ಧ್ವನಿ'ಯನ್ನೂ ಗುರುತಿಸಿದರು.

ಡಾ|| ಎಸ್. ಪ್ರಸಾದಸ್ವಾಮಿ

ಅದು ವೈಜ್ಞಾನಿಕ, ಧನಾತ್ಮಕ, ಪ್ರಾಯೋಗಿಕ ಎಂದು ಸಾರಾಸಗಟಾಗಿ ಒಪ್ಪಿಕೊಳ್ಳುವ ಬದಲು ಬಹುಶಃ ದೊಡ್ಡ ಪ್ರಮಾಣದಲ್ಲಿ, ಕನ್ನಡ ನಾಡಿನಲ್ಲಿ ನಡೆದ 'ಪರ್ಯಾಯ ಆಲೋಚನಾ ಕ್ರಮದ ವಿವಿಧ ವಿನ್ಯಾಸಗಳ ಮೊತ್ತ' ಎಂದು ವಚನ ಚಳುವಳಿಯನ್ನು ಪೃಥಕ್ಕರಿಸಿದಲ್ಲಿ ವಚನಕಾರರ ಆಲೋಚನೆ ಮತ್ತು ಅಭಿವ್ಯಕ್ತಿ ವಿಧಾನಗಳನ್ನು ಗ್ರಹಿಸಬಹುದು. ಇಲ್ಲಿನ 'ವೈಚಾರಿಕತೆ' ತನ್ನ ಕಾಲದ ಭಿನ್ನ ದನಿ, ಅಷ್ಟೇ. ದನಿ 'ಧ್ವನಿ'ಯಾದದ್ದೂ ಅದರ ಹೆಗ್ಗಳಿಕೆ.

ವರ್ಣಾಶ್ರಮ ವ್ಯವಸ್ಥೆಯನ್ನು ವಿರೋಧಿಸಿ ಅದರಲ್ಲಿನ ಅಮಾನವೀಯ ಮುಖಗಳ ಅನಾವರಣಕ್ಕೆ ಯತ್ನಿಸಿದ್ದು, ಮಾನವೀಯ ಸಂಬಂಧಗಳನ್ನು ಗುರುತಿಸಲು ಆಶಿಸಿದ್ದು, 'ಅರಿವು'ಗೆ ಆದ್ಯತೆ ನೀಡಿದ್ದು, ಅಂತರಂಗ ಶುದ್ಧಿಗೆ ಬದ್ಧವಾದದ್ದು, ವೇಷ ಧರಿಸಿ ಆಚರಣೆ, ಧರ್ಮದ

# ವಚನ–ವೈಚಾರಿಕತೆ : ವಚನಕಾರ್ತಿಯರು

ನವೋದಯ ಕಾಲಘಟ್ಟದ ಸಹಜ ನಿರ್ವಚನವೆಂಬಂತೆ ಎಂ.ಆರ್.ಶ್ರೀ ತಮ್ಮ 'ವಚನಧರ್ಮಸಾರ'ದಲ್ಲಿ ಕಾವ್ಯಸೌಂದರ್ಯ ಮತ್ತು ಧಾರ್ಮಿಕ ಪರಿವೇಶ (ಜಾತಿ ಪ್ರಣೀತ) ಗುರುತಿಸುತ್ತಲೇ ವಚನಗಳನ್ನು ವೈದಿಕಸಾಹಿತ್ಯದ ಮತ್ತೊಂದು ಧಾರೆ ಎಂಬಂತೆ ಬಿಂಬಿಸಿರುವುದೂ ಉಂಟು. ಕುವೆಂಪು ವಚನಗಳನ್ನು 'ಆಧ್ಯಾತ್ಮಿಕ ಸಾಹಿತ್ಯ' ಎಂದುಬಿಟ್ಟರು. ಜಿ.ಎಸ್.ಎಸ್. ಇತ್ತೀಚೆಗೆ ಅಭಿಪ್ರಾಯಪಟ್ಟಂತೆ ಕುವೆಂಪು ಸಮಗ್ರವಾಗಿ ವಚನಗಳನ್ನು ಓದಿದ್ದಲ್ಲಿ ಅವರ ಸಾಹಿತ್ಯ ಮತ್ತು ಗ್ರಹಿಕೆಗಳಿಗೆ ಮತ್ತಷ್ಟು ಧನಾತ್ಮಕ ಆಯಾಮ ಲಭ್ಯವಾಗಬಹುದಿತ್ತು.

'ಶೂನ್ಯ ಸಂಪಾದನೆ'ಯಂಥ ಕೃತಿ ಕೂಡ ತನ್ನ ರಾಚನಿಕ ಸ್ವರೂಪದಲ್ಲಿ ಚರ್ಚೆ, ಸಂವಾದದಂತಹ ಪ್ರಜಾಪ್ರಭುತ್ವ ಲಕ್ಷಣಗಳನ್ನು ಒಳಗೊಂಡಿದೆ ಎಂಬುದನ್ನು ಗಮನಿಸಬಹುದು.

ಕ್ರಿಯೆಯ ರೂಪದಲ್ಲಿ ವಚನಸಾಹಿತ್ಯ ನಿರೂಪಿಸಿದ ನೆಲೆಗಳನ್ನು ಹೀಗೆ ಗುರುತಿಸಬಹುದು : ಏಕ ದೇವತಾರಾಧನೆಯನ್ನು ಹೇಳುತ್ತಲೇ ಬಹುದೇವತಾ ಪೂಜೆಯನ್ನು ಮುಂದುವರೆಸಿದ್ದು, ಸಂಸ್ಕೃತದ ಹೆಣಭಾರವನ್ನು ನೂಕಿ ಕನ್ನಡ ಸಂವೇದನೆಯನ್ನು ಪ್ರಕಟಿಸಿದ್ದು, ಸಮಾಜದ ಭಿನ್ನ ಸ್ತರಗಳ ಜನ ಮಾತನಾಡಲಾರಂಭಿಸಿದ್ದು, ಪರಸ್ಪರ ಟೀಕೆ, ಸಂವಾದ, ಚರ್ಚೆಗೆ ಅವಕಾಶವಿತ್ತದ್ದು.

ಖಚಿತವಾಗಿ ಅಲ್ಲದಿದ್ದರೂ ವಚನ ಚಳುವಳಿ ವೈದಿಕ ಪ್ರಣೀತ ಜ್ಞಾನಗಳಿಗೆ ಪ್ರತಿಕ್ರಿಯಿಸತೊಡಗಿ ಭಿನ್ನವಾದ ತಾತ್ವಿಕ ನೆಲೆಗಳನ್ನು ರೂಪಿಸಿಕೊಂಡದ್ದನ್ನು ವಚನಗಳಿಂದ ಗ್ರಹಿಸಬಹುದು. ಅರ್ಥವಿಲ್ಲದ ಆಚರಣೆಗಳು, ವ್ಯರ್ಥಪೂಜೆ ಇವುಗಳಿಗೆ ತೋರಿದ ವಿರೋಧ, ಶ್ರಮ, ದುಡಿಮೆ, ಹಂಚಿ ತಿನ್ನಲು ಪ್ರೋತ್ಸಾಹ, ಮದುವೆಯಂಥ ವ್ಯವಸ್ಥೆಯನ್ನು 'ಸಾಮಾಜೀಕರಣ'ಗೊಳಿಸಲು ಪ್ರಯತ್ನಿಸಿದ ಸಂಗತಿಗಳಿಂದಾಗಿ ಹೊಸ ಭರವಸೆ, ಸಂಘಟನೆಗಳಿಗೆ ದಾರಿಮಾಡಿದ್ದನ್ನು ಗುರುತಿಸಬಹುದು.

ಹೀಗಿದ್ದೂ 'ವಚನಸಾಹಿತ್ಯ' ಒಂದು ಜಾತಿಗೆ, ಧರ್ಮಕ್ಕೆ ಸಂಬಂಧಪಟ್ಟದ್ದೆಂಬ ಗ್ರಹಿಕೆ ಬೆಳೆದಿದೆ. ಅಲ್ಲಮನ ಕಟುಟೀಕೆ, ಬಸವನ ಅನುನಯದ ಮಾತು, ಅಕ್ಕನ ಪ್ರತಿಭಟನೆ, ಸಿದ್ಧರಾಮನ ಕ್ರಿಯೆಗಳನ್ನು ಗಮನಿಸಿದಾಗ 'ವಚನಗಳ' ವಿಶಾಲ ತಳಹದಿಯ ಗ್ರಹಿಕೆ ದಕ್ಕುತ್ತದೆ. ಜಾತಿ, ಭಾಷೆ, ವ್ಯವಸ್ಥೆ, ಪ್ರಭುತ್ವಗಳನ್ನು ವಿರೋಧಿಸಿದ. ಗಂಡು- ಹೆಣ್ಣಿನ ವ್ಯಕ್ತಿಸ್ವಾತಂತ್ರ್ಯಕ್ಕೆ 'ಭಾಷ್ಯ' ಬರೆದ ಈ ಚಿಂತನಾಕ್ರಮ ಭಾಷಿಕ ಸಂರಚನೆಗಳಾಗಿಯೂ ಬೆರಗುಂಟುಮಾಡುತ್ತದೆ. ಕಾವ್ಯ, ವಸ್ತು, ಧ್ವನಿ, ಅಲಂಕಾರ, ಅನುಭವ, ಪ್ರಯೋಗ, ಕ್ರಿಯೆ, ಪ್ರತಿಭಟನೆ ಇವೆಲ್ಲ ಅವಿನಾಭಾವ ಎಂಬಂತೆ ಬೆರೆತು ರಚಿತವಾದ ಪ್ರಕಾರವಿದು.

ಈ ಬಗೆಯ ಬಹುಮುಖಿ ಆಯಾಮಗಳಿರುವ ವಚನಗಳ ಭಿನ್ನ ಪಾತಳಿಗಳನ್ನು ಹೀಗೆ ಗುರುತಿಸಬಹುದು : ಸಂಸ್ಕೃತವನ್ನು ತಿರಸ್ಕರಿಸಿ ಕನ್ನಡ ಬಳಕೆ ಆರಂಭಿಸಿದ್ದು, ಅದನ್ನು ವ್ಯಾಪಕಗೊಳಿಸಿದ್ದು; ಅದಕ್ಕೊಂದು ತಾತ್ವಿಕ ನೆಲೆಗಟ್ಟನ್ನು ರೂಪಿಸಿದ್ದು, ಉಳ್ಳವರ ಸೊತ್ತಾಗಿದ್ದ ದೇವಾಲಯವನ್ನು ತಿರಸ್ಕರಿಸಿ 'ದೇಹವೇ ದೇಗುಲ' ಎಂಬ ಪರ್ಯಾಯ ಕಲ್ಪನೆ ಸಾಕಾರಗೊಳಿಸಿದ್ದು, ಸ್ತ್ರೀ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿಗೆ ಪೂರಕವಾದ ಪರಿಸರ ನಿರ್ಮಿಸಿದ್ದು, ವೈದಿಕ ಆಚರಣೆಗಳಲ್ಲಿನ ಸಾಂಸ್ಥಿಕ ವ್ಯವಸ್ಥೆಗಳನ್ನು ವಿರೋಧಿಸಿದ್ದು, ಪರ್ಯಾಯ ಕ್ರಮದ ಅನ್ವೇಷಣೆಗೆ ತೊಡಗಿದ್ದು, 'ಕ್ರಿಯೆ'ಗಳ ಮೂಲಕ ಪಿಡುಗಾಗಿದ್ದ ಹುಟ್ಟು, ಸಾವು, ಮದುವೆ, ಪೂಜೆಗಳನ್ನು ಭಿನ್ನವಾಗಿ ನೆಲೆಗೊಳಿಸಲು ಯತ್ನಿಸಿದ್ದು, ಧರ್ಮದ ಮೂಲಕ ನಡೆಯುವ ಶೋಷಣೆಯನ್ನು ವಿರೋಧಿಸಿ ತಿರಸ್ಕರಿಸಿದ್ದು, ಧರ್ಮಾಚರಣೆಯ ಬಾಹ್ಯ ಲಕ್ಷಣಗಳಾದ ಗಂಧ, ಕುಂಕುಮ, ನಾಮ ಇತ್ಯಾದಿಗಳನ್ನು ಕೈಬಿಟ್ಟದ್ದು, ಇಷ್ಟಲಿಂಗ ಕಲ್ಪನೆ ಜಾರಿಗೊಳಿಸಿದ್ದು, ವೈಯಕ್ತಿಕ ಸ್ವಾತಂತ್ರ್ಯ ಹಾಗೂ ಸರಳತೆಯನ್ನು ಬದುಕಿಗೆ ಅಳವಡಿಸಿದ್ದು.

ಈ ಬಗೆಯ ಆಲೋಚನೆಗಳು ಬಿಂಬಿತವಾಗಿರುವ ಕೆಲವು ವಚನಗಳನ್ನು ಗಮನಿಸಬಹುದು. ಇಲ್ಲೆಲ್ಲಾ



ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ವಚನ ಸಂದರ್ಭ' ಒಂದು ವಿಶಿಷ್ಟ ಘಟ್ಟ ಎಂಬುದು ಒಪ್ಪಿತ ಸಂಗತಿ. ಆ ವಿಶಿಷ್ಟತೆಗಿರುವ ಆಯಾಮ 'ವೈಚಾರಿಕತೆ' ಎನ್ನಬಹುದು. ಆಧುನಿಕ ಕಾಲ ಸಂದರ್ಭದ ಮಾನದಂಡಗಳ ಅನ್ವಯದ ಬದಲು ಸಾಮಾಜಿಕ, ಸಾಂಸ್ಕೃತಿಕ ಮತ್ತು ಚಾರಿತ್ರಿಕ ಚೌಕಟ್ಟಿನಲ್ಲಿ ವಿಶ್ಲೇಷಣೆ ಕೈಗೊಂಡಲ್ಲಿ ಈ ವೈಚಾರಿಕತೆಯ ತಾತ್ವಿಕತೆ, ನೆಲೆ ಮತ್ತು ಆಗತ್ಯಗಳು ನಿಲುಕುತ್ತವೆ.

ಹೆಸರಿನಲ್ಲಿ ನಡೆಸುತ್ತಿದ್ದ ಶೋಷಣೆಯನ್ನು ಗುರುತಿಸಿ ಧಿಕ್ಕರಿಸಿದ್ದು, ಜಾತಿ ಭೇದ ಬೇಡ ಎಂದು ಆಯಾ ಜನದ ಉಪಯೋಗದ ಮಾದರಿಗಳಿಂದಲೇ ನಿದರ್ಶನ ನೀಡಿದ್ದು: ಉದಾಹರಣೆಗೆ,

*ಕುರಿ ಕೋಳಿ ಕಿರಿ ಮೀನು ತಿಂಬವರಿಗೆಲ್ಲ*
*ಕುಲಜರೆಂದಿರಿ*
*ಶಿವಗೆ ಪಂಚಾಮೃತವ ಕರೆವ*
*ಪಶುವ ತಿಂಬ ಮಾದಿಗ ಕೀಳೆ ?*
*ಏನಯ್ಯಾ, ವಿಪ್ರರು ನುಡಿದಂತೆ ನಡೆಯರು*
*ಇದೆಂತಯ್ಯ*
*ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ.*

ವೈದಿಕ ಆಚರಣೆ - ನಂಬಿಕೆಗಳಿಗೆ ಪ್ರಶ್ನೆ ಹಾಕಿದ್ದು:

*ಶಾಸ್ತ್ರ ಘನವೆಂಬೆನೆ*
*ಕರ್ಮವ ಭಜಿಸುತ್ತದೆ.*
*ವೇದ ಘನವೆಂಬೆನೆ*
*ಪ್ರಾಣವಧೆಯ ಹೇಳುತ್ತದೆ*
*ಅಲ್ಲೆಲ್ಲಿಯೂ ನೀವಿಲ್ಲ (ಬಸವಣ್ಣ)*

ಅದೇ ಬಗೆಯ ಕೆಲ ಸಾಲು :

*ಜಾತಿ ಭೇದವಿಲ್ಲ ಸೂತಕವಿಲ್ಲ*
*ಅಜಾತಂಗೆ ಕುಲವಿಲ್ಲ ಬಸವ.*

ಈ ಬಗೆಯ ಕಿರು ಅಭಿಪ್ರಾಯಗಳು ಕಾಲಸಂದರ್ಭಕ್ಕೆ ತಕ್ಕಂತೆ ನೀಡಿದ ಪ್ರತಿಕ್ರಿಯೆಗಳೂ ಆಗಿರಬಹುದು. ಇಲ್ಲಿನ ಚಿಂತನೆ ಸಮಗ್ರವೂ, ಅಸಮಗ್ರವೂ ಎಂಬ ಪ್ರಶ್ನೆಗಿಂತಲೂ ಪ್ರಶ್ನಿಸುವ, ಅಲ್ಲಗಳೆಯುವ, ಪರ್ಯಾಯ ಕನಸುವ ಕ್ರಮ ಗಮನೀಯ. ಡಾ॥ ಚೆಕ್ಕೆ ಅವರ ಅಧ್ಯಯನದಲ್ಲಿ ಈ ಅಭಿಪ್ರಾಯವಿದೆ :

''ವಚನ ಚಳುವಳಿಯಿಂದ ಪ್ರಭಾವಿತವಾದ ಲಿಂಗಾಯತ ಧರ್ಮ-ಸಮಾಜ ವಿಧವೆಯ ಮದುವೆಗೆ ಸಮರ್ಥನೆ ನೀಡುತ್ತದೆ.'' ಹಾಗೆ ನೋಡಿದರೆ ವಿಧವಾ ವಿವಾಹ ಭಾರತೀಯರ ಸಮಸ್ಯೆಯಲ್ಲ; ಬ್ರಾಹ್ಮಣರ ಸಮಸ್ಯೆ ಮಾತ್ರ. ಏಕೆಂದರೆ, ಸಾಮಾಜಿಕ ಅಧ್ಯಯನಗಳು ತಿಳಿಸುವಂತೆ ಬಹುಸಂಖ್ಯಾತರಾದ ಶೂದ್ರ-ದಲಿತ ಸಮಾಜದಲ್ಲಿ ಗಂಡ ಸತ್ತ ಹೆಣ್ಣಿಗೆ ಕೂಡಿಕೆ, ನಿಯೋಗ, ಇಟ್ಟುಕೊಳ್ಳುವುದು, ಮರುಮದುವೆ ಮೊದಲಾದ ಪರ್ಯಾಯಗಳಿವೆ. ಅವು ಆಚರಣೆಯಲ್ಲಿವೆ.

ಇನ್ನೊಂದು ಸಂಗತಿಯೆಂದರೆ ಜನಿವಾರ ಗಂಡಿಗೆ ಸೀಮಿತ. ಆದರೆ ಶಿವದಾರ ಎಲ್ಲರಿಗೆ ಮತ್ತು ಗಂಡು-ಹೆಣ್ಣು ಇಬ್ಬರಿಗೂ.

ಭಕ್ತಿ-ಆಚರಣೆಗಳ 'ಸ್ಥಾವರತೆ' ಗಮನಿಸಿ ಪ್ರತಿಕ್ರಿಯಿಸಿದ ಈ ವಚನ :

*'ಕಟ್ಟಿದಾತ ಭಕ್ತನಪ್ಪನೆ*
*ಕೆಡಹಿದಾತ ದ್ರೋಹಿಯಪ್ಪನೆ...'*

ಹಾಗಾಗಿ 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ 'ನಿರಾಕಾರ'ದ ಸಾಕಾರ ಕಲ್ಪನೆ ಮೂಡಿತು.

ಸಮಾಜಕ್ಕೆ 'ಶಾಸನದಂತೆ' ಭಾಸವಾಗುತ್ತಿದ್ದ ಕೆಲವು ನುಡಿಗಟ್ಟನ್ನು ಬದಲಿಸಲು ಯತ್ನಿಸಿದ್ದು:

*ಹೆಣ್ಣು ಹೊನ್ನು ಮಣ್ಣು ಮಾಯೆ ಅಲ್ಲ*
*ಮನದ ಮುಂದಣ ಆಶೆಯೇ ಮಾಯೆ.*

ಪದೇ ಪದೇ ಉಲ್ಲೇಖಗೊಂಡಿರುವ ವೈದಿಕ ಅಭಿಪ್ರಾಯಕ್ಕೆ ಮೊದಲ ಬಾರಿಗೆಂಬಂತೆ ತಿರಸ್ಕಾರದ ಉತ್ತರ ಇಲ್ಲಿದೆ. ನಿರ್ಜೀವ ವಸ್ತುಗಳಾದ ಹೊನ್ನು, ಮಣ್ಣು ಜೊತೆ ಜೀವಿ 'ಹೆಣ್ಣ'ನ್ನು ಇಟ್ಟು ತೂಗುವ ಈ ಬೌದ್ಧಿಕ ಪರಂಪರೆಗೆ ಏನು ಹೇಳಲಿ ?

ಹಾಗಾಗಿ ವೇದ-ಸಂಸ್ಕೃತ ಪಾರಮ್ಯದ ವಿರೋಧ ಅಲ್ಲಮನಲ್ಲಿ ಕಟುವಾಗಿ - ಬಹುವಾಗಿ ಕಾಣಸಿಗುತ್ತದೆ.

*ವೇದವೆಂಬುದು ಓದಿನ ಮಾತು*
*ಶಾಸ್ತ್ರವೆಂಬುದು ಸಂತೆಯ ಸುದ್ದಿ*
*ಪುರಾಣವೆಂಬುದು ಪುಂಡರ ಗೋಷ್ಠಿ*
*..........................................*
*ಭಕ್ತಿಯೆಂಬುದು ತೋರುಂಬ ಲಾಭ.*

ಅಲ್ಲಮ, ಬಸವರ ಈ ಬಗೆಯ ಪ್ರತಿಕ್ರಿಯೆಗೆ ಸಿದ್ಧರಾಮನೂ ದನಿಗೂಡಿಸಿದ್ದಾನೆ: 'ಮಾಡಿದರು, ಮಾಡಿದರು ಮತ್ತಾರ ಹಿತಕ್ಕಲ್ಲ ನೋಡಯ್ಯ' ಎಂಬ ವಚನ ಹಾಗೂ

*ಪತ್ರೆಯ ನೇಮದವರು ಒಂದು ಕೋಟಿ*
*ಲಿಂಗಾರ್ಚನೆಯ ನೇಮದವರು ಒಂದು ಕೋಟಿ*
*ಜಂಗಮ ತೃಪ್ತಿಯವರು ಒಂದು ಕೋಟಿ*
*ತನ್ನ ತಾ ತಿಳಿಯುವ ನೇಮದವರು ಒಬ್ಬರೂ ಇಲ್ಲ*

ಮತ್ತು

*ಹೆಣ್ಣು ಹೆಣ್ಣಲ್ಲ; ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ*

ಎಂಬ ಮಾತುಗಳು ಭಿನ್ನವೆನಿಸುತ್ತವೆ; ವಿಚಾರ ಪೂರ್ಣವೆನಿಸುತ್ತವೆ.

ಹೀಗೆ ಹಲವು ವಚನಗಳು ಕಾವ್ಯಸೌಂದರ್ಯದ ಬದಲು ಬೌದ್ಧಿಕ ಸಂವಾದದಂತೆ ಭಾಸವಾಗುವುದೂ ಉಂಟು. ಹಾಗಾಗಿ ಅಲ್ಲಮನ ಬೌದ್ಧಿಕತೆ, ಬಸವಣ್ಣನ ಸಾಮಾಜಿಕತೆ, ಅಕ್ಕನ ವೈರಾಗ್ಯ ಮತ್ತು ವ್ಯಕ್ತಿಸ್ವಾತಂತ್ರ್ಯದ ಆಯಾಮಗಳಿಂದ ವಚನಗಳು ಕನ್ನಡದ ದೇಸೀ ವೈಚಾರಿಕತೆಯ ಪ್ರಚುರ ನೆಲೆಗಳಾಗಿರುವುದನ್ನೂ ಗಮನಿಸಬಹುದು.

ಭಾರತೀಯ ಸಮಾಜ ಮತ್ತು ಕುಟುಂಬ ವ್ಯವಸ್ಥೆ ಪುರುಷ ಪ್ರಧಾನ ಮತ್ತು ಪುರುಷ ದೃಷ್ಟಿಕೋನಗಳಿಂದ ನಿಯಂತ್ರಿತವಾದುದು ಎಂಬ ಮಾತಿದೆ. ಅದು ಸತ್ಯವೂ ಹೌದು. ಬಹುಶಃ 'ಆರ್ಯ'ರ ಕೌಟುಂಬಿಕ ನಿರ್ವಹಣೆ ಮತ್ತು ವ್ಯವಹಾರ ಧೋರಣೆಗಳನ್ನು ಉಳಿದ ಸಮುದಾಯ ಅನುಸರಿಸಿ 'ಸಾಂಸ್ಕೃತೀಕರಣ'ಗೊಂಡು ಈ ಪ್ರಕ್ರಿಯೆ ಮುಂದುವರೆದಿರಬೇಕು; ದೃಢಗೊಂಡಿರಬೇಕು.

ಆದರೆ ಅಚ್ಚರಿಯ ವಿಷಯವೆಂದರೆ ವಚನ ಚಳುವಳಿಯ ಸಂದರ್ಭದಲ್ಲಿ ಪುರುಷಪ್ರಣೀತ ವೈಚಾರಿಕತೆಯನ್ನು ಒಪ್ಪಿದ, ಅನುಸರಿಸಿದ, ಪ್ರಶ್ನಿಸಿದ ವಚನಕಾರ್ತಿಯರುಂಟು. ಅವರಲ್ಲಿ ಬಹುತೇಕರು 'ವರ್ಣವ್ಯವಸ್ಥೆಯ' ದೃಷ್ಟಿಕೋನದ ಅನ್ವಯ 'ಕೆಳವರ್ಗದ ಮಹಿಳೆ'ಯರು. ಅವರ ಅಭಿವ್ಯಕ್ತಿಗೆ ವೇದಿಕೆಯಾದ, ನೆಲೆಯಾದ, ಪ್ರೇರಣೆಯಾದ ಕೆಲ ವಚನಗಳಿವೆ; ಅವುಗಳಿಗೆ ಉತ್ತರವೆಂಬಂತೆ ವಚನಕಾರ್ತಿಯರು ತಮ್ಮ ವಚನಗಳಲ್ಲಿ ಪ್ರತಿಕ್ರಿಯಿಸಿದ್ದಾರೆ.

೧. *ಅಳಿವರ ಉಳಿವರ ಸುಳಿವರ ನಿಲವ ನೋಡಿ ಕಂಡು*
*ಸೋಂಕಿಲ್ಲದ ಸಿಕ್ಕಿಲ್ಲದ ರೂಪಿಲ್ಲದ ನಿಜವ ಬಯಸುತ್ತಿದ್ದೆ*
*ಕಾಲಿಲ್ಲದೆ ನಡೆಯುತ್ತಿದ್ದೆ, ಕಣ್ಣಿಲ್ಲದೆ ನೋಡುತ್ತಿದ್ದೆ*
*ಗುಹೇಶ್ವರ.*

೨. *... ವಾಕು ಪಾಕವಾದಡೆ ಏನು*
*ಮನ ಪಾಕವಾಗದನ್ನಕ್ಕರ*

೩. *... ಗುಹೇಶ್ವರನೆಂಬ ಲಿಂಗವನರಿದ ಬಳಿಕ*
*ನೀ ನಾನೆಂಬುದಿಲ್ಲ ನೋಡಾ*

೪. *ನೀನು ಜ್ಯೋತಿರ್ಲಿಂಗವಾದಡೆ ಉಪಮಿಸಿ*
*ನೋಡಬಲ್ಲವರಿಲ್ಲಯ್ಯ*

೫. *ಆಸೆಯೆಂಬ ಶೂಲದ ಮೇಲೆ ವೇಷವೆಂಬ ಹೆಣನ*
*ಹುಳ್ಳಿರಿಸಿ*
*ಧರೆಯ ಮೇಲುಳ್ಳ ಹಿರಿಯರು ಹೆಂಗೆ ಸವೆದರು ನೋಡಾ*
*ಆಸೆಯ ಮುಂದಿಟ್ಟುಕೊಂಡು ಸುಳಿವ ಹಿರಿಯರ ಕಂಡು*
*ಹೇಸಿಕೆಯಾಯಿತ್ತು ಗುಹೇಶ್ವರ.*

೬. *ಅರಿವುಳ್ಳವಂಗೆ ಗುರುವಿನ, ಜಂಗಮದ,*
*ಪಾದೋದಕದ*
*ಹಂಗೇಕೆ ? ಶಿವನರಿದ ಸಂದೇಹವೇಕೆ ?*
*ತನುವಿನಾ ಮೇಲೆ ಬ್ರಹ್ಮಚರ್ಯ ಅಳವಟ್ಟರೇನು*
*ಮನದಲಿ ಬ್ರಹ್ಮಚರ್ಯ ಅಳವಡದೆ...*
*ಬಾವಲಿ ತಲೆಕೆಳಗಾಗಿದ್ದಡೆ, ತಪಸ್ವಿಯೆ ?*
*ಬತ್ತಲೆ ಇದ್ದವರೆಲ್ಲ ಕತ್ತೆಯ ಮಕ್ಕಳು*
*ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು*
*ತಲೆ ಜಡೆಗಟ್ಟಿದವರೆಲ್ಲ ಹೊಲೆ ಸಂತಾನ*
*ಆವ ಪ್ರಕಾರವಾದರೇನು ? ಅರಿವೇ ಮುಖ್ಯ.*

ಮೇಲಿನ ವಚನಗಳು ಹೇಳಬಯಸುವ ಹಿರಿತನ, ಅರಿವು, ಮಾತು, ಮೊದಲಾದ 'ಕಲ್ಪನೆ'ಗಳು ಅಪಮೌಲ್ಯ ಗೊಂಡಿರುವುದನ್ನು ಗಮನಿಸಿ, ಅವುಗಳ ಔಚಿತ್ಯ, ಅರ್ಥ-ಧ್ವನಿ ಗಮನಿಸಿ, ಅವುಗಳಿಗೆ ಪೂರಕವಾದ, ಉಚಿತವಾದ ವಚನಗಳನ್ನು ಕಟ್ಟಿದರು. ಕಾಯಕ, ದಾಸೋಹ, ಸಮಾನತೆಗಳು ಮೌಲ್ಯಗಳಾದಾಗ, ಇತರ ವಚನಕಾರರು ಗೃಹಸ್ಥಧರ್ಮಕ್ಕೆ ಆದ್ಯತೆ ನೀಡಿದಾಗ (ಸತಿಪತಿಗಳೊಂದಾಗಿ...) ಈ ಪ್ರಯತ್ನಗಳನ್ನು ವಚನಕಾರ್ತಿಯರು ಸೂಕ್ಷ್ಮವಾಗಿ ನಿರೀಕ್ಷಿಸಿದಂತೆ ಕಾಣಬರುತ್ತದೆ. ಮೇಲಿನ ಮೌಲ್ಯಗಳ ಮೂಲಕ ವಚನ ಚಳವಳಿ 'ಏಕಶಿಲಾ ಸಮಾಜದ ಆಶಯ' ಹೊಂದಿರಬಹುದೆ ಎಂಬ ಅನುಮಾನವೂ ಕಾಡುತ್ತದೆ.

ಹಾಗಾಗಿ ಕೆಲವು ವಚನಕಾರ್ತಿಯರು ಭಕ್ತಿ, ಕಾಯಕಗಳಿಗೆ ತಾವು ಪುರುಷರಿಗೆ ಸಮಾನರು, ಆಧ್ಯಾತ್ಮಿಕ ಸಮನ್ವಯಕ್ಕೆ ಸಮರ್ಥರು ಎಂಬುದನ್ನು ಗಟ್ಟಿಯಾಗಿ ಧ್ವನಿಸಿದ್ದಾರೆ. ತಮ್ಮ 'ಪತಿ' ಒಂದು ಕ್ಷಣ ಎಚ್ಚರ ತಪ್ಪಿ ನಡೆದಾಗ ತಿದ್ದಿ ಬುದ್ಧಿ ಹೇಳಿದವರೂ ಉಂಟು. ಆ ನೆಲೆಯ ಕೆಲವು ಸಾಲುಗಳಿಲ್ಲಿವೆ :

*'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ'*
*'ತೂಬರದ ಕೊಳ್ಳಿಯಂತೆ ಉರಿವಾತ ಭಕ್ತನೆ'*
*'ಹೋತಿನ ಗಡ್ಡದಂತೆ ಗಡ್ಡದ ಹಿರಿಯರ ನೋಡಾ'*
*'ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ ?'*

ಹೀಗೆ 'ವಿಮರ್ಶಾತ್ಮಕ ಪ್ರತಿಕ್ರಿಯೆ' ನೀಡಿದ ವಚನಕಾರ್ತಿಯರು ಅಂದಿನ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡದವರು 'ಭವಿ' ಎನ್ನುತ್ತಾರೆ. ಆ ಮೂಲಕ ಅಂದಿನ ಭಕ್ತಿ ಕಲ್ಪನೆಗೆ ಭಿನ್ನ ಆಯಾಮ ನೀಡಿದ್ದಾರೆ.

**ಅಕ್ಕ**

ವೈಚಾರಿಕತೆ, ಆತ್ಮ ಪ್ರತ್ಯಯದ ಸಮನ್ವಯ ಈಕೆ. ಹೆಣ್ಣಿನ ವ್ಯಕ್ತಿತ್ವಕ್ಕೆ ಘನತೆ ತಂದವಳು. ವಚನ ಚಳವಳಿಯೊಂದಿಗೆ ಆಕೆಗೆ ಇದ್ದ ಸಾಮೀಪ್ಯ – ಸಾಹಚರ್ಯ ಆಕಸ್ಮಿಕ, ತಾತ್ಕಾಲಿಕ. ಉಡುತಡಿಯಿಂದ ಶ್ರೀಶೈಲಕ್ಕೆ ಹೊರಟ ತನ್ನ ಹಾದಿಯಲ್ಲಿ ಸ್ವಲ್ಪ ಕಾಲ ನಿಂತವಳು – ಕಲ್ಯಾಣದಲ್ಲಿ.

ಅಕ್ಕನ ವೈರಾಗ್ಯ ಬೆರಗನ್ನುಂಟುಮಾಡುತ್ತದೆ. ಈಕೆಯದು ಆಕಾಲ ವೈರಾಗ್ಯವಲ್ಲ; ಸಾಂಸ್ಥಿಕ ವೈರಾಗ್ಯವೂ ಅಲ್ಲ; ವರ್ಣಾಶ್ರಮ ಪ್ರಣೀತ ವೈರಾಗ್ಯವೂ ಅಲ್ಲ. ಕಲ್ಯಾಣಕ್ಕೆ ಬರುವ ಮುನ್ನವೇ ಆಕೆಯ ತಾತ್ವಿಕ ನಿಲುವುಗಳು ಸ್ಪಷ್ಟವಾಗಿದ್ದವು. ಆ ನಿಲುವುಗಳು ಆ ಕಾಲಕ್ಕೆ ಪ್ರಚಲಿತವಿದ್ದ ಸಾಮಾಜಿಕ ದೃಷ್ಟಿಕೋನಕ್ಕಿಂತ ಭಿನ್ನವಾಗಿದ್ದವು. ಹಾಗಾಗಿಯೇ ಆಕೆ ಅನುಭವ ಮಂಟಪದಲ್ಲಿ 'ಪರೀಕ್ಷೆ'ಗೊಳಪಡಬೇಕಾಯಿತು.

ದೈವ ಕುರಿತ ವ್ಯಾಕುಲತೆ, ಪುಸ್ತಕ ಮತ್ತು ಶಾಸ್ತ್ರ ಜ್ಞಾನಗಳ ಬಗ್ಗೆ ತಿರಸ್ಕಾರ, ವೈದಿಕ ಪ್ರಣೀತ ಆಶಯಗಳ ನಿರಾಕರಣೆ ಅಕ್ಕನ ವಿಶೇಷ. 'ಮಾಯೆ' ಕುರಿತ ಅವಳ ವ್ಯಾಖ್ಯಾನ ವೈಯಕ್ತಿಕ ಹಾಗೂ ವಿಶಿಷ್ಟ. ಈವರೆಗೆ ಪುರುಷ ದೃಷ್ಟಿಕೋನದಿಂದ ನಿರ್ವಚಿಸಲ್ಪಟ್ಟಿದ್ದ ಮಾಯೆ ಕುರಿತ ವ್ಯಾಖ್ಯಾನವನ್ನು ಆಕೆ ಭಿನ್ನವಾಗಿ ಬಿಂಬಿಸಿದ್ದಾಳೆ.

ಪುರುಷನಿಗೆ ಸ್ತ್ರೀ ಅಭಿಮಾನ ಮಾಯೆ
ಸ್ತ್ರೀಗೆ ಪುರುಷ ಅಭಿಮಾನ ಮಾಯೆ
ಹೆಣ್ಣಿಗೆ ಗಂಡು ಮಾಯೆ
ಗಂಡಿಗೆ ಹೆಣ್ಣು ಮಾಯೆ.

ಅವರೆಗೆ ಇದ್ದ 'ಮಾಯೆ' ಕುರಿತ 'ಸಿಕ್ಕ'ನ್ನು ಅಕ್ಕ ಬಿಡಿಸಿಕೊಂಡ ಬಗೆ ಅಪೂರ್ವವಾದುದು. ಆ ನೆಲೆಯಲ್ಲಿ ವೈರಾಗ್ಯ ಹೊಂದಲು ಗಂಡ ಹೆಂಡತಿಯನ್ನು ಬಿಡುವುದಾದರೆ, ಅದೇ ಕಾರಣಕ್ಕೆ ಹೆಣ್ಣು ಗಂಡನನ್ನೇಕೆ ಬಿಡಬಾರದು, ಎಂಬುದು ಅಕ್ಕನ ತಾತ್ವಿಕ ಪ್ರಶ್ನೆ.

ವಚನ ಚಳವಳಿ ಲೌಕಿಕ ದಾಂಪತ್ಯ ಜೀವನಕ್ರಮವನ್ನು ಒಪ್ಪಿತ್ತು. ಅದನ್ನೊಂದು 'ಆದರ್ಶ'ದ ಮೌಲ್ಯ ಎಂದು ಸ್ಥಿರೀಕರಿಸಲು ಯತ್ನಿಸಿತ್ತು. ಸಂಸಾರದ ಮೂಲಕವೇ ಅಧ್ಯಾತ್ಮ ಸಾಧ್ಯ ಎಂದು ನಂಬಿತ್ತು. ಆದರೆ ಅಕ್ಕ ಅದಕ್ಕೆ ಭಿನ್ನ ನೆಲೆಯಲ್ಲಿ ಪ್ರತಿಕ್ರಿಯಿಸಿದ್ದಾಳೆ. 'ಮದುವೆ' ಎಂಬ ವ್ಯವಸ್ಥೆಯನ್ನು ಪ್ರಶ್ನಿಸಿದಳು, ಪ್ರತಿಭಟಿಸಿದಳು. ಅವಳ ವಿವಾಹ ಕಲ್ಪನೆ ಅಲೌಕಿಕ, ಅನುಭಾವಿಕ.

ಅವಳ ಭಾವನೆಗಳು ಹೀಗಿವೆ: ಅವು ಸಾಂಪ್ರದಾಯಿಕ, ವೈಭವಪೂರ್ಣ ಆದರೆ ಅಲೌಕಿಕ :

ಅರಿಸಿನವನೆ ಮಿಂದು
ಹೊಂದೊಡಿಗೆಯನು ತೊಟ್ಟು
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯ.

ಹಾಗಾಗಿ ಆಕೆ ಸತಿ, ಲಿಂಗ ಪತಿ. ಆ ನೆಲೆಯಲ್ಲೇ ಆಕೆ ಕೇಳುವುದು : 'ಇಹಕ್ಕೊಬ್ಬ ಗಂಡ, ಪರಕ್ಕೊಬ್ಬ ಗಂಡನೆ ?' ಈ ಮಾತುಗಳಂತೆ ದೈವ ಮತ್ತು ಅಕ್ಕನ ಸಂಬಂಧ ಸನಾತನವಾದ್ದು, ಅವಿನಾಭಾವ ಸಂಬಂಧವುಳ್ಳದ್ದು. 'ಸಾವಿಲ್ಲದ ಕೇಡಿಲ್ಲದ ಪುರುಷ ಅವಳ ಪತಿ.'

'ಮದುವೆಯಾದ ಹೆಣ್ಣು ಗಂಡನನ್ನು ಬಿಟ್ಟು, ಮದುವೆಯಾದ ಗಂಡನ್ನು ಹುಡುಕಿಕೊಂಡು ಹೊರಟ' ಅಕ್ಕನ ರೀತಿ ಅನುಭಾವಿಕ ಅನ್ವೇಷಣೆಯ ಪ್ರತೀಕ. ಇದು ಅಂದಿನ ಶರಣಧರ್ಮದ ಸಾಮಾಜಿಕ ನಿಲುವಿಗೆ ಅಕ್ಕ ನೀಡಿರುವ 'ವ್ಯಕ್ತಿನಿಷ್ಠ' ಪ್ರತಿಕ್ರಿಯೆ. ಆಕೆ ಸಂಸಾರದ ಮೂಲಕ ಒದಗುವ ದೈವಸಾಂಗತ್ಯವನ್ನು ನಿರಾಕರಿಸುವುದಿಲ್ಲ. ಉದಾಹರಣೆಗೆ, ಹಾವಿನ ಬಾಯ ಹಲ್ಲು ಕಳೆದು... ಆದರೆ ಆಯ್ಕೆ ಮಾಡಿಕೊಂಡ 'ದಾರಿ' ಮಾತ್ರ ಭಿನ್ನ.

ಈಕೆಯ 'ಗಂಡ' ರೂಹಿಲ್ಲದ ಚೆಲುವ, ಸುಂದರ. ಅವನೊಡನೆ ಈಕೆ ಒಂದಾಗುವ ಸ್ಥಿತಿ ಕೇವಲ ಬಯಲ, ಬೆಳಕ, ಶೂನ್ಯ ಸ್ಥಿತಿ ಮಾತ್ರ ಆಗಿರದೆ ಉತ್ಕಟ ಪ್ರಣಯಾನುಭವವಾಗಿದ್ದು, ಶೃಂಗಾರದ ರೂಪಕದ ಮೂಲಕವೇ ವರ್ಣಿತವಾಗಿದೆ. ಈ ಬಗೆಯ ಸ್ಥಿತಿಯಲ್ಲಿ ಆಕೆ ತೀವ್ರ ಅಂತರ್ಮುಖಿ. ತನ್ನೊಡನೆ ತಾನು ಮಾತನಾಡಿಕೊಂಡ ಅನುಭವವದು. ಅಕ್ಕ ಏಕಾಂಗಿಯಾದ ಧೀರ ಹೆಣ್ಣು. ಲೋಕನಿಂದೆ, ಅಪವಾದ ಇತ್ಯಾದಿಗಳನ್ನು ಲಕ್ಷಿಸಿಲ್ಲ. ನಿಜವಾದ ಅಧ್ಯಾತ್ಮ ಸಾಧಕರಲ್ಲಿ ಕಾಣುವ ನಿರ್ಭಯತೆ, ನಿರ್ಲಿಪ್ತತೆ ಅವಳದು. ಹೀಗೆ ತನ್ನ ನಿಲುವು ಪ್ರಕಟಿಸುವಲ್ಲಿ, ನೆಲೆ ಅರಸುವಲ್ಲಿ ಆಗ ಪ್ರಚಲಿತವಾಗಿದ್ದ 'ಮನುಧರ್ಮ'ಶಾಸ್ತ್ರಕ್ಕೆ ವಿರುದ್ಧವಾದ ನಿಲುವು ತಳೆದು ಸ್ವತಂತ್ರ ಅಸ್ತಿತ್ವ ಮತ್ತು ವ್ಯಕ್ತಿತ್ವ ತೋರಿಸಿದ ದಿಟ್ಟೆ. ಆ ಮೂಲಕ ಅಕ್ಕ ತನ್ನ ವೈಚಾರಿಕ ನೆಲೆಗಳನ್ನು ಸಾಕಾರಗೊಳಿಸಿದ್ದಾಳೆ.

**ಅಮುಗೆ ರಾಯಮ್ಮ**

ಈಕೆ ನಿಷ್ಠುರ ವಚನಕಾರ್ತಿ. ಸಮಾಜ, ಜನರ ಡಾಂಭಿಕತೆ, ವಿರಕ್ತರು, ಭಕ್ತರು, ಜ್ಞಾನಿಗಳು, ವೇಷಧಾರಿಗಳು ಈಕೆಯ ವ್ಯಂಗ್ಯಭರಿತ ಗೇಲಿಗೆ, ವಿಮರ್ಶೆಗೆ ಗುರಿಯಾಗಿರುವುದನ್ನು ಗಮನಿಸಬಹುದು :

ವಿರಕ್ತ, ವಿರಕ್ತ ಎಂಬ ಹಾದಿಕಾರರ ವಿರಕ್ತರೆನ್ನಬಹುದೆ ?
ಕಾವಿಯ ಹೊದ್ದು ತಿರುಗುವ ಜೀವಿಗಳ್ಗೆಲ್ಲರು ವಿರಕ್ತರೆ ?
ನಾಮವ ಹೊತ್ತುಕೊಂಡು ತಿರುಗುವ ಗಾವಿಲರ
ವಿರಕ್ತರೆಂದಡೆ ನರಕ ತಪ್ಪದು.

ಅವಳ ಪ್ರಕಾರ ವಿರಕ್ತ :

ಅರಿಯ ಬಲ್ಲಡೆ ವಿರಕ್ತನೆಂಬೆನು
ಆಚಾರವನರಿದಡೆ ಅಭೇದ್ಯನೆಂಬೆನು
ಸ್ತುತಿ ನಿಂದೆಗೆ ಹೊರಗಾದಡೆ ಸುಮ್ಮಾನಿ ಎಂಬೆನು
ಘನ ತತ್ವವನರಿದು ಶಿಶು ಕಂಡ ಕನಸಿನಂತೆ
ಇದ್ದಡೆ ಶಿವಜ್ಞಾನಿ ಎಂಬೆನು.

'ಗುರು' ಕುರಿತ ಅವಳ ಮಾತು :




ಗುರುವೆಂಬೆನೆ ಗುರುವು ನರನು
ನಾನೆ ಗುರುವಾದ ಬಳಿಕ ಅವನಿಲ್ಲ
ನಾನೆ ಲಿಂಗವಾದ ಬಳಿಕ ಲಿಂಗವೆಂಬುದಿಲ್ಲ
ನಾನೆ ಜಂಗಮವಾದ ಬಳಿಕ ಜಂಗಮವೆಂಬುದಿಲ್ಲ

'ಜ್ಞಾನ' ಕುರಿತ ಅವಳ ಗ್ರಹಿಕೆ :

ಜ್ಞಾನ ಬೀದಿಯ ವಸ್ತುವಲ್ಲ
ಚೀಲ ತುಂಬಿ ಇಡುವಂತಹದಲ್ಲ
ಜ್ಞಾನ ಗೊತ್ತಾಗದಂತೆ ಇರುವ ಕ್ರಿಯೆ
ಗೆದ್ದಾಗ ಬೀಗದೆ ಇರುವವನೆ ಜ್ಞಾನಿ.

'ಅನುಭಾವ' ಕುರಿತ ಮಾತು :

ಅನುಭಾವಿಗೆ ನನ್ನವರು ತನ್ನವರು ಎಂಬ
ಭೇದವುಂಟೆ ?
ನೀರಮೇಲಣ ತೆಪ್ಪದಂತೆ
ಸಮುದ್ರದೊಳಗಣ ಬೆಂಗುಂಡಿನಂತೆ
ಇರಬಲ್ಲನೇ ಅನುಭಾವಿ.
ವಚನಗಳ ಓದಿ, ವಚನಂಗಳ ಕೇಳಿ
ಕಂಡಕಂಡ ಠಾವಿನಲ್ಲಿ ಹಿಂಡಲೆವ ಜಗಭಂಡರ
ಅನುಭಾವಿಗಳೆಂದಡೆ ನರಕ ತಪ್ಪದು.

ಉಳಿದ ವಚನಕಾರ್ತಿಯರಿಗೆ ಹೋಲಿಸಿದರೆ ರಾಯಮ್ಮನ ಅರಿವು, ನಿಲುವು ಮತ್ತು ಗ್ರಹಿಕೆಗಳಲ್ಲಿ ಸ್ಪಷ್ಟತೆ ಇದೆ; ನಿರ್ಭಿಡೆ ಇದೆ; ಖಚಿತವಾದ ತಾತ್ವಿಕತೆಯಿದೆ. ಹಾಗಾಗಿ ಕಠೋರವಾಗಿ ಮಾತನಾಡಿದ್ದಾಳೆ.

"ಹೊನ್ನ ಬಿಟ್ಟಡೇನು ? ಹೆಣ್ಣ ಬಿಟ್ಟಡೇನು ? ಮಣ್ಣ ಬಿಟ್ಟಡೇನು ?
ವಿರಕ್ತನಾಗಬಲ್ಲನೆ ?" ಎಂದು ಕೇಳುತ್ತಾಳೆ.
ಮಂಡೆ ಬೋಳಿಸಿಕೊಂಡು ತುಂಡುಗಂಬಳಿ
ಹೊದ್ದವರ
ನಂಬಲಾರೆ, ನೆಚ್ಚಲಾರೆ ಎನ್ನುತ್ತಾಳೆ.

ತನ್ನ ಮಾತುಗಳ ಮೂಲಕ ಈಕೆ 'ವಚನ ಸಮೂಹ ಸನ್ನಿ'ಗೆ ಆಘಾತ ಎನಿಸುವಂತೆ ಪ್ರತಿಕ್ರಿಯಿಸಿದ್ದಾಳೆ. 'ಸ್ತ್ರೀ' ಕುರಿತ ಅವಳ ನಿಲುವೂ ಅಷ್ಟೇ.

ನೀನು ಪತಿಯಾಗಿ ನಾನು ಸತಿಯಾದ ಕಾರಣ
ನಿನ್ನ ನೆನೆವವಳಲ್ಲ, ನಿನ್ನ ಪೂಜಿಸುವುದಿಲ್ಲ.
ನಿನಗೆ ನನಗೆ ಸಂದಿಲ್ಲದ ಸಮರಸವಯ್ಯ.

ಈಕೆ 'ಹಠ'ವುಳ್ಳ ವಚನಕಾರ್ತಿ, ಛಲಗಾತಿ, ನಿಸ್ಸಂಕೋಚಿ. ವಚನ ಚಳುವಳಿಯ ಸಂದರ್ಭದ ಎಲ್ಲ 'ಒಪ್ಪಿತ ನಿಲುವು'ಗಳನ್ನು ಈಕೆ ಪ್ರಶ್ನಿಸಿದ್ದಾಳೆ. ಹಾಗಾಗಿ ವಿರಕ್ತರು, ಭಕ್ತರು, ಜ್ಞಾನಿಗಳು, ಅನುಭಾವಿಗಳು, ಲಿಂಗಧಾರಿಗಳು ಈಕೆಯ ಕಟುಟೀಕೆಗೆ ಗುರಿಯಾಗಿದ್ದಾರೆ. ಬಾಹ್ಯ ಆಚಾರಗಳನ್ನು ಜಾಲಾಡಿ, ಶೋಧಿಸಿ ಒರೆಗೆ ಹಚ್ಚುವ ಧೋರಣೆ ಇವಳದು.

'ಅಕ್ಕ' ಪುರುಷ – ಸ್ತ್ರೀ ಸಂವೇದನೆಗಳನ್ನು ತನ್ನ ವಚನಗಳಲ್ಲಿ ನಿರ್ವಚಿಸಿದ್ದಾಳೆ. ಆದರೆ ರಾಯಮ್ಮನ ದೃಷ್ಟಿಕೋನ 'ತಾರ್ಕಿಕ ವಿಮರ್ಶೆ'ಯದು. ಹರಿತ ಭಾಷೆ ಇವಳ ವಚನಗಳ ವಿಶೇಷ. ಆಲೋಚನೆಯಲ್ಲಿ ಪುರುಷರಿಗಿಂತ ಭಿನ್ನವಾಗಿ, ಪರ್ಯಾಯವಾಗಿ ನಿಲ್ಲುತ್ತಾಳೆ. ತನ್ನ ಚಿಂತನೆಗಳ ಮೂಲಕ ಧರ್ಮ, ಲಿಂಗ, ಆಚಾರ, ವ್ಯವಸ್ಥೆಯನ್ನು ಮೀರಿ ನಿಂತಿದ್ದಾಳೆ. ಇವಳ ವೈಚಾರಿಕತೆ ಪಾರದರ್ಶಕ, ನಿಷ್ಠುರ, ನಿರ್ದಿಷ್ಟ ಮತ್ತು ಖಚಿತ ನಿಲುವುಗಳಿಂದ ಕೂಡಿದ್ದು, ಹಾಗಾಗಿಯೇ ಈಕೆಯದೂ ಅಲ್ಲಮನ ವಚನಗಳಿಗೆ ಪ್ರತಿ[illegible]

**ನೀಲಾಂಬಿಕೆ**

ಈಕೆ ಬಸವನ ಸತಿ. ಅವನ ಎಲ್ಲ ಕ್ರಿಯೆಗಳಿಗೆ ಬೆಂಬಲವಿತ್ತವಳು. ಗಂಡು-ಹೆಣ್ಣು, ಪತಿ-ಪತ್ನಿಯರ ಸಂಬಂಧಗಳ ಹೊಸ ವ್ಯಾಖ್ಯಾನದ ಸಾಧ್ಯತೆ ಇವಳ ವಚನಗಳ ವಿಶೇಷ. ಜೊತೆಗೆ ಸ್ತ್ರೀ ಮನೋಭಾವದ ಜಾಗೃತಿ, ಅಸ್ತಿತ್ವದ ಸಮರ್ಥನೆ ಹಾಗೂ ಕೀಳರಿಮೆಯಿಲ್ಲದ ಸ್ಥಿತಿ ಈಕೆಯ ನಿಲುವನ್ನು ಸ್ಪಷ್ಟಗೊಳಿಸಿವೆ.

*ಮಡದಿ ಎನಲಾಗದು ಬಸವಂಗೆ ಎನ್ನನು*
*ಪುರುಷನೆನಲಾಗದು ಬಸವನ ಎನಗೆ*
*ಉಭಯಕುಲವ ಹರಿದು ಬಸವಗೆ ಶಿಶುವಾದೆ*
*ಬಸವನೆನ್ನ ಶಿಶುವಾದ......................*
*ಬಸವನೊಳಗಾನಡಗಿದೆ.*

ವೈದಿಕ ಮತ್ತು ಸಾಂಪ್ರದಾಯಿಕ ಆಚರಣೆಯ ಕೌಟುಂಬಿಕ 'ಸ್ಥಿತಿ'ಗಳ ಪಲ್ಲಟಕ್ಕೆ ಈಕೆ ಯತ್ನಿಸಿದ್ದಾಳೆ. 'ನಿಗದಿ'ಯಾಗಿದ್ದ ಗಂಡು ಹೆಣ್ಣಿನ ಸ್ಥಾನ, ವರ್ತನೆ, ಸಂಬಂಧಗಳನ್ನು ಈಕೆ ಪುನರ್‌ವ್ಯಾಖ್ಯಾನಿಸಿದ್ದಾಳೆ. ಅಂದಿನ ಹೆಣ್ಣಿನ ಸ್ಥಿತಿಯನ್ನೂ ಈಕೆ ಬಿಂಬಿಸಿದ್ದಾಳೆ; ಅದಕ್ಕೆ ಪರ್ಯಾಯವನ್ನೂ ತಿಳಿಸಿದ್ದಾಳೆ.

*ಏಕೆನ್ನ ಹುಟ್ಟಿಸಿದೆ ಹೆಣ್ಣು ಜನ್ಮದಲ್ಲಿ*
*ಪುಣ್ಯವಿಲ್ಲದ ಪಾಪಿಯ*
*ನಾನು ಇಹ ಪರಕ್ಕೆ ದೂರಳು.*

*ಎನ್ನ ನಾಮ ಹೆಣ್ಣು ನಾಮ ಅಲ್ಲವಯ್ಯ*
*ನಾನು ಸಿರಿಯಿದ್ದ ವಸ್ತುವಿನ ವಧುವಾದ ಕಾರಣ*
*ಸಂಗಯ್ಯನಲ್ಲಿ ಬಸವನ ವಧುವಾದ ಕಾರಣ*
*ಎನಗೆ ಹೆಣ್ಣು ನಾಮವಿಲ್ಲವಯ್ಯ.*

ಹೀಗೆ ಬಸವನ ಮೂಲಕ ಸಂಗನನ್ನು ಸೇರುವ ತನ್ನ ನಿಲುವನ್ನು ಪ್ರಕಟಿಸಿ ಸ್ವಾಯತ್ತತೆ ಮೆರೆದಿದ್ದಾಳೆ. ಮಡಿ, ಮುಟ್ಟು, ಮೈಲಿಗೆ ಮೊದಲಾದ ವಿಚಾರಗಳನ್ನು ದೂರವಿಟ್ಟು ತಾತ್ವಿಕ ನೆಲೆಯ ಮೂಲಕ 'ಹೆಣ್ಣಿನ' ಅಸ್ತಿತ್ವವನ್ನು ಪ್ರಕಟಿಸಿದ್ದಾಳೆ.

**ಮುಕ್ತಾಯಕ್ಕ**

ಈಕೆಯದು ವೈಚಾರಿಕ ಸಂವಾದ; ಹಾಗಾಗಿ ಇವಳ ವಚನಗಳಲ್ಲಿ ಬೌದ್ಧಿಕ ವಿಚಾರ ಅಧಿಕ. ಅಲ್ಲಮನ ಜೊತೆಗಿನ ಸಂಭಾಷಣೆಯಲ್ಲಿ ಈಕೆಯ ವ್ಯಕ್ತಿತ್ವ ಮತ್ತು ವೈಚಾರಿಕತೆ ಸ್ಫೋಟಗೊಂಡಿದೆ. ಮಾತು, ಶಬ್ದದ ಹಂಗು ಮೀರುವ ಗುಣ ಇವಳ ವಚನಗಳ ವಿಶೇಷ.

*ನುಡಿಯ ಹಂಗಿನ್ನೂ ನಿಮಗೆ ಹಿಂಗದು.*
*ನಡೆಯನೆಂತು ಪರರಿಗೆ ಹೇಳುವಿರಿ ?*

ಅಜಗಣ್ಣನಂತಹ ಸಂಕೋಚದ ಸಾಧಕನ ಸೋದರಿ ಈಕೆ. ಇವಳ ತತ್ವ ಮತ್ತು ಅನುಭವಜ್ಞಾನ ಭಿನ್ನ. ಸಂರಚನೆ, ಅರ್ಥ, ವಿಚಾರಗಳಿಂದ ಈಕೆಯ ವಚನಗಳು ಅಲ್ಲಮನನ್ನು ನೆನಪಿಸುತ್ತವೆ.

**ಲಿಂಗಮ್ಮ**

ಈಕೆಯ 'ಎಚ್ಚರ'ದ ನಿಲುವು ಬೆರಗುಂಟು ಮಾಡುತ್ತದೆ. ಗಟ್ಟಿಬದುಕು ಮತ್ತು ದೃಢ ವ್ಯಕ್ತಿತ್ವ ಇವಳದು. ತನ್ನ ಸೂಕ್ಷ್ಮ ಪ್ರಜ್ಞೆ ಮತ್ತು ಗ್ರಹಿಕೆಯಲ್ಲಿನ ಎಚ್ಚರಗಳಿಂದಾಗಿ ಇವಳ ವಚನ ಉಳಿದ ಸ್ತ್ರೀವಚನಗಳಿಂದ 'ಭಿನ್ನ'ವೆನಿಸುತ್ತವೆ.

*ನರರ ಬೇಡೆನು, ಸುರರ ಹಾಡೆನು*
*ಕರಣಂಗಳ ಹರಿಯ ಬಿಡೆನು*
*ಕಾಮನ ಬಲೆಗೆ ಸಿಲ್ಕೆನು*


ನೀಲಾಂಬಿಕೆ

*ಮರವೆಗೊಳಗಾಗೆನು........*
*ಸಾಕಯ್ಯ, ಲೋಕದ ಹಂಗು ಹರಿಯಿತು*
*ತನುವಿನಾಸೆ ಬಿಟ್ಟಿತ್ತು, ಮನದ ಸಂಚಲ ನಿಂದಿತ್ತು.*

*ಮಾಣಿಕವ ಕಂಡವರು ತೋರುವರೆ ಅಯ್ಯ*
*ಮುತ್ತ ಕಂಡವರು ಅಪ್ಪಿಕೊಂಬರಲ್ಲದೆ ಬಿಚ್ಚಿತೋರುವರೆ ಅಯ್ಯ.*

ಈಕೆ ಷಟ್‌ಸ್ಥಳ, ಅಷ್ಟಾವರಣ, ಪಂಚಾಚಾರ ಇತ್ಯಾದಿಗಳ ಗೊಡವೆಗೆ ಹೋದಂತಿಲ್ಲ, ತನ್ನ ಹಾಡು-ಪಾಡು ತನ್ನದು ಎಂಬಂಥವಳು. ಇಹ-ಪರ, ಸ್ವರ್ಗ-ನರಕ ಈ ಭೇದವನ್ನು ತಿರಸ್ಕರಿಸಿದ್ದಾಳೆ. ಕೈಲಾಸ, ದೇವರು, ಸುರಲೋಕ ಈಕೆಗೆ ನಗಣ್ಯ. ಸರಳತೆ, ಸಹಜತೆ, ನಿರ್ಭಿಡೆ, ಸ್ವತಂತ್ರ ವ್ಯಕ್ತಿತ್ವ ಇವಳ ವಚನಗಳ ಓದಿನಿಂದ ಅರಿವಾಗುತ್ತದೆ. ಅರಿಷಡ್ವರ್ಗಗಳನ್ನು ಗೆಲ್ಲುವ, ಶರಣತ್ವ ಪಡೆವ ಬಗೆಯನ್ನು ಪುನರ್ರಚಿಸಿದ್ದಾಳೆ. ಹಾಗೆಯೇ ಬೋಧಿಸುವ/ ಉಪದೇಶಿಸುವವರಿಗೆ ಚಾಟಿಯೇಟಿನಂತಹ ಪ್ರತಿಕ್ರಿಯೆಯಿಂದ ಉತ್ತರಿಸಿದ್ದಾಳೆ. ಯೋಗ, ಧ್ಯಾನಗಳನ್ನು ತಿರಸ್ಕರಿಸಿದ್ದಾಳೆ.

*ಮನವ ಗೆದ್ದೆಹೆನೆಂದು ತನುವ ಕರಗಿಸಿ, ಕಾಯವ ಮರುಗಿಸಿ*
*ನಿದ್ರೆಯ ಕೆಡಿಸಿ, ವಿದ್ಯೆಯ ಕಲಿತಿಹೆನೆಂಬ ಬುದ್ಧಿಹೀನರಾ*
*ನಮ್ಮ ಶರಣರು ಮನವನೆಂತು ಗೆದ್ದಹರೆಂದರೆ*
*ಕಾಮಕ್ರೋಧವ ನೀಗಿ, ಲೋಭಮೋಹವ ಬಿಟ್ಟು*
*ಆಸೆ ದೋಷವ ಅಳಿದರು..................*

*ತನ್ನ ತಾನರಿಯದೆ ಅನ್ಯರಿಗೆ ಬೋಧಿಸುವ*
*ಅಣ್ಣಗಳಿರಾ, ನೀವು ಕೇಳಿರೋ*
*ಅವರ ಬಾಳುವೆ ಕುರುಡ ಕನ್ನಡಿ ಹಿಡಿದಂತೆ.*

ತನ್ನ ಕಾಲಕ್ಕೆ ಈಕೆ ನಿಜ ಶರಣರ ವ್ಯಕ್ತಿತ್ವ ಕಂಡರಸಿದ್ದಾಳೆ. ಆದರೆ 'ಶರಣ' ಎಂದು ಹೇಳಿಕೊಂಡು ಅಂದಿನಿಂದ – ಇಂದಿನವರೆಗೆ ಸಾಗಿರುವ ಪರಂಪರೆಯನ್ನೇನಾದರೂ ಆಕೆ ಕಂಡಿದ್ದಲ್ಲಿ?

**ಅಕ್ಕಮ್ಮ**

ವ್ರತಾಚರಣೆಯಲ್ಲಿನ ದ್ವಂದ್ವಗಳನ್ನು ಖಂಡಿಸುವ ಈಕೆ 'ಅರಿವೆ' ಮುಖ್ಯ ಎನ್ನುತ್ತಾಳೆ.

**ಕಾಳವ್ವೆ**

ಈಕೆ ವೈದಿಕರು, ಅವರ ಧರ್ಮ, ಅವರ ಆಚರಣೆಗಳನ್ನು ಕಟುವಾಗಿ ಟೀಕಿಸಿದ್ದಾಳೆ. ''ಸತ್ಯ ಶುದ್ಧವಿಲ್ಲದುದು ಕಾಯಕವಲ್ಲ'' ಎನ್ನುತ್ತಾಳೆ. ''ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ ?'' ಎಂದು ಕೇಳುತ್ತಾಳೆ.

**ರಾಣಿ ಮಹಾದೇವಿ**

ತನ್ನ ಪತಿಯೊಂದಿಗೆ ನಡೆಸುವ ಆಧ್ಯಾತ್ಮಿಕ ಸಂವಾದದಲ್ಲಿ ಅಪೂರ್ವ ಜ್ಞಾನ, ವಿವೇಕವನ್ನು ಈಕೆ ಪ್ರಕಟಿಸಿದ್ದಾಳೆ.

**ಸತ್ಯಕ್ಕ**

ಕಾಯಕ ಪ್ರೀತಿ, ಅನ್ಯರ ವಸ್ತು ಸ್ವೀಕರಣೆಯ ನಿರಾಕರಣೆ, ಸದ್ಯದ ಬದುಕಿನ ಬದ್ಧತೆ, ಇಟ್ಟಂತೆ ಇರುವೆ ಎಂಬ ಛಲ, ಆತ್ಮವಿಶ್ವಾಸ, ಪ್ರಾಮಾಣಿಕತೆ, ಅರಿವಿನ ಹಿರಿತನ, ಧೈರ್ಯಗಳನ್ನೊಳಗೊಂಡ ವೈಚಾರಿಕ ನೆಲೆ ಇವಳ ವಚನಗಳ ವಿಶೇಷವಾಗಿದೆ.

ಒಟ್ಟಾರೆ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ವಚನ ಸಂದರ್ಭ' ಒಂದು ವಿಶಿಷ್ಟ ಘಟ್ಟ ಎಂಬುದು ಒಪ್ಪಿತ ಸಂಗತಿ. ಆ ವಿಶಿಷ್ಟತೆಗಿರುವ ಆಯಾಮ 'ವೈಚಾರಿಕತೆ' ಎನ್ನಬಹುದು. ಆಧುನಿಕ ಕಾಲ ಸಂದರ್ಭದ ಮಾನದಂಡಗಳ ಅನ್ವಯದ ಬದಲು ಸಾಮಾಜಿಕ, ಸಾಂಸ್ಕೃತಿಕ ಮತ್ತು ಚಾರಿತ್ರಿಕ ಚೌಕಟ್ಟಿನಲ್ಲಿ ವಿಶ್ಲೇಷಣೆ ಕೈಗೊಂಡಲ್ಲಿ ಈ ವೈಚಾರಿಕತೆಯ ತಾತ್ವಿಕತೆ, ನೆಲೆ ಮತ್ತು ಅಗತ್ಯಗಳು ನಿಲುಕುತ್ತವೆ.

'ಬಹುಮುಖಿ' ಸಮಾಜದ ಮೊದಲ ಘಟ್ಟದ 'ಬಹುದನಿ' ಈ ಚಳವಳಿ. ಪೂರ್ವ ಸೂರಿಗಳಿಗೆ ಉತ್ತರಿಸುತ್ತಲೇ, ಒಪ್ಪಿಕೊಳ್ಳುತ್ತಲೇ, ಅವುಗಳನ್ನು ನಿರಾಕರಿಸುವ ಪರ್ಯಾಯ ಜೀವನ ಕ್ರಮ ರೂಪಿಸಿದ್ದು ಈ ಚಳವಳಿಯ ಹೆಗ್ಗಳಿಕೆ. ಅಂತಹ ಪ್ರಯತ್ನ ಸಾಧ್ಯವಾದ ಮಟ್ಟಿಗೆ ಸಮಾನತೆ, ಸೋದರತೆ, ಸಂವಾದ ಮತ್ತು ಆಯ್ಕೆಗಳನ್ನು ಒಳಗೊಂಡಿತ್ತು, ಪ್ರಶ್ನಿಸುವ, ಉತ್ತರಿಸುವ, ಸಮಾಧಾನ ನೀಡುವ, ಪರ್ಯಾಯ ಚಿಂತನೆಗಳನ್ನು ಕಟ್ಟಿಕೊಟ್ಟಂತಹ 'ಆಲೋಚನಾ' ಕ್ರಮದ ಹಿಂದೆ ಅಲ್ಲಮ, ಬಸವ, ಸಿದ್ಧರಾಮ ಮೊದಲಾದವರ ಜೊತೆ ಅಕ್ಕ, ರಾಯಮ್ಮ ಮುಕ್ತಾಯಕ್ಕನಂತಹ ವಚನಕಾರ್ತಿಯರು ಇದ್ದರು; ಅವರು ತಮಗನಿಸಿದ 'ಮೌಲ್ಯ'ಗಳನ್ನು ಪ್ರತಿಪಾದಿಸಿದರು ಎಂಬುದೇ ವಚನ ಚಳವಳಿ, ವಚನ, ವಚನಕಾರರು ಹೊಂದಿರಬಹುದಾದ 'ವೈಚಾರಿಕತೆ'ಯನ್ನು ರೂಪಿಸಿದೆ ಎನ್ನಬಹುದು; ಅದು ಈ ಬಗೆಯದು :

*ನೀರಿಲ್ಲದಲ್ಲಿ ಜಳಕವ ಮಾಡಿ*
*ತರುವಿಲ್ಲದೆ ಪುಷ್ಪವನೆತ್ತಿ*
*ಕರವಿಲ್ಲದೆ ಪೂಜಿಸಬಲ್ಲಡೆ*
*ಜಂಗಮವೆಂಬೆ.........*
*ಆನು ತ್ರಿಕರಣಶುದ್ಧವಾಗಿ.*

**ಡಾ|| ಎಸ್. ಪ್ರಸಾದಸ್ವಾಮಿ**
ಶ್ರೀ ವಿನಾಯಕ, ೩ನೇ ಕ್ರಾಸ್, ೩ನೇ ಮೈನ್, ಹೊಸ ಬಡಾವಣೆ,
ಕೆ. ಆರ್. ಪುರಂ, ಬೆಂಗಳೂರು – ೫೬೦೦೩೬

# ಇಂದಿನ ರಾಜಕಾರಣ ಮತ್ತು 'ಹಿಂದ್ ಸ್ವರಾಜ್'

(ಹೆಗ್ಗೋಡಿನಲ್ಲಿ ಇದೇ ಅಕ್ಟೋಬರ್ ೬ರಿಂದ ೧೧ರವರೆಗೆ ನಡೆದ 'ಮನೋಭೂಮಿಕೆಯಲ್ಲಿ ಸ್ವರಾಜ್ಯ' ವಿಷಯವಾಗಿ ನಡೆದ ಸಂಸ್ಕೃತಿ ಶಿಬಿರದಲ್ಲಿ ಮಂಡಿಸಿದ ವಿಚಾರಗಳ ವಿಸ್ತೃತ ರೂಪ)

**ಡಿ. ಎಸ್. ನಾಗಭೂಷಣ**

'ಹಿಂದ್ ಸ್ವರಾಜ್' ಒಂದು ಸಾಂದರ್ಭಿಕ ಕೃತಿ ಎಂದು ನಿಮಗೆಲ್ಲ ತಿಳಿದೇ ಇದೆ. ಇದು ಗಾಂಧೀಜಿಯ ಮೊದಲ ಕೃತಿಯೂ ಹೌದು ಎಂಬುದನ್ನೂ ನಾವು ಗಮನಿಸಬೇಕು. ಹಾಗಾಗಿ ಇದನ್ನು ಅವರ ಮುಂದಿನ ಕೃತಿ ಮತ್ತು ಕಾರ್ಯಕ್ರಮಗಳ ಹಿನ್ನೆಲೆಯಲ್ಲೇ ಅರ್ಥೈಸಿಕೊಳ್ಳಬೇಕು ಎಂಬುದೂ ನಮ್ಮ ಗಮನದಲ್ಲಿರಬೇಕು. ಮುಖ್ಯವಾಗಿ ಅವರ ಆತ್ಮಕತೆ, ರಚನಾತ್ಮಕ ಕಾರ್ಯಕ್ರಮ ಸೂಚಿ ಹಾಗೂ ಸ್ವಾತಂತ್ರ್ಯ ಘೋಷಣಾ ಪತ್ರ. ಆಗಿನ ಕಾಂಗ್ರೆಸ್‌ನ 'ಸಂವಿಧಾನಾತ್ಮಕ' ಮಾರ್ಗಗಳಿಂದ ಬೇಸತ್ತು, ಅದಕ್ಕೆ ಪ್ರತಿಯಾಗಿ ಹಿಂಸೆಯೂ ಸೇರಿದಂತೆ ತೀವ್ರವಾದಿ ಕಾರ್ಯಾಚರಣೆಗಳ ಮೂಲಕ ಸ್ವಾತಂತ್ರ್ಯ ಪಡೆಯಬೇಕೆಂಬ ಸಂಕಲ್ಪದಿಂದ ಲಂಡನ್‌ನಲ್ಲಿ ಒಟ್ಟುಗೂಡಿದ್ದ 'ಕ್ರಾಂತಿಕಾರಿ'ಗಳ ಗುಂಪೊಂದಕ್ಕೆ, ಅವರ ಮಾರ್ಗ ಏಕೆ ಮತ್ತು ಹೇಗೆ ನಿಷ್ಪ್ರಯೋಜಕ ಎಂಬುದನ್ನು ವಿವರಿಸಲು ಗಾಂಧಿ ೧೯೦೮ರಲ್ಲಿ ಬರೆದ ಪುಸ್ತಕವಿದು. ಆದರೆ ಅದು ಆನುಷಂಗಿಕವಾಗಿ ಪಶ್ಚಿಮದ ಆಧುನಿಕ ನಾಗರಿಕತೆಯನ್ನು ಕುರಿತ ಒಂದು ವ್ಯಾಪಕ ಹಾಗೂ ಆಳವಾದ ವಿಶ್ಲೇಷಣೆಯೂ ಆಗಿದೆ. ಇಂದು ಈ ಕೃತಿಯನ್ನು ನಮಗೆ ಪ್ರಸ್ತುತಗೊಳಿಸುತ್ತಿರುವುದೇ ಅದರ ಈ ಆನುಷಂಗಿಕತೆಯೇ ಆಗಿದೆ ಎಂಬುದು ಒಂದು ವಿಶೇಷ.

ಈ ಕೃತಿಯು ಇಂದಿನ ಪ್ರಸ್ತುತತೆ ಎಂದೆ. ಒಮ್ಮೆಗೇ ನೋಡಿದರೆ, ಯಂತ್ರ, ರೈಲು, ವಕೀಲಿಕೆ, ಆಸ್ಪತ್ರೆ ಇತ್ಯಾದಿಗಳನ್ನು ವಿರೋಧಿಸುವ ಈ ಕೃತಿಗೂ, ದೇಶವನ್ನು ಸುಭಿಕ್ಷವಾಗಿಡಲು ಪರಮಾಣು ರಿಯಾಕ್ಟರುಗಳ ವ್ಯಾಪಾರ ಒಪ್ಪಂದ ಅನಿವಾರ್ಯ ಎನ್ನುತ್ತಿರುವ ಇಂದಿನ ರಾಜಕಾರಣಕ್ಕೂ ಎಲ್ಲಿಗೆಲ್ಲಿಯ ಸಂಬಂಧ ಎಂದು ಆಶ್ಚರ್ಯವಾಗಬಹುದು. ಆದರೆ ಕಳೆದ ಹತ್ತು ಹದಿನೈದು ವರ್ಷಗಳಿಂದೀಚೆಗೆ ಜಗತ್ತಿನಾದ್ಯಂತ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಮತ್ತೆ ಮತ್ತೆ 'ಹಿಂದ್ ಸ್ವರಾಜ್' ಚರ್ಚೆ, ಅಧ್ಯಯನಗಳಿಗೆ ಒಳಗಾಗತೊಡಗಿರುವುದರ ಕಾರಣವಾದರೂ ಇದೇ – ಜಗತ್ತಿನಾದ್ಯಂತ ಅನಿವಾರ್ಯವೆಂಬಂತೆ ಬೆಳೆಯುತ್ತಿರುವ ಇಂತಹ ಅಭಿವೃದ್ಧಿ ರಾಜಕಾರಣದ ವಿವಿಧ ರೂಪಗಳೇ; ಪರಮಾಣು ರಿಯಾಕ್ಟರುಗಳ ಇಂಧನ ಮತ್ತು ವ್ಯಾಪಾರಗಳನ್ನು ಅಗತ್ಯ ಮಾಡಿರುವಂತಹ ಜಾಗತಿಕ ಅಭಿವೃದ್ಧಿಯ ರಾಜಕಾರಣ ನಮ್ಮನ್ನು – ಮಾನವ ಜನಾಂಗವನ್ನು – ಎತ್ತ ಕೊಂಡೊಯ್ಯುತ್ತಿದೆ ಎಂಬ ಬಗ್ಗೆ ಎದ್ದಿರುವ ಆತಂಕ-ಅನುಮಾನಗಳೇ.

ನಾನು ಇಲ್ಲಿ ನಮ್ಮ ರಾಜಕಾರಣದ ಸ್ವರೂಪವನ್ನು ನಿರೂಪಿಸಲು ಪರಮಾಣು ಒಪ್ಪಂದವನ್ನೇ ಏಕೆ ಉದಾಹರಣೆಯನ್ನಾಗಿ ತೆಗೆದುಕೊಂಡಿರುವೆ ಎಂದರೆ, ಇದು ಇತ್ತೀಚಿನ ರಾಷ್ಟ್ರೀಯ ಮತ್ತು ಜಾಗತಿಕ ರಾಜಕಾರಣದ ಮತ್ತು ಅವುಗಳ ನಡುವಣ ಸಂಬಂಧದ ಸಂಕೀರ್ಣ ಉದಾಹರಣೆಯಾಗಿದೆಯಷ್ಟೇ ಅಲ್ಲ; ಇದು, ಈ 'ಹಿಂದ್ ಸ್ವರಾಜ್'ನ್ನು ಅಸಂಬದ್ಧ ಮತ್ತು ಅವ್ಯವಹಾರಿಕ ಕೃತಿ ಎಂದು ಈ ದೇಶದ ಮೊದಲ ಪ್ರಧಾನಿ ನೆಹರೂ ಅವರಿಂದ ತಿರಸ್ಕೃತವಾದ ನಂತರದ ಅರವತ್ತು ವರ್ಷಗಳ ಈ ಸ್ವತಂತ್ರ ಭಾರತದ ರಾಜಕಾರಣದ ಶಿಖರಪ್ರಾಯ ಉದಾಹರಣೆಯಾಗಿದೆ ಮತ್ತು ಅದರ ಎಲ್ಲ ಆಶಯ ಮತ್ತು ಕಾರ್ಯಕ್ರಮಗಳನ್ನೂ ವಿಶದೀಕರಿಸುವಂತಿದೆ ಎಂಬ ಕಾರಣಕ್ಕೆ. ಇದೆಲ್ಲದಕ್ಕಿಂತ ಮುಖ್ಯವಾಗಿ ಇದರಲ್ಲಿ ಆಧುನಿಕ ನಾಗರಿಕತೆಯ ಪರಮ ಸಾಧನೆಯೆನಿಸಿರುವ ಪರಮಾಣು ಶಕ್ತಿಯೊಂದಿಗೆ ಸಾವಯವ ಸಂಬಂಧ ಹೊಂದಿರುವ ರಾಜಕಾರಣವೂ ಅಡಗಿದೆ ಎಂಬ ಕಾರಣಕ್ಕಾಗಿಯೂ.

ಈ ಒಪ್ಪಂದವನ್ನು ಒಮ್ಮೆ ಸುಮ್ಮನೆ ನೋಡಿ. ಈ ಒಪ್ಪಂದ ನಮ್ಮ ವಿದ್ಯುತ್ ಉತ್ಪಾದನೆಯನ್ನು ಇನ್ನು ಹತ್ತು-ಹನ್ನೆರಡು ವರ್ಷಗಳಲ್ಲಿ ಶೇಕಡಾ ಎರಡೂವರೆ ಅಥವಾ ಮೂರರಷ್ಟು ಹೆಚ್ಚಿಸುವುದೆಂದು ಹೇಳಲಾಗುತ್ತಿದೆ. ಆದರೆ ಇದರ ತಾಂತ್ರಿಕ ವಿವರಗಳನ್ನು ಗಮನಿಸಿದರೆ, ಇದು ನಿಜವಾಗಿಯೂ ಇಂಧನ ಒಪ್ಪಂದ ಮಾತ್ರವೋ ಅಥವಾ ತಾನು ಇಂದು ಮುಟ್ಟುತ್ತಿರುವ ಆರ್ಥಿಕ ದುಃಸ್ಥಿತಿಯಿಂದಾಗಿ ಜಾಗತಿಕ ರಾಜಕೀಯ ಮಹತ್ವ ಕಳೆದುಕೊಳ್ಳುವ ಭಯದಲ್ಲಿರುವ ಅಮೆರಿಕಾದ ಪುನರುತ್ಥಾನಕ್ಕಾಗಿ ಸಿದ್ಧಪಡಿಸಲಾಗಿರುವ ರಾಜಕೀಯ ಒಪ್ಪಂದವೋ ಎಂದು ಅನುಮಾನವಾಗುತ್ತದೆ. ಈ ಒಪ್ಪಂದದ ಪ್ರಕಾರ ತಕ್ಷಣಕ್ಕೆ ಅಮೆರಿಕಾದ ಕಂಪನಿಗಳು ೩೦ ದಶಲಕ್ಷ ಡಾಲರ್‌ಗಳಷ್ಟು ಬೆಲೆಯ ಪರಮಾಣು ರಿಯಾಕ್ಟರುಗಳನ್ನು ಭಾರತಕ್ಕೆ ಮಾರಲಿವೆಯಂತೆ. ನಂತರ ಫ್ರಾನ್ಸ್‌ನಿಂದಲೂ ಮತ್ತಷ್ಟು ಅಂತಹ ರಿಯಾಕ್ಟರುಗಳು ಖರೀದಿಯಾಗಿ ಬರಲಿವೆಯಂತೆ! ತದನಂತರ ನಾವೂ ಈ ಒಪ್ಪಂದದ ಪ್ರಕಾರ ಈ ರಿಯಾಕ್ಟರುಗಳ ತಂತ್ರಜ್ಞಾನ ಪಡೆದು ಶತ ಶತ ಕೋಟಿ ಡಾಲರ್‌ಗಳ ರಿಯಾಕ್ಟರ್ ಮಾರುಕಟ್ಟೆಯನ್ನು ಪ್ರವೇಶಿಸಿ ಸಾಕಷ್ಟು ಹಣ ಸಂಪಾದಿಸಬಹುದಂತೆ. ಹಾಗಾಗಿ ಇದು ಮೂಲತಃ ಪರಮಾಣು ರಿಯಾಕ್ಟರುಗಳ ಜಾಗತಿಕ ಮಾರುಕಟ್ಟೆಯ ವಿಸ್ತರಣೆಗಾಗಿ ಯೋಜಿಸಿ ಮಾಡಲಾದ ಅಂತಾರಾಷ್ಟ್ರೀಯ ವ್ಯಾಪಾರ ಒಪ್ಪಂದವೇ ಆಗಿದ್ದರೆ ಆಶ್ಚರ್ಯವಿಲ್ಲ. ಹಾಗಿದ್ದಲ್ಲಿ ಇದು, ಹೊಸ ಒಡೆತನದ ಕಾನೂನುಗಳು (ಪೇಟೆಂಟ್) ಮತ್ತು ಹೊಸ ಆಮದು-ರಫ್ತು ಕಾನೂನುಗಳ (ಗ್ಯಾಟ್ ಒಪ್ಪಂದ) ಮೂಲಕ ಜೀವ ಜಗತ್ತನ್ನು ವೈವಿಧ್ಯಮಯ ಸರಕಿನ ಒಂದು ಮಾರುಕಟ್ಟೆಯನ್ನಾಗಿ ಪರಿವರ್ತಿಸಿರುವ ಜಾಗತೀಕರಣ ಎಂಬ ಅರೆ-ಉದಾರವಾದಿ ಹೆಸರಿನಿಂದ ಕರೆಯಲ್ಪಡುವ ಅಂತಾರಾಷ್ಟ್ರೀಯ ರಾಜಕಾರಣದ ಇನ್ನೊಂದು ಹೆಜ್ಜೆಯಷ್ಟೆ. ೩೪ ವರ್ಷಗಳ ಹಿಂದೆ ನಾವು ಅಣುಸ್ಫೋಟ ಮಾಡಿದಾಗ ಅಮೆರಿಕಾ ನಮ್ಮ ಮೇಲೆ ಜಾಗತಿಕ ಬಹಿಷ್ಕಾರ ಹಾಕಲು ರೂಪಿಸಿದ ಕಾನೂನು ಮತ್ತು ಸಂಸ್ಥೆಗಳನ್ನೇ ಇಂದು ಅದೇ ದೇಶ ಈ ಒಪ್ಪಂದದ ಮೂಲಕ, ಆ ಬಹಿಷ್ಕಾರವನ್ನು ತೆಗೆಯಲು ಬಳಸುತ್ತಿರುವುದರ ಮರ್ಮವಾದರೂ ಏನು? ನಾವು ಒಪ್ಪಂದಕ್ಕೆ ಸಹಿ ಹಾಕುವ ಮುನ್ನ ಈ ಪ್ರಶ್ನೆಯ

ನಂಬಿಕೆಯ ಬದುಕಿನಲ್ಲಿ ಗಾಂಧಿಯವರ ಅನುಭವಕ್ಕೆ ಬಂದದ್ದು, ಮನುಷ್ಯ ಹುಟ್ಟಿನಿಂದ ಸ್ವತಂತ್ರನು ಹೇಗೋ, ಅಂತರವಲಂಬಿಯೂ ಹೌದು ಎಂಬ ಸತ್ಯ. ಎರಡು ಸ್ಥಿತಿಗಳೂ ಒಂದರೊಳಗೊಂದು ಹಾಸುಹೊಕ್ಕಾಗಿರುವಂತಹವು. ಮನುಷ್ಯ ದೇಹಿಯಾಗಿ ಪ್ರತ್ಯೇಕತೆಯ ಸ್ವಾತಂತ್ರ್ಯವನ್ನು ಅನುಭವಿಸುವ ತುಡಿತ ಹೊಂದಿದ್ದಾನೆ, ನಿಜ. ಆದರೆ ಆತ ಒಂಟಿಯಾಗಿ ಹುಟ್ಟಿಲ್ಲವಾದ್ದರಿಂದ ಅವನು ನೈಸರ್ಗಿಕವಾಗಿ ಸಂಘಜೀವಿಯೂ ಆಗಿದ್ದಾನೆ. ಹಾಗಾಗಿ ಮೊದಲು ಅವನು ತನ್ನ ಈ ಸ್ವಾತಂತ್ರ್ಯವನ್ನು ಅನುಭವಿಸಲು ಸಂಘಜೀವತ್ವದ ಅಂದರೆ ಅಂತರವಲಂಬನೆಯು ಒತ್ತಾಯಿಸುವ ಕರ್ತವ್ಯಗಳನ್ನು ಪಾಲಿಸಬೇಕಾಗಿದೆ! ಇದು ಮಾತ್ರ ಮತ್ತು ಇದೇ ನಮ್ಮನ್ನು ನಾವು ಆಳಿಕೊಳ್ಳುವ ನೈಸರ್ಗಿಕ ರೀತಿ ಮತ್ತು ನೀತಿ ಮತ್ತು ಬದುಕಿನ ಧರ್ಮ ಎಂದು ಗಾಂಧಿ ಭಾವಿಸಿದ್ದರು.

ಬಗ್ಗೆ ಯೋಚಿಸದಂತೆ ನಮ್ಮನ್ನು ವಿವಶಗೊಳಿಸಿರುವ ಶಕ್ತಿಯಾದರೂ ಯಾವುದು ?

ಈ ಒಪ್ಪಂದ ನಮ್ಮ ಶಾಂತಿಯುತ ಪರಮಾಣು ಕಾರ್ಯಕ್ರಮಕ್ಕೆ, ಬಡತನ ನಿರ್ಮೂಲನ ಮಾಡುವ ಅಭಿವೃದ್ಧಿ ಚಟುವಟಿಕೆಗಳಿಗೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ನಾವು ಜಾಗತಿಕ ಶಕ್ತಿಯಾಗಿ ಮೂಡಲು ಸಹಾಯ ಮಾಡುವುದೆಂದು ಪ್ರಧಾನಿ ಹೇಳುತ್ತಿದ್ದಾರೆ. ಆದರೆ ಈ ಒಪ್ಪಂದಕ್ಕೆ ಅಮೆರಿಕಾದ ಸೆನೆಟ್ ಅಂತಿಮ ಅನುಮೋದನೆ ನೀಡುವವರೆಗೆ ಹಂತಾನುಹಂತವಾಗಿ ಹೊರಬೀಳಲಾರಂಭಿಸಿರುವ ಒಪ್ಪಂದದ ಒಳವಿವರಗಳು, ನಮ್ಮ ಪ್ರಧಾನಿ ಈ ಒಪ್ಪಂದದ ಬಗ್ಗೆ ಸಂಸತ್ತಿನಲ್ಲಿ ಮತ್ತು ಹೊರಗೆ ದೇಶಕ್ಕೆ ನೀಡಿದ ಮಾಹಿತಿ ಮತ್ತು ಆಶ್ವಾಸನೆಗಳನ್ನು ಒಂದೊಂದಾಗಿ ಹುಸಿಗೊಳಿಸಿವೆ. ಒಪ್ಪಂದವಿರಲಿ, ಈ ಒಪ್ಪಂದಕ್ಕೆ ಸಹಿ ಹಾಕುವ ಇಡೀ ಪ್ರಕ್ರಿಯೆಯೇ ನಮ್ಮ ಸಂಸದೀಯ ಪ್ರಜಾಪ್ರಭುತ್ವದ ವಿಶ್ವಾಸಾರ್ಹತೆಯನ್ನು ಹಾಳುಗೆಡಹಿದೆ. ಗಾಂಧಿ 'ಹಿಂದ್ ಸ್ವರಾಜ್'ನಲ್ಲಿ ನಾವೀಗ ಅನುಸರಿಸುತ್ತಿರುವ ಬ್ರಿಟಿಷ್ ಸಂಸದೀಯ ಪದ್ಧತಿಯನ್ನು, ಅದು ಸತ್ಯಕ್ಕೆ ಬದಲಾಗಿ ಆಮಿಷಗಳಿಂದ ಬದಲಾಗಬಲ್ಲ ಜನ ಪ್ರತಿನಿಧಿಗಳ ಮತವನ್ನು ನಂಬಿ ನಡೆಯುವ ಆಡಳಿತವೆಂದು, ಸೂಳೆಗಾರಿಕೆಗೆ ಹೋಲಿಸಿದ್ದರು. ಗಾಂಧಿ ನಂತರದ ದಿನಗಳಲ್ಲಿ ಈ ಕೃತಿಯಲ್ಲಿ ತಾವು ಏನನ್ನಾದರೂ ಬದಲಿಸುವುದಿದ್ದರೆ, ಈ ಅಸಭ್ಯವೆನಿಸುವ ಶಬ್ದವನ್ನು ಮಾತ್ರ ಬದಲಿಸುವುದಾಗಿ ಹೇಳಿದ್ದರು. ಆದರೆ ಮೊನ್ನೆ ಪರಮಾಣು ಒಪ್ಪಂದದ ವಿಷಯವಾಗಿ ಸಂಸತ್ತಿನಲ್ಲಿ ನಡೆದ ಮತದಾನದ ಸಂದರ್ಭದಲ್ಲಿ ಪ್ರಕಟವಾದ 'ಮತಕ್ಕಾಗಿ ನಗದು' ಹಗರಣ, ಗಾಂಧಿಯವರ ಈ ವರ್ಣನೆಯನ್ನು ಸಮರ್ಥಿಸುವಂತೆಯೇ ಇದ್ದು, ಈ ಕೃತಿಯ ಮಹತ್ವವನ್ನು ಹೆಚ್ಚಿಸಿದೆಯೆಂದೇ ಹೇಳಬೇಕು !

ಅಮೆರಿಕಾ ತನ್ನ ನ್ಯಾಟೋ ಸೇನಾ ಮೈತ್ರಿಕೂಟವನ್ನು ರಷ್ಯಾ ಮತ್ತು ಚೀನಾ ಗಡಿಗಳಲ್ಲಿ ಖಂಡಾಂತರ ಕ್ಷಿಪಣಿಗಳನ್ನು ಸ್ಥಾಪಿಸುವ ಮೂಲಕ 'ಜಾಗತಿಕ ಜನತಾ ವಿಮೋಚನೆ' ಕಾರ್ಯಕ್ರಮವನ್ನಾಗಿ (ಇರಾಕ್ ಮೋಚನೆಯಂತೆ!) ಪರಿವರ್ತಿಸುತ್ತಿರುವ ಜಾಗತಿಕ ರಾಜಕೀಯ ಸಂದರ್ಭವಿದು. ಇದನ್ನರಿತೋ ಅರಿಯದೆಯೋ, ಈ ಒಪ್ಪಂದದ ಮೂಲಕ ನಾವು ಇಂಧನ ಸ್ವಾವಲಂಬನೆ ಸಾಧಿಸಿಕೊಳ್ಳಲು ಹೋಗಿ ರಾಜಕೀಯ ಸ್ವಾಯತ್ತತೆಯನ್ನು ಕಳೆದುಕೊಳ್ಳುವ ಹಾದಿಯಲ್ಲಿದ್ದೇವೆಯೇ ಎಂಬ ಆತಂಕ ಕೆಲವರಲ್ಲಿ ಉಂಟಾಗಿದೆ. ಇಲ್ಲಿ ನಾನು ಭಾರತದ ಅಥವಾ ಅಮೆರಿಕಾದ ಯಾವುದೇ ನಿರ್ದಿಷ್ಟ ರಾಜಕೀಯ ಪಕ್ಷದ ರಾಜಕಾರಣದ ಬಗ್ಗೆ ಮಾತನಾಡುತ್ತಿಲ್ಲ. ಈ ಎಲ್ಲ ಪಕ್ಷಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿರುವುದು ಒಪ್ಪಂದದ ಮೂಲ ಉದ್ದೇಶದ ಬಗೆಗಲ್ಲ, ಅದರ ಕೆಲವು ವಿವರಗಳ ಬಗ್ಗೆ ಅಷ್ಟೆ. ಅಲ್ಲದೆ, ಅಮೆರಿಕಾವೂ ಸೇರಿದಂತೆ ಬಹುಪಾಲು ಎಲ್ಲ ಮುಂದುವರಿದ ದೇಶಗಳು ಪರಮಾಣು ವಿದ್ಯುತ್ ಸ್ಥಾವರಗಳ ಅಂತರ್ಗತ ಅಪಾಯಗಳ ಅನುಭವದ ಹಿನ್ನೆಲೆಯಲ್ಲಿ ಅವುಗಳ ಸ್ಥಾಪನೆಯನ್ನು ನಿಲ್ಲಿಸುತ್ತಿವೆ ಮತ್ತು ಇರುವ ಸ್ಥಾವರಗಳನ್ನು ಮುಚ್ಚುತ್ತಾ ಇವೆ. ಇಂತಹ ಪರಿಸ್ಥಿತಿಯಲ್ಲಿ ಭಾರತದಂತಹ ಅಭಿವೃದ್ಧಿಶೀಲ ದೇಶಗಳಿಗೆ ಸ್ವಚ್ಛ ಇಂಧನದ ಹೆಸರಿನಲ್ಲಿ ಪರಮಾಣು ವಿದ್ಯುತ್ತನ್ನು ಏಕೆ ಶಿಫಾರ್ಸು ಮಾಡಲಾಗುತ್ತಿದೆ ಎಂಬುದನ್ನೂ ಯೋಚಿಸಲಾಗದಷ್ಟು ನಮಗೆ ಮಂಕು ಕವಿಸಿರುವ ಅಂಶವಾದರೂ ಯಾವುದು ? ಇದು ಅಭಿವೃದ್ಧಿಯ ಹಪಾಹಪಿ !

ಮೊದಲೇ ಹೇಳಿದ ಹಾಗೆ ಈ ಒಪ್ಪಂದದ ಮೂಲ ಉದ್ದೇಶ: ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ದೇಶ ಸಾಧಿಸಿರುವ ಎರಡಂಕಿ ದರದ ಪ್ರಗತಿಯನ್ನು ಉಳಿಸಿಕೊಂಡು

## ತೂರಿ ಬಂದ ಗಾಳಿ



ಮಲಗುವ ಮುನ್ನ
ಹಾಕಿದ ಬಾಗಿಲು
ತೆರೆಯದಿರಲೆಂದು
ಚಿತ್ತಾರದ ಕೌದಿಯನು
ಸುತ್ತಿಕೊಂಡು
ಬೀಳುವೆನು.

ಕಿಟಕಿ-ಬಾಗಿಲುಗಳ
ಸಂದುಗಳಿಂದ
ತೂರಿ ಬಂದ ಗಾಳಿ...
ನಗುವ ಚಂದ್ರ-ನಕ್ಷತ್ರ
ಹೊಳೆದೇ ಹೊಳೆಯುವರು
ಮುಚ್ಚಿದ ಕಣ್ರೆಪ್ಪೆಗಳ
ಒಳಗೂಡ

ಗೋಡೆ ಮೇಲಿನ ಹಲ್ಲಿ
ಲೊಚಗುಡುವುದು
ನಿತ್ಯ ಅಲ್ಲಿ...
ಗಾಢ ಮೌನವನು
ಸೀಳಿ ದೂರದಲಿ
ಬೊಗಳುತಿಹುದು ನಾಯಿ !

ಮುಖವಾಡಗಳ ನವಿಲುಕೋಲ
ಫಳಫಳಿಸುವ ಮಳೆಬಿಲ್ಲು
ನನ್ನೊಳಗಿನ ಅರೆ ಎಚ್ಚರಕೆ
ಕತ್ತಲೆಯೇ ಉತ್ತರವಾಗಿ
ಮುಚ್ಚಿದ ರೆಪ್ಪೆಗಳಲಿ
ಕರಗಿತು ಬೆಳದಿಂಗಳು.

ಮುಂಜಾನೆ ಸೂರ್ಯನೈತರಲು
ಓಡಿದೆನು ಬೆಳಕನಪ್ಪಿ
ಸುತ್ತಿಸುತ್ತಿ ಮುಖ
ಸುಟ್ಟುಕೊಂಡ ಸೂರ್ಯಕಾಂತಿ !
ಅರಿವಿನ ಜಾಗಟೆ ಹಿಡಿದು
ಎದುರು ಬಂದಳು
ಬಾಗಿಲ ದಾಟಿ

**ಅನಸೂಯ ಕಾಂಬಳೆ**
ಸರಕಾರಿ ಪ್ರಥಮ ದರ್ಜೆ ಕಾಲೇಜು, ಮುಧೋಳ
ಬಾಗಲಕೋಟೆ ಜಿಲ್ಲೆ- ೫೮೭೩೧೩

ಹೋಗುವುದು. ಆದರೆ ಈ ದಿಢೀರ್ ಎರಡಂಕಿ ಪ್ರಗತಿಯ ಹಿಂದಿನ ರಾಜಕೀಯ-ಆರ್ಥಿಕ ತಾತ್ವಿಕತೆ, ಅದರ ಪ್ರತಿಪಾದಕ ದೇಶವಾದ ಅಮೆರಿಕಾದಲ್ಲೇ ಈಗ ತನ್ನ ವಿಶ್ವಾಸಾರ್ಹತೆಯನ್ನು ಕಳೆದುಕೊಳ್ಳುತ್ತಿದೆ. ಅಲ್ಲಿನ ಮುಕ್ತ ಮಾರುಕಟ್ಟೆ ಮತ್ತು ಕಾರ್ಪೊರೇಟ್ ಬಂಡವಾಳಶಾಹಿ ಆಧಾರಿತ ಆರ್ಥಿಕತೆ ನಿರ್ಮಿಸಿದ್ದ ದೊಡ್ಡ ದೊಡ್ಡ ಖಾಸಗಿ ಹಣಕಾಸು ಸಂಸ್ಥೆಗಳು, ಬ್ಯಾಂಕುಗಳು ಮುಳುಗಿಹೋಗುತ್ತಿವೆ. ಅವುಗಳ ರಕ್ಷಣೆಗಾಗಿ ಭಾರಿ ಪ್ರಮಾಣದಲ್ಲಿ ಸರ್ಕಾರದ ಅಂದರೆ ಜನರ ಹಣವನ್ನು ಹೂಡಬೇಕಾದ ಪರಿಸ್ಥಿತಿ ಅಲ್ಲಿ ಉಂಟಾಗಿದೆ! ಅಲ್ಲಿನ ಆರ್ಥಿಕ ಆಡಳಿತಗಾರರು ಈಗ ಕಾರ್ಪೊರೇಟ್ ಆಸ್ತಿಗಳ ರಾಷ್ಟ್ರೀಕರಣದ ಅಗತ್ಯವನ್ನು ಒತ್ತಿಹೇಳತೊಡಗಿದ್ದಾರೆ. ಇತ್ತೀಚಿನ ನೊಬೆಲ್ ಪ್ರಶಸ್ತಿ ಪುರಸ್ಕೃತ ಅರ್ಥಶಾಸ್ತ್ರಜ್ಞ ಸ್ಟಿಗ್ಲಿಟ್ಸ್ ಅಮೆರಿಕಾ ಎಡಪಂಥೀಯ ರಾಜಕಾರಣದಿಂದ ಒಂದೆರಡು ಪಾಠಗಳನ್ನು ಕಲಿಯುವ ಕಾಲವೀಗ ಬಂದಿದೆ ಎನ್ನತೊಡಗಿದ್ದಾರೆ! ಅಂದರೆ ಸರಕು ಅರ್ಥಶಾಸ್ತ್ರ ತನ್ನ ಮತ್ತೊಂದು ಅವಸಾನಕ್ಕೆ ಬಂದಿದೆ. ಸರಕು ಉತ್ಪಾದನೆ ಮತ್ತು ಲಾಭ ಮಾತ್ರವಲ್ಲ, ಮಾನವ ಕಲ್ಯಾಣವನ್ನೂ ತನ್ನ ಯಶಸ್ಸಿನ ಸಂಕೇತ ಮಾಡಿಕೊಳ್ಳುವ ಮಾನವ ಅರ್ಥಶಾಸ್ತ್ರ ಇಂದು ಆರಂಭವಾಗಬೇಕಿದೆ ಎಂದೇ ಇದರ ಅರ್ಥ.

ಆದರೆ ಭಾರತದಲ್ಲಿ ಏನಾಗುತ್ತಿದೆ ? ಎಡಪಂಥೀಯ ರಾಜಕಾರಣದ ಧೀಮಂತರೆನಿಸಿದ ಬಂಗಾಳದ ಕಮ್ಯುನಿಸ್ಟರೇ ವಿದೇಶಿ ಮತ್ತು ಖಾಸಗಿ ಬಂಡವಾಳವಿಲ್ಲದೆ ಅಭಿವೃದ್ಧಿ ಸಾಧ್ಯವಿಲ್ಲ ಎನ್ನುತ್ತಿದ್ದಾರೆ! ಇಂತಹ ಬಂಡವಾಳದ ಕ್ರೋಢೀಕರಣದ ಮೂಲಕವೇ ಪ್ರಕಾಶಮಾನ ಭಾರತವನ್ನು ಪ್ರಸ್ತುತಪಡಿಸಲು ಹೋಗಿ ಮುಗ್ಗರಿಸಿದವರ ನಂತರ 'ಆಂ ಆದ್ಮಿ'ಯನ್ನು ಗಮನದಲ್ಲಿಟ್ಟುಕೊಂಡ 'ಆವೃತ' (ಒಳಗೊಳ್ಳುವ) ಅಭಿವೃದ್ಧಿಯ ಮಾತನಾಡುತ್ತ ಬಂದ ಮನಮೋಹನ ಸಿಂಗ್ ನೇತೃತ್ವದ ಪರಿವಾರ ಮಾಡುತ್ತಿರುವುದಾದರೂ ಏನು ? ಇವರು ವಿಶೇಷ ಆರ್ಥಿಕ ವಲಯಗಳೆಂಬ ರಕ್ಷಿತ ಔದ್ಯಮಿಕ ಪ್ರದೇಶಗಳ ಮೂಲಕ ದೇಶದೊಳಗೇ 'ವಿದೇಶಿ' ವಸಾಹತುಗಳನ್ನು ಸೃಷ್ಟಿಸಹೊರಟಿದ್ದಾರೆ. ಇದು ಇನ್ನು ಐವತ್ತು ವರ್ಷಗಳಲ್ಲಿ ಭಾರತವನ್ನು ಜಾಗತಿಕ ಶಕ್ತಿಯನ್ನಾಗಿ ಮಾಡಬಲ್ಲ, ಈಗಿನ ಎರಡಂಕಿ ಪ್ರಗತಿ ದರವನ್ನು ಮುಂದುವರೆಸಿಕೊಂಡು ಹೋಗಲು ಅನಿವಾರ್ಯವಾಗಿರುವ ಮಾರ್ಗವಂತೆ. ಮತ್ತು ಈವರೆಗಿನ ದಿಢೀರ್ ಪ್ರಗತಿಯ ಸಹಜ ಮುಂದುವರಿಕೆಯಂತೆ! ನಮಗೆ ಪರಮಾಣು ಇಂಧನದ ತುರ್ತು ಅಗತ್ಯ ಬಿದ್ದಿರುವುದು ಇಂತಹ ಅಭಿವೃದ್ಧಿಗಾಗಿ!

ಹೋಗಲಿ, ಈ ಅಭಿವೃದ್ಧಿಯ ಫಲಗಳಾದರೂ ಏನು ? ನಮ್ಮ ಸರ್ಕಾರದ ಮತ್ತು ಜಾಗತಿಕ ಸಮೀಕ್ಷಾ ಸಂಸ್ಥೆಗಳ ಅಧಿಕೃತ ಅಂಕಿ ಅಂಶಗಳೇ ಹೇಳುತ್ತಿವೆ, ದೇಶದಲ್ಲಿ ಈ ಪ್ರಗತಿ ದರ ಏರುತ್ತಿದ್ದಂತೆ ಬಡವರ ಮತ್ತು ಶ್ರೀಮಂತರ ನಡುವಣ ಅಂತರ, ಘರ್ಷಣಾತ್ಮಕ ಪ್ರಮಾಣದಲ್ಲಿ ಹೆಚ್ಚುತ್ತಿದೆ ಎಂದು. ಇದರ ಜೊತೆಗೆ ಬಡವರ ಮತ್ತು ಹಸಿದವರ ಸಂಖ್ಯೆಯೂ ಹೆಚ್ಚಿದೆ. ಜಗತ್ತಿನ ಅರ್ಧದಷ್ಟು ಹಸಿದವರು ಭಾರತದಲ್ಲಿಯೇ ಇದ್ದಾರೆ. ಇದರಿಂದಾಗಿ ಕೋಮು ಹಿಂಸೆ, ರಾಜಕೀಯ ಹಿಂಸೆಯೂ ಸೇರಿದಂತೆ ವೈಯಕ್ತಿಕ ಮತ್ತು ಸಾಮಾಜಿಕ ಹಿಂಸೆ, ತನ್ನ ಪ್ರಮಾಣ ಮತ್ತು ವೈವಿಧ್ಯದಲ್ಲಿ ಹೆಚ್ಚುತ್ತಿದೆ. ಎರಡಂಕಿ ಪ್ರಗತಿ ದರದ ಜೊತೆಗೇ ಹಣದುಬ್ಬರವೂ ಎರಡಂಕಿ ದಾಟಿ ಹೋಗಿ, ಬಡವರನ್ನು ಕಂಗಾಲಾಗಿಸಿದ್ದರೆ, ಕಡುಬಡವರನ್ನು ಭಿಕ್ಷಾ ಸ್ಥಿತಿಗೆ ತಳ್ಳಿದೆ. ಆದರೆ ಜನಪ್ರಿಯ ಮಾಧ್ಯಮ ಪ್ರಪಂಚವೂ ಈಗ ಎರಡಂಕಿ ಪ್ರಗತಿ ದರದ ಲಾಭ ಪಡೆದು ಮೂಡಿರುವ ಹೊಸ ಮಧ್ಯಮ ವರ್ಗಗಳಿಂದ ಆಳಲ್ಪಡುತ್ತಿದೆ. ಅದು, ಮಾರುಕಟ್ಟೆ ಆರ್ಥಿಕತೆಯ ಒತ್ತಾಯಗಳಿಗೆ ಸಿಕ್ಕಿ ರೋಚಕವಾಗಲಾರದ ಸುದ್ದಿಗಳಿಗೆ ಅವಕಾಶ ಕೊಡಲಾಗುತ್ತಿಲ್ಲವಾದ್ದರಿಂದ ದಾರುಣವೆನ್ನಿಸುವ ಈ ಸ್ಥಿತಿ ಅಷ್ಟಾಗಿ ಬೆಳಕಿಗೆ ಬಂದಿಲ್ಲ. ಇಳಿಯಲು ನಿರಾಕರಿಸುತ್ತಿರುವ ಈ ಅಪೂರ್ವ ಹಣದುಬ್ಬರ ದರ, ಹತ್ತು ವರ್ಷಗಳ ಹಿಂದೆ ಇಂತಹುದೇ ಕಾರಣದ ಹಿನ್ನೆಲೆಯಲ್ಲಿ ಥಾಯ್ಲೆಂಡ್, ಇಂಡೋನೇಷ್ಯಾ, ದಕ್ಷಿಣ ಕೊರಿಯಾ, ಅರ್ಜೆಂಟೈನಾ ಮತ್ತು ಬ್ರೆಜಿಲ್ ಮುಂತಾದ ದೇಶಗಳಲ್ಲಿ ಉಂಟಾದ ಆರ್ಥಿಕ ಕುಸಿತವನ್ನು ಭಾರತದಲ್ಲೂ ಉಂಟುಮಾಡುವ ಎಲ್ಲ ಅಪಾಯಗಳಿವೆ ಎಂದು ಜಾಗತಿಕ ಆರ್ಥಿಕ ತಜ್ಞರು ಈಗ ಹೇಳತೊಡಗಿದ್ದಾರೆ.

ಇನ್ನು ಈ ಹೊಸ ಆರ್ಥಿಕತೆಯ ಅವಧಿಯಲ್ಲಿ ಭ್ರಷ್ಟಾಚಾರದ ತಃಖ್ತೆಯಲ್ಲಿ ನಮ್ಮ ದೇಶದ ಸ್ಥಾನಮಾನ ಏರುಗತಿಯಲ್ಲಿದ್ದರೆ, ಜಾಗತಿಕ ಮಾನವ ಸಂಪನ್ಮೂಲ ಅಭಿವೃದ್ಧಿ ತಃಖ್ತೆಯಲ್ಲಿ ಇಳಿಗತಿಯಲ್ಲಿದೆ! ನಿಜ, ಒಂದು ದಕ್ಷತೆಯ ಮತ್ತು ಒಂದು ವರ್ಗದ ಜನರ ಹಣಕಾಸಿನ ಭದ್ರತೆ ಸಾಕಷ್ಟು ಹೆಚ್ಚಿದೆ. ಅವರಿಂದಾಗಿ ಮಾರುಕಟ್ಟೆಯೂ ಮೈತುಂಬಿ ಕೊಂಡಿದೆ. ಆದರೆ ಇದರ ಜೊತೆಗೇ, ಇವರೂ ಸೇರಿದಂತೆ ಎಲ್ಲ ಜನಸಮುದಾಯಗಳ ಮಾನಸಿಕ, ಸಾಮಾಜಿಕ ಅಭದ್ರತೆ ಹೆಚ್ಚಿದೆ. ಭದ್ರತಾ ಸಿಬ್ಬಂದಿಯವರಿಗೆ ಈಗ ಎಲ್ಲಿಲ್ಲದ ಬೇಡಿಕೆ ಬಂದಿದೆ! ಇದರ ಜೊತೆಗೇ ಸುಲಭ ಅಧ್ಯಾತ್ಮದ ಮತ್ತು ವಿಕ್ಷಿಪ್ತ ಮನರಂಜನಾ ಮಾದರಿಗಳೂ ಚಾಲ್ತಿಗೆ ಬಂದಿವೆ. ಮಕ್ಕಳಿಂದ ಮುದುಕರವರೆಗೆ, ವಿಶೇಷವಾಗಿ ಹೆಂಗಸರು ತಮ್ಮ ಮಕ್ಕಳೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಪ್ರಮಾಣ ಒಂದೇ ಸಮನೆ ಹೆಚ್ಚುತ್ತಿದೆ. ಇತ್ತೀಚಿನ ಸಮೀಕ್ಷೆಯೊಂದರ ಪ್ರಕಾರ ಜಾಗತೀಕರಣದ ಪ್ರದರ್ಶನ ಮಾದರಿಯಂತೆ ಪ್ರಸ್ತುತಪಡಿಸಲಾಗುತ್ತಿರುವ ಬೆಂಗಳೂರು, ಮಹಿಳೆಯರ ಪಾಲಿಗೆ ಅತ್ಯಂತ ಅಭದ್ರ ನಗರ ಎಂದು ಗುರುತಿಸಲ್ಪಟ್ಟಿದೆ. ಈ ಗಾಯದ ಮೇಲೆ ಬರೆ ಎಳೆದಂತೆ, ನಮ್ಮ ಶ್ರೇಷ್ಠ ನ್ಯಾಯಾಲಯ ಮದ್ಯಮಂದಿರಗಳಲ್ಲಿ ಮಹಿಳೆಯರೂ ಮದ್ಯ ಸರಬರಾಜು ಮಾಡಬಹುದೆಂದು ಘೋಷಿಸಿದೆ. ಎಲ್ಲವೂ ಜಾಗತೀಕರಣಗೊಳ್ಳುತ್ತಿರುವಾಗ ನಮ್ಮ ನ್ಯಾಯಾಂಗವಾದರೂ ಏಕೆ ಹಿಂದೆ ಬಿದ್ದೀತು ?

ಇದೆಲ್ಲದಕ್ಕೆ ಮುಳ್ಳಿನ ಕಿರೀಟವಿಟ್ಟಂತೆ ರೈತರ 'ಆತ್ಮಹತ್ಯೆ' ಮುಂದುವರಿದೇ ಇದೆ. ಕಳೆದ ಹತ್ತು ವರ್ಷಗಳಲ್ಲಿ ಒಂದೂವರೆ ಲಕ್ಷಕ್ಕೂ ಹೆಚ್ಚು ಜನ ರೈತರು ಸಾವಿಗೆ ಶರಣಾಗಿದ್ದಾರೆ. ಅದಕ್ಕಿಂತ ಮುಖ್ಯ ವಿಷಯ ಎಂದರೆ, ಇವರಿಗೆ ಪರಿಹಾರ ಪ್ಯಾಕೇಜುಗಳನ್ನು ಘೋಷಿಸಿದಷ್ಟೂ, ಇವರ ಆತ್ಮಹತ್ಯೆ ದರ ಹೆಚ್ಚುತ್ತಾ ಹೋಗುತ್ತಿದೆ.

ಇದೀಗ ಮುಖ್ಯ ಪ್ರಶ್ನೆ: ಏಕೆ ಹೀಗೆ ? ಇದಕ್ಕೆ ಉತ್ತರ ಹುಡುಕುತ್ತಾ ಹೊರಟಂತೆ ನಮಗೆ ಕತ್ತಲೆಯ ಸುರಂಗದ ಕೊನೆಯಲ್ಲಿ ಕಾಣುವುದು 'ಹಿಂದ್ ಸ್ವರಾಜ್'. 'ಹಿಂದ್ ಸ್ವರಾಜ್' ಈ ಎಲ್ಲ ಸಮಸ್ಯೆಗಳಿಗೆ ಉತ್ತರ ಕೊಡುತ್ತದೆ ಎಂಬರ್ಥದಲ್ಲಿ ನಾನು ಈ ಮಾತನ್ನು ಹೇಳುತ್ತಿಲ್ಲ. ಅದು ಆಧುನಿಕ ನಾಗರಿಕತೆಯ ತನ್ನ ವಿಶ್ಲೇಷಣೆಯಲ್ಲಿ ಈ ಸಮಸ್ಯೆಗಳನ್ನು ಮುನ್ನೋಡಿತ್ತು ಎಂಬರ್ಥದಲ್ಲಿ ಈ ಮಾತು ಹೇಳುತ್ತಿರುವೆ. 'ಹಿಂದೂಸ್ತಾನ ತಿಣುಕುತ್ತಿರುವುದು ಬ್ರಿಟಿಷರ ಭಾರದಿಂದಲ್ಲ; ಆಧುನಿಕ ನಾಗರಿಕತೆಯ ರಾಕ್ಷಸ ಭಾರದಿಂದ.': ಇದು 'ಹಿಂದ್ ಸ್ವರಾಜ್'ನ ಬೀಜವಾಕ್ಯ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಗಾಂಧಿ ಆಧುನಿಕತೆಯನ್ನು ಟೀಕಿಸುತ್ತಿಲ್ಲ, ಏಕೆಂದರೆ ಆಧುನಿಕ ರಾಜಕೀಯ ಸಂದರ್ಭದ ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತೆಯ ಕಲ್ಪನೆಗಳನ್ನು ಸ್ವೀಕರಿಸಿ ಅವನ್ನು ವಿಕಾಸಗೊಳಿಸುವಾಗ ಅವರು ಆಧುನಿಕರಲ್ಲಿ ಆಧುನಿಕರು. ಆದರೆ ಅವರ ವಿರೋಧವಿರುವುದು ಆಧುನಿಕ ನಾಗರಿಕತೆಗೆ. ಅಂದರೆ ಆಧುನಿಕತೆಯ ಲೌಕಿಕ ರೂಪಗಳ ಬಗೆಗೆ. ಇದಕ್ಕೆ ಕಾರಣ ಆಧುನಿಕ ನಾಗರಿಕತೆ ತನ್ನನ್ನು ಕಟ್ಟಿಕೊಳ್ಳಲು ಮಾಡಿಕೊಂಡ ಅದರ ಒಡಕಿನಲ್ಲಿಯೇ ಇದೆ. ಈ ಒಡಕಿನ ಮೂಲ ಇರುವುದು ಆಧುನಿಕ – ಅಂದರೆ ಐರೋಪ್ಯ ಪುನರುಜ್ಜೀವನ ನಿರೂಪಿಸುವ – ಕ್ರಿಶ್ಚಿಯನ್ ಮತ, ಜಗತ್ತನ್ನು ನೋಡುವ ಬಗೆಯಲ್ಲಿ. ಈ ಮತ ಜಗತ್ತನ್ನು ದೇವರ ಕೊಡುಗೆ ಎಂದು ಭಾವಿಸುತ್ತದೆ. ಅಂದರೆ ಜಗತ್ತು ದೇವರ ಹೊರಗಿದೆ ಮತ್ತು ಜಡರೂಪಿಯಾಗಿದೆ. ಹಾಗಾಗಿ ಅದನ್ನು ಮನುಷ್ಯ ತನಗೆ ಬೇಕಾದ ಸುಖ ಫಲಗಳನ್ನು ಪಡೆದುಕೊಳ್ಳಲು ಹೇಗಾದರೂ ಬಳಸಿಕೊಳ್ಳಬಹುದು ಎಂದು ಭಾವಿಸುತ್ತದೆ. ಅಂದರೆ ಸ್ಥೂಲವಾಗಿ ಜಗತ್ತು ಎಂದರೆ ಒಂದು ಗ್ರಾಹಕ ವಸ್ತುವೇ ಆಗಿದೆ! ಈ ನಂಬಿಕೆಯೇ ಹೊಸ ವಿಜ್ಞಾನವನ್ನು – ಇತ್ತೀಚಿನವರೆಗೆ ಆಧುನಿಕ ವಿಜ್ಞಾನವೆಂದು ಕರೆಯಲ್ಪಡುತ್ತಿದ್ದ ಮೆಕ್ಯಾನಿಕ್ಸ್‌ಅನ್ನು ಸೃಷ್ಟಿಸಿದ್ದು. ಆಧುನಿಕ ನಾಗರಿಕತೆ ಬೆಳೆದದ್ದೇ ಈ ಸುಖಫಲಗಳ – ಮೆಕ್ಯಾನಿಕ್ಸ್‌ನ – ಆಕರ್ಷಣೆಗಳೊಂದಿಗೇ. ಈ ಅರ್ಥದಲ್ಲಿ ಆಧುನಿಕ ನಾಗರಿಕತೆ ಎಂದರೆ ಕ್ರಿಶ್ಚಿಯನ್ ಲೋಕದೃಷ್ಟಿಯೇ ಆಗಿದೆ. (ಇದರ ಸೂಕ್ಷ್ಮ ಮತ್ತು ಸೃಜನಶೀಲ ಪರಿಶೀಲನೆಯನ್ನು ನಾವು ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನೋಡಬಹುದಾಗಿದೆ)

ಈ ಲೋಕದೃಷ್ಟಿಯ ಒಂದು ವಿಶೇಷವೆಂದರೆ, ದೇವರನ್ನು ಹೊರಗಿಟ್ಟ ಕಾರಣದಿಂದಾಗಿ ದೇವರನ್ನೂ ಮೀರಿ ಬೆಳೆದ ಈ ವಿಜ್ಞಾನ ಮತ್ತು ಆ ದೇವರನ್ನು ನಂಬುವ ಕ್ರಿಶ್ಚಿಯನ್ ಧರ್ಮದ ನಡುವೆ ಲೋಕ ಜೀವನದಲ್ಲಿ ಘರ್ಷಣೆ ಉಂಟಾಗದಂತೆ ತಡೆಯಲು ಯುರೋಪಿನ ಆಡಳಿತಗಾರರು 'ಸೆಕ್ಯುಲರಿಸಂ' ಎಂಬ ರಾಜಕೀಯ ಪರಿಕಲ್ಪನೆಯೊಂದನ್ನು ರೂಪಿಸಿಕೊಳ್ಳಬೇಕಾಯಿತು. ಇದು ದೇವರು-ಧರ್ಮಗಳ ಅಧಿಕಾರಗಳನ್ನೂ ಮತ್ತು ಲೌಕಿಕ ಆಡಳಿತದ ಅಧಿಕಾರಗಳನ್ನೂ ಪ್ರತ್ಯೇಕಿಸುವ ಒಪ್ಪಂದ. ಹೀಗಾಗಿ ಐರೋಪ್ಯ ರಾಜಕಾರಣ ಯಾವ ಪಾಪಪ್ರಜ್ಞೆಯೂ ಇಲ್ಲದೆ ವಿಜ್ಞಾನವನ್ನು ತಂತ್ರಜ್ಞಾನವನ್ನಾಗಿ ಪರಿವರ್ತಿಸಿಕೊಂಡು ಬಂಡವಾಳ ಆಧಿಕ್ಯವನ್ನು ಸಾಧಿಸುತ್ತಾ ಹೋಯಿತು. ಇದೇ ವಸಾಹತುಶಾಹಿ ರಾಜಕಾರಣಕ್ಕೆ ಕಾರಣವಾದದ್ದು.

ಗಾಂಧಿ ಇದನ್ನು ಅಧರ್ಮ ಎಂದರು. ರೋಗವೆಂದು ಕರೆದರು. ಇದಕ್ಕೆ ಮುನ್ನ, ಪ್ರವಾದಿ ಮಹಮ್ಮದ್ ಇದನ್ನು ಸೈತಾನಿ ನಾಗರಿಕತೆ ಎಂದು ಕರೆದಿದ್ದ. ಬಹುಶಃ ಇಂದಿನ ಮತೀಯ ವೈರ ಮತ್ತು ಹಿಂಸಾಚಾರಗಳ ಬೀಜವನ್ನು ಆಧುನಿಕ ನಾಗರಿಕತೆಯು ದೇವರು ಮತ್ತು ಲೋಕಾಡಳಿತಗಳ ನಡುವೆ ಈ ಗೆರೆ ಎಳೆದ ರೀತಿಯಲ್ಲಿ ಗುರುತಿಸಬಹುದು.

ಆಧುನಿಕ ನಾಗರಿಕತೆಯ ಇಂದಿನ ರೂಪವಾದ ಜಾಗತೀಕರಣವನ್ನು ಇತ್ತೀಚಿನ ಚರಿತ್ರಕಾರನೊಬ್ಬ (ಹಟ್ಟಿಂಗ್‌ಟನ್ ಇರಬೇಕು) ನಾಗರಿಕತೆಗಳ ಸಂಘರ್ಷ ಎಂದು ಕರೆದಿದ್ದುದು ಬಹುಶಃ ಈ ಅರ್ಥದಲ್ಲೇ. ಹಾಗಾಗಿ, ಮುಸ್ಲಿಂ ಭಯೋತ್ಪಾದನೆ ಆಧುನಿಕ ನಾಗರಿಕತೆಯ ಒಂದು ಮುಖವಾಗಿದ್ದ ನಾಸ್ತಿಕ ಕಮ್ಯುನಿಸ್ಟ್ ರಷ್ಯಾದ ವಿರುದ್ಧ ಯುದ್ಧ ರೂಪದಲ್ಲಿ ಆರಂಭವಾಗಿ, ಅಂತಿಮವಾಗಿ ಈ ನಾಗರಿಕತೆಯ ಇನ್ನೊಂದು ಮುಖ ಮತ್ತು ಈಗ ಅಧಿಕೃತ ಮುಖದಂತಿರುವ ಅಮೆರಿಕಾದ ವಿರುದ್ಧವೇ ಗುರಿಯಾಗಿರುವುದನ್ನು ನೋಡಿದರೆ, ಇಂದಿನ ಮತೀಯ ಭಯೋತ್ಪಾದನೆಯೂ ಆಧುನಿಕ ನಾಗರಿಕತೆಯ ವೈರುಧ್ಯಗಳ ಫಲವೇ ಆಗಿದೆ ಎಂಬುದು ನಮಗೆ ಮನವರಿಕೆಯಾದೀತು.

ಹಾಗೇ, ಭಾರತೀಯ ಮುಸ್ಲಿಮರನ್ನೂ ಹೊರಗಿನವರೆಂದು ಕರೆದ ಹಿಂದೂವಾದದ ಮೂಲಕರ್ತ ಸಾವರ್ಕರ್ ಗೊತ್ತಿದ್ದೋ ಗೊತ್ತಿಲ್ಲದೆಯೋ ಕ್ರಿಶ್ಚಿಯನ್ ಲೋಕದೃಷ್ಟಿಯನ್ನು ಒಪ್ಪಿಕೊಂಡ ಆಧುನಿಕ ಹಿಂದುವೇ ಆಗಿದ್ದನು ಎಂಬುದನ್ನು ನಾವು ಇಲ್ಲಿ ಗಮನಿಸಬೇಕು. ಇಂದಿನ ಹಿಂದೂವಾದಿಗಳು ಮುಸ್ಲಿಮರನ್ನು ದೂರೀಕರಿಸಲು ನೀಡುವ ಪ್ರಮುಖ ಮತ್ತು ಜನಪ್ರಿಯ ಕಾರಣ ಅವರು ಅನಾಗರಿಕರೆಂಬುದು! ಅಂದರೆ ತಮ್ಮ ಕಲ್ಪನೆಯ ನಾಗರಿಕತೆಗೆ ಬದ್ಧರಾದವರಲ್ಲ ಎಂದಷ್ಟೇ ಇದರ ಅರ್ಥ. ಮುಸ್ಲಿಂ ಭಯೋತ್ಪಾದನೆ ಈಗ ಭಾರತದ ವಿರುದ್ಧ ತಿರುಗಿರುವುದು ಮೂಲತಃ ಈ ಕಾರಣಕ್ಕೇ, ಭಾರತದ ರಾಜಕಾರಣ ಈಗ ಆಧುನಿಕ ನಾಗರಿಕತೆಯ ಅಂದರೆ ಅಮೆರಿಕಾದ ರಾಜಕಾರಣದ ತರ್ಕವನ್ನನುಸರಿಸಿ ನಡೆಯುತ್ತಿದೆ ಎಂಬ ಕಾರಣಕ್ಕೆ. ಆದರೆ ಏನೇ ಕಾರಣವಿರಲಿ, ಈ ಯಾವ ಹಿಂಸಾಚಾರವೂ ಅದರ ಹಿಂದಿನ ರಾಜಕಾರಣವೂ ಕ್ಷಮಾರ್ಹವಲ್ಲ. ಏಕೆಂದರೆ, ಪಶ್ಚಿಮದ ವಿಜ್ಞಾನ ನಾಗರಿಕತೆಯೂ ಸೇರಿದಂತೆ ಇವೆಲ್ಲವೂ ಸರ್ವಶ್ರೇಷ್ಠತೆಯ – ನಿನಗಿಂತಲೂ ಹೆಚ್ಚು ಪರಿಶುದ್ಧ – ಧೋರಣೆಯ ಮೂಲಭೂತವಾದಗಳನ್ನು ಆಧರಿಸಿದ್ದು. ಮನುಷ್ಯನ ವೈಚಾರಿಕತೆಯನ್ನು ಮತ್ತು ಅದು ಸೃಷ್ಟಿಸುವ ಬಹುತ್ವವನ್ನು ಹತ್ತಿಕ್ಕುವಂತಹದು. ಬಹುತ್ವವಿಲ್ಲದೆಡೆ ಏನು ತಾನೇ ಹೊಸದು ಹುಟ್ಟೀತು? ಇಷ್ಟು ಸಾಮಾನ್ಯ ಜ್ಞಾನವಿಲ್ಲದ ಪ್ರತಿಭಟನೆಯಿಂದ ಸಮಾಜದಲ್ಲಿ ಮತ್ತಷ್ಟು ವೈರುಧ್ಯಗಳು ಮತ್ತು ವೈರ ಸೃಷ್ಟಿಯಾಗುವುದರ ಹೊರತಾಗಿ ಮತ್ತೇನು ಪ್ರಯೋಜನವಾದೀತು?

ನಮಗೆ ಗಾಂಧಿ ಮತ್ತು ಅವರ 'ಹಿಂದ್ ಸ್ವರಾಜ್' ಮುಖ್ಯವಾಗುವುದು ಇಲ್ಲಿ, ಅವರ ಸಾಮಾನ್ಯ ಅರಿವಿನಿಂದಾಗಿ. ಅವರು ಈ ಅರಿವನ್ನು ಒಂದು ಧರ್ಮವನ್ನಾಗಿ ಪ್ರಸ್ತುತಪಡಿಸುವ ರೀತಿ 'ಹಿಂದ್ ಸ್ವರಾಜ್'ಗೆ ಒಂದು ಬೆಡಗಿನ ಸೌಂದರ್ಯವನ್ನು ಪ್ರದಾನ ಮಾಡಿದೆ. ಆಧುನಿಕ ನಾಗರಿಕತೆಯನ್ನು ಅವರು ಮಹಮ್ಮದನಂತೆ 'ಸೈತಾನಿ' ಎಂದು ಮತೀಯ 'ಇದಮಿತ್ಥಂ' ಎಂಬ ಭಾಷೆಯಲ್ಲಿ ವರ್ಣಿಸಲಿಲ್ಲ, ಹಾಗಾಗಿ ಅದರ ವಿರುದ್ಧ ವ್ಯಗ್ರ ಹೋರಾಟಕ್ಕೂ ಕರೆಕೊಡಲಿಲ್ಲ. ಆ ತರಹದ ವ್ಯಗ್ರತೆ ಆ ನಾಗರಿಕತೆಯನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳುವಲ್ಲಿ ಅಡ್ಡಿಯುಂಟುಮಾಡುತ್ತದೆ ಎಂದು ಅವರು ಭಾವಿಸಿದರು. ಬದಲಿಗೆ ಆಧುನಿಕ ನಾಗರಿಕತೆಯನ್ನು ಜಗತ್ತಿನಲ್ಲಿ ಲೋಕಾಡಳಿತ ವಿಕಾಸವಾಗುವ ಪ್ರಕ್ರಿಯೆಯಲ್ಲಿನ ಒಂದು ಅನಪೇಕ್ಷಣೀಯ ತಿರುವು ಎಂದು ಪರಿಗಣಿಸಿ, ಅದರ ಅನುಸರಣೆಯನ್ನು ರೋಗವೆಂದು ಕರೆದರು. ಅಂದರೆ ಅದು ಲಕ್ಷಣಾತ್ಮಕ ದೋಷವಾಗಿದ್ದು, ಅದು ವಾಸಿಮಾಡಬಹುದಾದದ್ದು.

ದೇವರು, ಧರ್ಮ ಮತ್ತು ರಾಜಕಾರಣಗಳನ್ನು ಪ್ರತ್ಯೇಕಿಸಿ ಲೋಕ ಜೀವನವನ್ನು ನಿರೂಪಿಸುವ ಅನುಭವ ಗ್ರಹಿಕೆಯ ಒಡಕಿನ ಬಗ್ಗೆ ಗಾಂಧೀಜಿಯದ್ದು ತೀವ್ರ ಭಿನ್ನಾಭಿಪ್ರಾಯ, ನಿಜ. ಆದರೆ ಈ ಭಿನ್ನಾಭಿಪ್ರಾಯದ ತೀವ್ರತೆ ಅಧಾರ್ಮಿಕವಾಗಿ, ಸೈತಾನಿಕವಾಗಿ ವ್ಯಕ್ತವಾಗಬಾರದು ಎಂಬ ಎಚ್ಚರಿಕೆಯೂ ಅವರಿಗಿತ್ತು. ಆದ್ದರಿಂದಲೇ ಅವರು ಭಿನ್ನಾಭಿಪ್ರಾಯಗಳು ವೈರವಾಗಿ ಪರಿವರ್ತಿತವಾಗಿ, ಅದೊಂದು ಹಿಂಸೆಯ ವಿಷವ್ಯೂಹವನ್ನು ನಿರ್ಮಿಸುವ ಮುನ್ನ ಅವನ್ನು ಪರಿಹರಿಸಿಕೊಳ್ಳುವ ಅಗತ್ಯವನ್ನು ಮನಗಂಡಿದ್ದರು. ಈ ಹಿನ್ನೆಲೆಯಲ್ಲಿ ಅವರು ಅಹಿಂಸೆಯನ್ನು ತಮ್ಮ ಹೋರಾಟದ ಮಾಧ್ಯಮವಾಗಿ ಕಂಡುಕೊಂಡರು. ಇದು ಗಾಂಧಿಯವರ ಸಾಮಾನ್ಯಜ್ಞಾನ. ಹೀಗೆ, ಸತ್ಯಕ್ಕಾಗಿ ಅಹಿಂಸಾತ್ಮಕವಾಗಿ – ತನ್ನನ್ನೇ ಸಂಕಷ್ಟಕ್ಕೀಡುಮಾಡಿಕೊಂಡು ಎದುರಾಳಿಯ ಆತ್ಮಸಾಕ್ಷಿಯನ್ನು ಮುಟ್ಟುವ ಮೂಲಕ – ಮಾಡುವ ಆಗ್ರಹವೇ ಸತ್ಯಾಗ್ರಹವೆನಿಸಿತು. ಹೀಗೆ ಆಧುನಿಕ ಇತಿಹಾಸದಲ್ಲಿ ಘರ್ಷಣೆಗಳನ್ನು ಪರಿಹರಿಸಿಕೊಳ್ಳಲು, ಅನ್ಯಾಯಗಳನ್ನು ವಿರೋಧಿಸಲು ಆವರೆಗೆ ಅನುಸರಿಸುತ್ತಿದ್ದ ಹಿಂಸಾ ಮಾರ್ಗಕ್ಕೆ ಪರ್ಯಾಯವೊಂದನ್ನು ನೀಡಿದ್ದು ಗಾಂಧಿಯ ಹೆಗ್ಗಳಿಕೆ. ಅಷ್ಟೇ ಅಲ್ಲ, ಇದು ಆತ್ಮಬಲದ ಹೊರತಾಗಿ ಇನ್ನಾವ ಬಲವೂ ಇಲ್ಲದ ಜನರ ಕೈಗೆ ನೀಡಿದ ಹೋರಾಟದ ಅಸ್ತ್ರವೂ ಹೌದು. ಇದರ ಮೂಲಕವೇ ಅವರು ಆಧುನಿಕ ನಾಗರಿಕತೆಯ ಪ್ರತೀಕವೆನಿಸಿದ ಬ್ರಿಟಿಷ್ ವಸಾಹತುಶಾಹಿಯ ಮುಖಾಮುಖಿಯಾದದ್ದು ಕೂಡ ಎಂಬುದು ಇಲ್ಲಿ ಗಮನಾರ್ಹ.

ಇದಕ್ಕಾಗಿ ಅವರು ದೇವರ ಮತ್ತು ಧರ್ಮಗಳ ಕಲ್ಪನೆಯನ್ನು ಪುನರ್ನಿರೂಪಿಸಿದರು. ಈ ಪುನರ್ನಿರೂಪಣೆಗಾಗಿ ಅವರು ತಮ್ಮನ್ನು ಸನಾತನಿ ಎಂದು ಕರೆದುಕೊಂಡರು. ಸನಾತನಿ ಎಂದರೆ ನಮ್ಮ ವಿಚಾರವಾದಿಗಳ ಅರ್ಥದಲ್ಲಲ್ಲ; ಆದಿ ಅಂತ್ಯಗಳಿಲ್ಲದ ನಿತ್ಯ ಧರ್ಮ ಎಂದು. ಅದರ ಪ್ರಕಾರ ಈ ಹಿಂದೂ, ಬೌದ್ಧ, ಕ್ರಿಶ್ಚಿಯನ್, ಇಸ್ಲಾಂ ಇತ್ಯಾದಿಗಳೆಲ್ಲವೂ ಈ ಸನಾತನ ಧರ್ಮದ ಕಾಲ-ದೇಶ ರೂಪಗಳಷ್ಟೆ. ಈ ಅರ್ಥದಲ್ಲಿ ಗಾಂಧಿ ಮೂಲ ಅದ್ವೈತಿ. ಈ ಜಗತ್ತನ್ನು ಧಾರಣೆ ಮಾಡಿರುವ 'ಸತ್ವ'ವನ್ನು ಅಂದರೆ ಈ ಜಗತ್ತು ಯಾವುದನ್ನು ಅವಲಂಬಿಸಿ ನಿಂತಿದೆಯೋ ಆ ಸತ್ಯವನ್ನು ಅವರು ದೇವರು ಎಂದು ಗುರುತಿಸಿದರು. ಅವರು 'ದೇವರು ಸತ್ಯ' ಎನ್ನುವ ಮತೀಯವಾದಿಗಳ ವಸ್ತುನಿಷ್ಠ ನಂಬಿಕೆಯನ್ನು ತಿರುಗುಮುರುಗಾಗಿಸಿ, 'ಸತ್ಯವೇ ದೇವರು' ಎಂದು ವ್ಯಕ್ತಿನಿಷ್ಠ ಮಾಡಿ ಅದನ್ನು ಅನ್ವೇಷಣಾತ್ಮಕಗೊಳಿಸಿದರು. ಇದೇ, ಪಶ್ಚಿಮದ ಆಧುನಿಕ ನಾಗರಿಕತೆಯನ್ನು ಮತ್ತು ಅದರ ಬಲೆಗೆ ಬಿದ್ದಿದ್ದ ಎಲ್ಲ ಸಂಸ್ಕೃತಿಗಳನ್ನು ಕುರಿತ ಗಾಂಧೀಜಿಯ ಮೂಲ ಮತ್ತು ಮುಖ್ಯ ಟೀಕೆ ಎಂದು ನಾನು ಭಾವಿಸಿದ್ದೇನೆ.

ಅವರ ಪ್ರಕಾರ ದೇವರು ಒಂದು ಅಖಂಡ ಹಾಗೂ ಸಾವಯವ ಅನುಭವ. ಹಾಗಾಗಿ ಈ ಜಗತ್ತು ದೇವರ ಕೊಡುಗೆ ಎಂದರೂ, ಆ ಕೊಡುಗೆಯೂ ದೈವ ಸ್ವರೂಪಿಯೇ. ಅಂದರೆ, ಈ ಜಗತ್ತೆಲ್ಲವೂ – ಜಡವೂ ಸೇರಿದಂತೆ – ಚೇತನಮಯವಾಗಿದ್ದು ದೇವರೇ ಆಗಿದೆ. ಆದ್ದರಿಂದ ಈ ಜಗತ್ತಿನ ಎಲ್ಲ

ವಿದ್ಯಮಾನಗಳೂ, ರಾಜಕಾರಣವೂ ಸೇರಿದಂತೆ ದೈವೀ ಚಟುವಟಿಕೆಯೇ! ಈ ನಂಬಿಕೆಯೊಂದಿಗೇ ಅವರು ತಮ್ಮ 'ಸತ್ಯಾನ್ವೇಷಣೆ' ಎಂಬ ಆತ್ಮಕಥೆಯಲ್ಲಿ ಹೀಗೆ ಹೇಳಿರುವುದು: 'ಸತ್ಯದೊಡನೆ ಮುಖಾಮುಖಿ ಎಂದರೆ, ಸೃಷ್ಟಿಯ ಅತಿ ಕ್ಷುದ್ರವನ್ನೂ ಅದು ನಾನೇ ಎಂಬಂತೆ ಅದರೊಡನೆ ಗುರುತಿಸಿಕೊಂಡು ಪ್ರೀತಿಸುವುದು. ಆದ್ದರಿಂದಲೇ ನಾನು ಬದುಕಿನ ಯಾವ ಕ್ಷೇತ್ರದಿಂದಲೂ ಹೊರಗೆ ಇರಲಾರೆ. ಇಂತಹ ಸತ್ಯನಿಷ್ಠೆಯೇ ನನ್ನನ್ನು ರಾಜಕಾರಣಕ್ಕೆ ಎಳೆದಿರುವುದು. ಆದ್ದರಿಂದ ರಾಜಕಾರಣಕ್ಕೂ ಧರ್ಮಕ್ಕೂ ಸಂಬಂಧವಿಲ್ಲ ಎನ್ನುವವರಿಗೆ ಧರ್ಮವೆಂದರೇನೆಂದು ಗೊತ್ತಿಲ್ಲ ಎಂದು ಹೇಳಲು ನನಗೇನೂ ಸಂಕೋಚವಿಲ್ಲ.'

ಹೀಗೆ ರಾಜಕಾರಣ ಮತ್ತು ಧರ್ಮದ ಪ್ರತ್ಯೇಕೀಕರಣಗಳನ್ನು ಒಪ್ಪದ ಗಾಂಧಿ ಸಹಜವಾಗಿಯೇ ಪಶ್ಚಿಮದ ಸೆಕ್ಯುಲರಿಸಂ ಅನ್ನು ಒಪ್ಪುವುದಿಲ್ಲ. ಹಾಗೇ ಸೆಕ್ಯುಲರಿಸಂನ ಮರೆಯಲ್ಲಿ ಮಲೆತು ಬೆಳೆದ ವಿಜ್ಞಾನದ ಅನ್ವಯ ಜ್ಞಾನವೆನಿಸಿದ ತಂತ್ರಜ್ಞಾನವನ್ನೂ, ಅದಕ್ಕೂ ಮುಖ್ಯವಾಗಿ, ಅದನ್ನು ಆಧರಿಸಿ ಬೆಳೆದ ಶೋಷಕ ವಸಾಹತುಶಾಹಿ ರಾಜಕಾರಣವನ್ನು. ಹಾಗಾಗಿಯೇ ಅವರು ಇನ್ನೊಂದು ನೆಲೆಯಲ್ಲಿ, ಅದ್ವೈತವನ್ನು ಹೇಳುತ್ತಲೇ ಜಗತ್ತನ್ನು ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಎಂದು ವಿಭಾಗಿಸಿ ಶೋಷಕ ಜಾತಿ ರಾಜಕಾರಣಕ್ಕೆ ಆಸ್ಪದ ಮಾಡಿದ ಶಂಕರಾಚಾರ್ಯರ ಶಾಸ್ತ್ರ ಮತ್ತು ಸ್ಮೃತಿ ಆಧಾರಿತ ವೈದಿಕ ನಾಗರಿಕತೆಯನ್ನೂ ಒಪ್ಪಲಿಲ್ಲ. ಏಕೆಂದರೆ, ಅದರ ಈ ಭಾಗೀಕರಣ ಕೆಳ ಮತ್ತು ಅಸ್ಪೃಶ್ಯ ಜಾತಿಗಳ ಕೇರಿಗಳೆಂಬ ವಸಾಹತುಗಳನ್ನು ಸೃಷ್ಟಿಸಿ ಶೋಷಣೆಗೆ ಕಾರಣವಾಗಿತ್ತು. ಹಾಗಾಗಿ ಗಾಂಧಿ ಎಂದೂ ಶಾಸ್ತ್ರ-ಸ್ಮೃತಿಗಳನ್ನು ಆಧರಿಸಿ ಯಾವುದು ಧರ್ಮ ಮತ್ತು ಯಾವುದು ಅಧರ್ಮ ಎಂದು ನಿರ್ಧರಿಸುತ್ತಿರಲಿಲ್ಲ. ಅವರಿಗೆ ದಿವ್ಯವಾಣಿಗಿಂತ ಎದೆಯ ದನಿ ನಿರ್ಣಾಯಕವಾಗಿತ್ತು. ಹಾಗಾಗಿ ಅವರಿಗೆ ಸೆಕ್ಯುಲರಿಸಂನ ಅಗತ್ಯವೂ ಕಾಣಲಿಲ್ಲ! ಅವರಿಗೆ ಧರ್ಮವೆಂದರೆ ಸೃಷ್ಟಿಯ ಅಖಂಡತೆಯ ಅನುಭವ. ಹಾಗಾಗಿಯೇ ಅವರು ತಮ್ಮ ಇಂತಹ ಆಧ್ಯಾತ್ಮಿಕ ರಾಜಕಾರಣದ ಲೌಕಿಕ ರೂಪವಾಗಿ ಸಿದ್ಧಪಡಿಸಿದ್ದ ರಚನಾತ್ಮಕ ಕಾರ್ಯಕ್ರಮದಲ್ಲಿ ಇಂತಹ ಅಖಂಡ ಅನುಭವವನ್ನು ಭಂಗಗೊಳಿಸುವ ಎಲ್ಲ ಆಚರಣೆಗಳನ್ನೂ, ಭಾವನೆಗಳನ್ನೂ ನಿರ್ಮೂಲನಗೊಳಿಸುವ ಸಂಕಲ್ಪ ತೋರಿದ್ದರು. ಜಾತಿ ಪದ್ಧತಿ ನಿರ್ಮೂಲನ, ವಿಶೇಷವಾಗಿ ಅಸ್ಪೃಶ್ಯತಾ ನಿವಾರಣೆ ಮತ್ತು ಹಿಂದು-ಮುಸ್ಲಿಂ ಐಕ್ಯತೆಗಳು ಅದರ ಅವಿಭಾಜ್ಯ ಅಂಗಗಳಾಗಿದ್ದುದು ಈ ಕಾರಣದಿಂದಲೇ.

ಹೀಗೆ ಗಾಂಧಿ ಸನಾತನ ಧರ್ಮದಿಂದ ಸ್ಫೂರ್ತಿಗೊಂಡು ಹಿಂದೂ ಧರ್ಮವನ್ನು ಶಾಸ್ತ್ರ-ಸಮ್ಮತಿಗಳಿಂದ ಬಿಡುಗಡೆಗೊಳಿಸಿ ತಮ್ಮ ರಚನಾತ್ಮಕ ಕಾರ್ಯಕ್ರಮದ ಮೂಲಕ ಅದನ್ನು ಸಮಕಾಲೀನಗೊಳಿಸಿದರು. ಅವರು ತಮ್ಮನ್ನು ಹಿಂದೂ ಎಂದು ಕರೆದುಕೊಂಡದ್ದು ಈ ಅರ್ಥದಲ್ಲಿ. ಹಾಗೆ ನೋಡಿದರೆ ಗಾಂಧಿಯನ್ನು ಓರ್ವ ಬೌದ್ಧ ಅದ್ವೈತಿ ಎಂದು ಕರೆಯುವುದೇ ಸರಿಯಾದೀತು. ಏಕೆಂದರೆ ಬುದ್ಧನಂತೆಯೇ ಅವರು ಸಮಾಜದ ತಳದಲ್ಲಿ ದುಃಖವನ್ನು ಗುರುತಿಸಿದರು. ಅದರ ನಿವಾರಣೆಯೇ ಧರ್ಮವೆಂದು ಭಾವಿಸಿದರು. ಹಾಗಾಗಿಯೇ, ತಂತ್ರಜ್ಞಾನದ ಸುಖಫಲಗಳ ಪರಿಭಾಷೆಯಲ್ಲಿ ಮಾತನಾಡುತ್ತಾ ಎಲ್ಲರನ್ನೂ ನಿರಂತರ ದಾಹಿಗಳನ್ನಾಗಿಯೂ, ಶಾಶ್ವತ ಅತೃಪ್ತರನ್ನಾಗಿಯೂ ಮಾಡತೊಡಗಿದ್ದ ಆಧುನಿಕ ನಾಗರಿಕತೆಯನ್ನು ಅವರು ತಿರಸ್ಕರಿಸಿದ್ದು, ಅಪಾಯಕಾರಿ ಎಂದು ಎಚ್ಚರಿಸಿದ್ದು. ಬುದ್ಧನಂತೆಯೇ ಅವರು ಸುಖದ ಭಾಷೆಯಲ್ಲಿ ಮಾತನಾಡಲಿಲ್ಲ. ಬುದ್ಧನ ಪ್ರಕಾರ ದುಃಖ ನಿವಾರಣೆಯೇ ಸುಖ! ಅದನ್ನು ಮಹಾಯಾನಿಗಳು ಮಹಾಸುಖವೆಂದು ಕರೆದರು. ಗಾಂಧಿ ಇದನ್ನು ಜನಪ್ರಿಯ ಹಿಂದೂ ಪರಿಭಾಷೆಯಲ್ಲಿ ದೈಹಿಕ ಅನುಭವ ಎಂದು ಕರೆದರು. ಎಲ್ಲ ಮನುಷ್ಯರ ಪರಮಗುರಿ ಇದೇ – ಅಂದರೆ, ಪ್ರತಿ ಮನುಷ್ಯನೂ ತನ್ನಲ್ಲಿನ ದೈಹಿಕತೆಯನ್ನು ಕಂಡುಕೊಳ್ಳುವುದು – ಎಂದು ಅವರು ನಂಬಿದ್ದರು.

ಈ ನಂಬಿಕೆಯ ಬದುಕಿನಲ್ಲಿ ಗಾಂಧಿಯವರ ಅನುಭವಕ್ಕೆ ಬಂದದ್ದು, ಮನುಷ್ಯ ಹುಟ್ಟಿನಿಂದ ಸ್ವತಂತ್ರನು ಹೇಗೋ, ಅಂತರವಲಂಬಿಯೂ ಹೌದು ಎಂಬ ಸತ್ಯ. ಎರಡು ಸ್ಥಿತಿಗಳೂ ಒಂದರೊಳಗೊಂದು ಹಾಸುಹೊಕ್ಕಾಗಿರುವಂತಹವು. ಮನುಷ್ಯ ದೇಹಿಯಾಗಿ ಪ್ರತ್ಯೇಕತೆಯ ಸ್ವಾತಂತ್ರ್ಯವನ್ನು ಅನುಭವಿಸುವ ತುಡಿತ ಹೊಂದಿದ್ದಾನೆ, ನಿಜ. ಆದರೆ ಆತ ಒಂಟಿಯಾಗಿ ಹುಟ್ಟಿಲ್ಲವಾದ್ದರಿಂದ ಅವನು ನೈಸರ್ಗಿಕವಾಗಿ ಸಂಘಜೀವಿಯೂ ಆಗಿದ್ದಾನೆ. ಹಾಗಾಗಿ ಮೊದಲು ಅವನು ತನ್ನ ಈ ಸ್ವಾತಂತ್ರ್ಯವನ್ನು ಅನುಭವಿಸಲು ಸಂಘಜೀವತ್ವದ ಅಂದರೆ ಅಂತರವಲಂಬನೆಯು ಒತ್ತಾಯಿಸುವ ಕರ್ತವ್ಯಗಳನ್ನು ಪಾಲಿಸಬೇಕಾಗಿದೆ! ಇದು ಮಾತ್ರ ಮತ್ತು ಇದೇ ನಮ್ಮನ್ನು ನಾವು ಆಳಿಕೊಳ್ಳುವ ನೈಸರ್ಗಿಕ ರೀತಿ ಮತ್ತು ನೀತಿ ಮತ್ತು ಬದುಕಿನ ಧರ್ಮ ಎಂದು ಗಾಂಧಿ ಭಾವಿಸಿದ್ದರು.

ಈ ಅರಿವನ್ನು ಅವರು ಸ್ವರಾಜ್ಯದ ಅಸ್ತಿವಾರ ಎಂದು ಕರೆದರು. ಅದರ ಆಧಾರದ ಮೇಲಷ್ಟೆ ರಾಷ್ಟ್ರೀಯ ಸ್ವಾತಂತ್ರ್ಯದ ಪರಿಕಲ್ಪನೆ ಕಟ್ಟಬೇಕೆಂದರು. ಇದು ಸ್ವಯಂ ನಿಯಂತ್ರಣದ ಸ್ವಾತಂತ್ರ್ಯದ ಹೊಸ ಕಲ್ಪನೆಯೇ ಆಗಿತ್ತು. ಇದು, ಮೂಲತಃ ಭೌತವಾದಿಯಾಗಿದ್ದ ಆಧುನಿಕ ನಾಗರಿಕತೆಯ ಅಂದರೆ ಯಾವುದನ್ನು ನಾವು ಕೈಗಾರಿಕಾ ಬಂಡವಾಳಶಾಹಿ (ಇದರ ಸರ್ಕಾರೀಕರಣ ರೂಪದ ಕಮ್ಯುನಿಸಂ ಸೇರಿದಂತೆ) ಎಂದು ಕರೆಯುತ್ತೇವೆಯೋ, ಅದರ ಫಲವಾಗಿ ಮೂಡಿದ್ದ ವ್ಯಕ್ತಿಯ ಸ್ವಾತಂತ್ರ್ಯ ಮತ್ತು ವರ್ಗಗಳ ಹಕ್ಕುಗಳನ್ನು ಆಧರಿಸಿ ರೂಪಿತವಾಗಿದ್ದ ಪಶ್ಚಿಮದ ರಾಷ್ಟ್ರೀಯ ಸ್ವಾತಂತ್ರ್ಯದ ಪರಿಕಲ್ಪನೆಗೆ ಪ್ರತಿಯಾಗಿ ರೂಪಿಸಿದ ಕರ್ತವ್ಯ ಮೂಲ ಸ್ವರಾಜ್ಯದ ಕಲ್ಪನೆ. ಅವರ ಪ್ರಕಾರ ಸ್ವರಾಜ್ಯದ ಧರ್ಮವೆಂದರೆ ಅನ್ಯಾಯದ ಕಾನೂನನ್ನು ಪಾಲಿಸಲು ನಿರಾಕರಿಸುವುದೇ ಮನುಷ್ಯತ್ವ ಎಂದು ನಂಬುವುದು. ಗಾಂಧಿ ಎಲ್ಲ ರೀತಿಯ ಅನ್ಯಾಯಗಳಿಗೆ ವಿರುದ್ಧ ಹೋರಾಡಲು ಜಗತ್ತಿಗೆ ರೂಪಿಸಿಕೊಟ್ಟ ನಾಗರಿಕ ಅಸಹಕಾರ ಚಳುವಳಿಯ ಬೀಜ ಇಲ್ಲಿದೆ. ಈ ಅರ್ಥದಲ್ಲಿಯೇ ಅವರು ಹೇಳಿದ್ದು ಸ್ವರಾಜ್ಯವಿಲ್ಲದ ಸ್ವಾತಂತ್ರ್ಯ ಆರ್ಥಿಕ ಮತ್ತು ರಾಜಕೀಯ ಬಲಾಢ್ಯರ ಆಳ್ವಿಕೆಗೆ ಆಹ್ವಾನವಿದ್ದಂತೆ ಎಂದು. ಅಷ್ಟೇ ಅಲ್ಲ, ೧೯೩೧ರಲ್ಲಿ ಅವರು ಸಿದ್ಧಪಡಿಸಿದ ಸ್ವಾತಂತ್ರ್ಯ ಘೋಷಣೆಯಲ್ಲಿ ಸ್ವಾತಂತ್ರ್ಯ ಎಂದರೆ, ತನ್ನ ದುಡಿಮೆಯ ಫಲಗಳನ್ನು ತಾನೇ ಅನುಭವಿಸುವ ಮತ್ತು ಬದುಕಿನ ಎಲ್ಲ ಅಗತ್ಯಗಳನ್ನು ಪೂರೈಸಿಕೊಳ್ಳುವ ಪ್ರಜೆಯ ಸ್ವಾತಂತ್ರ್ಯ ಎಂದು ನಿರೂಪಿಸಿದ್ದುದು. ಹಾಗಾಗಿಯೇ, ಎಚ್. ಜಿ. ವೆಲ್ಸ್ ವಿಶ್ವ ಸಂಸ್ಥೆಗಾಗಿ ಮಾನವ ಹಕ್ಕುಗಳ ಕಾರ್ಯಕ್ರಮ ಪಟ್ಟಿಯನ್ನು ಸಿದ್ಧಪಡಿಸುವ ವೇಳೆಯಲ್ಲಿ ಆತ ಸಲಹೆ – ಸೂಚನೆಗಳಿಗಾಗಿ ಗಾಂಧೀಜಿಯನ್ನು ಸಂಪರ್ಕಿಸಿದಾಗ, ಅವರು ಮೊದಲು ಮಾನವ ಕರ್ತವ್ಯಗಳ ಪಟ್ಟಿ ಸಿದ್ಧ ಮಾಡಿ, ಆಮೇಲೆ ಹಕ್ಕುಗಳ ಬಗ್ಗೆ ಯೋಚಿಸೋಣ ಎಂದದ್ದು ಕೂಡ!

ಸ್ವರಾಜ್ಯದ ಧರ್ಮ, ಮನುಷ್ಯ ಸ್ವತಂತ್ರನೂ ಹೌದು ಮತ್ತು ಅಂತರವಲಂಬಿಯೂ ಹೌದು ಎಂಬ ಅರಿವು ಎಂದು ಈಗಾಗಲೇ ಹೇಳಿಯಾಗಿದೆ. ಈ ಸ್ವಾತಂತ್ರ್ಯ ಮತ್ತು ಅಂತರವಲಂಬಿತನಗಳ ಸಂಬಂಧವನ್ನು ಭಂಗಗೊಳಿಸುವ ಯಾವುದೇ ವಿದ್ಯಮಾನವನ್ನು ಅವರು ಸಹಜವಾಗಿಯೇ ಅಧರ್ಮವೆಂದು ಕರೆದರು. ಈ ಧರ್ಮಪಾಲನೆಯ ಮಾಧ್ಯಮವಾಗಿರುವ ದೇಹವನ್ನು ನಿರ್ಲಕ್ಷ್ಯದಿಂದ ನೋಡುವುದನ್ನೂ ಅವರು ಅಧರ್ಮವೆಂದು ಕರೆದರು. ದೇಹ ಮತ್ತು ಅದರ ಒಡೆಯನಾದ ಆತ್ಮ ಅಥವಾ ಒಳದನಿಯನ್ನು ಸ್ವಚ್ಛ ಮತ್ತು ಸುಸ್ಥಿತಿಯಲ್ಲಿಟ್ಟುಕೊಂಡು ಪ್ರಜೆಗಳು ಸಂಪೂರ್ಣ ನೆಮ್ಮದಿಯಲ್ಲಿರುವ ರೀತಿಯಲ್ಲಿ ಕುಶಲಗೊಂಡ ರಾಷ್ಟ್ರವೇ ನಿಜವಾದ ಸ್ವರಾಜ್ಯ. ಯಂತ್ರ, ರೈಲು, ವಕೀಲಿಕೆ, ಆಸ್ಪತ್ರೆ ಇತ್ಯಾದಿ ಆಧುನಿಕ ನಾಗರಿಕತೆಯ ಫಲಗಳನ್ನು ಅವರು ವಿರೋಧಿಸಿದ್ದು ಈ ನೆಲೆಯಲ್ಲಿಯೇ. ಗಾಂಧಿಗೆ ರೈಲು ಮನುಷ್ಯನ ನೆಮ್ಮದಿಯನ್ನು ಕೆಡಿಸುವ ಅನೇಕ ಜಟಿಲತೆಗಳಿಗೆ ಕಾರಣವಾಗಬಲ್ಲ ಅನಗತ್ಯ ವೇಗಕ್ಕೆ, ವಕೀಲಿಕೆ ಮನುಷ್ಯನ ಆತ್ಮಸಾಕ್ಷಿಯ ನಾಶಕ್ಕೆ ಮತ್ತು ಆಸ್ಪತ್ರೆ ದೇಹ ಕುರಿತ ಉಡಾಫೆಗೆ ದಾರಿ ಮಾಡಿಕೊಡುವುದೆಂದು ಅವರು ಭಾವಿಸಿದ್ದರು.

ಆದರೆ ಅವರ ಇವೆಲ್ಲದರ ವಿರೋಧವನ್ನು ಅಕ್ಷರಶಃ ಅರ್ಥೈಸಿಕೊಂಡು ಅವರನ್ನು ಯಥಾಸ್ಥಿತಿವಾದಿ ಎಂದೋ, ಪ್ರತಿಗಾಮಿ ಎಂದೋ ಟೀಕಿಸುವವರು ನಮ್ಮಲ್ಲೇನೂ ಕಡಿಮೆ ಇಲ್ಲ. ಏಕೆಂದರೆ ಅಂತಹವರು 'ಹಿಂದ್ ಸ್ವರಾಜ್' ಆಚೆಗೆ ಬೆಳೆದ ಗಾಂಧಿಯನ್ನು ಗಮನಿಸಿಯೇ ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಗಾಂಧಿ ಮುಂದೆ ಯಂತ್ರ ಕುರಿತಂತೆ ನೀಡಿದ ಈ ಸ್ಪಷ್ಟೀಕರಣವನ್ನು ಗಮನಿಸಬೇಕು: 'ದೇಹವೇ ಒಂದು ಯಂತ್ರವಿದ್ದಂತೆ. ಅದನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳಬೇಕು ಎಂದು ನಾನು ಹೇಳುತ್ತಿರುವಾಗ, ನಾನು ಯಂತ್ರವನ್ನು ಹೇಗೆ ವಿರೋಧಿಸಿಯೇನು? ಆದರೆ ಈ ದೇಹ ಮುಕ್ತಿಗೆ, ಅಂದರೆ ಆತ್ಯಂತಿಕ ನೆಮ್ಮದಿಗೆ ಅಡ್ಡಿಯಾಗುವಂತಿದ್ದರೆ ಅದನ್ನು ತ್ಯಜಿಸಲೂ ನಾನು ಸಿದ್ಧ!' ಅಂದರೆ ಗಾಂಧಿ ಇದನ್ನೆಲ್ಲ ವಿರೋಧಿಸಿದ್ದು ಆಧುನಿಕ ನಾಗರಿಕತೆಯ ಪ್ರತೀಕಗಳಾಗಿಯೇ ಹೊರತು, ವಸ್ತುತಃ ಅಲ್ಲ. ಅಂದರೆ ಗಾಂಧಿ ವಿರೋಧಿಸಿದ್ದು ಯಂತ್ರ ನಾಗರಿಕತೆಯನ್ನೇ ಹೊರತು ಯಂತ್ರ ಕಲ್ಪನೆಯನ್ನಲ್ಲ. ಅವರು ರೈಲು-ಕಾರುಗಳಲ್ಲಿ ಓಡಾಡಿದರು. ಹೊಲಿಗೆ ಯಂತ್ರವನ್ನು ಸ್ವಾಗತಿಸಿದರು. ಚರಕಾ ಮತ್ತು ಕೈಮಗ್ಗಗಳ ಸುಧಾರಣೆಗೆ ಕರೆ ಕೊಟ್ಟರು ಎಂಬುದನ್ನು ನಾವು ತಿಳಿದೇ ಇದ್ದೇವೆ.

ಆದರೆ ಗಾಂಧಿ ಮನುಷ್ಯ ತನ್ನ ಹತೋಟಿಯಲ್ಲೇ ಇರುವ ತನ್ನ ಪುಟ್ಟ ಪ್ರಪಂಚದಲ್ಲೇ ತನ್ನ ಈ ಸ್ವರಾಜ್ಯ ಧರ್ಮವನ್ನು ಪಾಲಿಸಬಲ್ಲ ಎಂದು ಭಾವಿಸಿದ್ದರು. ಏಕೆಂದರೆ, ಭೌತ ಜಗತ್ತಿಗೆ ಒಂದು ಮಿತಿ ಮತ್ತು ಸಮತೋಲನವಿರುವುದರಿಂದ ಅವನ ಬದುಕು ಕೂಡ ಭೌತಿಕ ನೆಲೆಯಲ್ಲಿ ಒಂದು ಮಿತಿ ಮತ್ತು ಸಮತೋಲನದಲ್ಲಿ ಇರಬೇಕೆಂದು ಗಾಂಧಿ ನಂಬಿದ್ದರು. ಅವರ ಪ್ರಕಾರ ಮನುಷ್ಯನ ಭೌತಿಕ ಪ್ರಪಂಚ ದೊಡ್ಡದಾಗುತ್ತಾ ಹೋದಷ್ಟೂ, ಅವನು ತನ್ನ ಮುಗ್ಧತೆಯನ್ನೂ, ಸರಳತೆಯನ್ನೂ ಕಳೆದುಕೊಳ್ಳುತ್ತಾ

ಹೋಗುತ್ತಾನೆ. ಅಷ್ಟೇ ಅಲ್ಲ, ಅವನಿಗೆ ಯಾವುದೂ ತನ್ನ ಹತೋಟಿಯಲ್ಲಿಲ್ಲವೆನ್ನಿಸಿ ಕ್ರಮೇಣ ವಿಧಿವಾದಿಯಾಗಿಬಿಟ್ಟು, ತನ್ನ ಕ್ರಿಯಾಶೀಲತೆಯನ್ನು ಕಳೆದುಕೊಳ್ಳುತ್ತಾನೆ. ಇಂತಹ ಅಪಾಯದಿಂದ ಪ್ರಜೆಯನ್ನೂ, ರಾಷ್ಟ್ರವನ್ನೂ ರಕ್ಷಿಸುವ ಈ ಮಿತಿ ಮತ್ತು ಸಮತೋಲನಗಳನ್ನು ಭಾರತ ತನ್ನ ಗ್ರಾಮ ಕಲ್ಪನೆಯಲ್ಲಿ ಕಂಡುಕೊಂಡಿತ್ತು ಎಂದು ಗಾಂಧಿ ಭಾವಿಸಿದ್ದರು. ಈ ಮಿತಿ ಮತ್ತು ಸಮತೋಲನವನ್ನು ಕಾಪಾಡಲೆಂದೇ ಅವರು ದೇಸಿ ಕಸುಬುಗಳ ಆರ್ಥಿಕತೆಯನ್ನು ಪ್ರತಿಪಾದಿಸಿ ತಮ್ಮ ಸ್ವದೇಶಿ ಕಲ್ಪನೆಯನ್ನು ಮುಂದಿಟ್ಟರು. ಇಲ್ಲೂ ಅವರ ಸ್ವತಂತ್ರ ಆದರೆ ಅಂತರವಲಂಬಿ ತತ್ವವನ್ನು ಅನ್ವಯಿಸಿ, ಗ್ರಾಮಗಳು ಸ್ವತಂತ್ರವೂ, ಹಾಗೆ ಸ್ವತಂತ್ರವಾಗಿರಲು ಅಂತರವಲಂಬಿಯೂ ಆಗಿದ್ದುಕೊಂಡು ರಾಷ್ಟ್ರವನ್ನು ಸ್ವರಾಜ್ಯವನ್ನಾಗಿ ರೂಪಿಸಬಹುದೆಂದು ಅವರು ಭಾವಿಸಿದ್ದರು. ಹೀಗೆ ಗಾಂಧಿಯ 'ಹಿಂದ್ ಸ್ವರಾಜ್' ಎಂದರೆ 'ಗ್ರಾಮ ಸ್ವರಾಜ್ಯ'ವೂ ಹೌದು. ನಗರವೆಂದರೆ, ಗಾಂಧೀಜಿ ಪ್ರಕಾರ ಈ ಮಿತಿ ಮತ್ತು ಸಮತೋಲನಗಳ ಉಲ್ಲಂಘನೆ. ಅವರ ಯಂತ್ರ, ರೈಲು, ವಕೀಲ, ಆಸ್ಪತ್ರೆಗಳ ವಿರೋಧವನ್ನೂ ನಾವು ಈ ನೆಲೆಯಲ್ಲೇ ಅರ್ಥಮಾಡಿಕೊಳ್ಳಬೇಕು. ಇವೆಲ್ಲ ಕೂಡಿಕೊಂಡ ನಗರಗಳು ಹಾವಿನ ಹುತ್ತಗಳಂತೆ ಎಂದಿದ್ದರು ಗಾಂಧಿ. ಇಂದಿನ ನಗರಗಳನ್ನು ನೋಡಿದರೆ ನಮಗಾದರೂ ಏನನ್ನಿಸುತ್ತದೆ ?

ಮುಖ್ಯವಾಗಿ ಈ ನೆಲೆಯಲ್ಲಿ ನಾವು 'ಹಿಂದ್ ಸ್ವರಾಜ್' ಮತ್ತು ಇಂದಿನ ರಾಜಕಾರಣದ ನೇರ ಮುಖಾಮುಖಿಯನ್ನು ಕಾಣಬಹುದು. ಏಕೆಂದರೆ, ಇವೊತ್ತಿನ ರಾಜಕಾರಣದ ಸಂಚಲನಾ ಶಕ್ತಿ ನಗರೀಕರಣವೇ ಆಗಿದೆ. ಹೋದ ವರ್ಷ ತಾನೇ ಜಗತ್ತಿನ ನಗರಗಳ ಜನಸಂಖ್ಯೆ ಜಗತ್ತಿನ ಜನಸಂಖ್ಯೆಯ ಅರ್ಧದಷ್ಟನ್ನು ದಾಟಿದೆ. ಭಾರತದ ಮಟ್ಟಿಗೂ ಇದನ್ನು ಆದಷ್ಟು ಬೇಗ ಸಾಧಿಸಲು ಪ್ರಯತ್ನಗಳು ನಡೆದಿವೆ. ಇದೇ ಇಂದಿನ ಅಭಿವೃದ್ಧಿಯ ಗುರಿಯೂ ಕೂಡ ಆಗಿದೆ ಮತ್ತು ಈ ಗುರಿ ಸಾಧನೆಗೇ ಪರಮಾಣು ಇಂಧನದ ತುರ್ತು ಅಗತ್ಯ ಉಂಟಾಗಿರುವುದು ಎಂದು ಹೇಳಲಾಗುತ್ತಿರುವುದು. ಈ ಹಿಂದೆಯೇ ತಿಳಿಸಿದಂತೆ ೧೯೪೭ರಲ್ಲಿ ನೆಹರೂ ಸ್ವತಂತ್ರ ಭಾರತದ ಪ್ರಧಾನಿ ಎಂದು ಬಿಂಬಿತವಾಗಿದ್ದಾಗ ಗಾಂಧಿ, ಅವರಿಗೆ ಭಾರತವನ್ನು ಮುನ್ನಡೆಸುವ ಮಾರ್ಗದರ್ಶಿಯಾಗಿ 'ಹಿಂದ್ ಸ್ವರಾಜ್'ಅನ್ನು ನೆನಪಿಸಿದ್ದರು. ಆಗ ನೆಹರೂ, ಹಾಳು ಕೊಂಪೆಗಳಂತಿರುವ ಹಳ್ಳಿಗಳನ್ನಾಧರಿಸಿದ ಆಡಳಿತ ವಿನ್ಯಾಸದೊಂದಿಗೆ ಆಧುನಿಕ ಜಗತ್ತಿನಲ್ಲಿ ಭಾರತ ಒಂದು ರಾಷ್ಟ್ರವಾಗಿ ಬೆಳೆಯಲಾರದು ಮತ್ತು ಉಳಿಯಲಾರದು ಎಂದು ಅದನ್ನು ತಿರಸ್ಕರಿಸಿದ್ದರು.

ಆದರೆ ಗಾಂಧಿ ತಾನು ಹೇಳುತ್ತಿರುವ ಗ್ರಾಮಸ್ವರಾಜ್ಯ ಈಗಿರುವ ಹಳ್ಳಿಗಳನ್ನು ಆಧರಿಸಿದ್ದಲ್ಲ; ಅದನ್ನು ಕಟ್ಟಬೇಕಾದ್ದು ಇವೊತ್ತಿನ ಹಳ್ಳಿಗಳ ಪುನರ್ವಿನ್ಯಾಸದ ಆಧಾರದ ಮೇಲೆ ಮತ್ತು ತಮ್ಮ ಈ ಗ್ರಾಮ ಸ್ವರಾಜ್ಯದ ತತ್ವ ಮತ್ತು ಕಾರ್ಯಕ್ರಮ ಕೇವಲ ಭಾರತವನ್ನು ಉದ್ದೇಶಿಸಿದುದಲ್ಲ – ಅದರ ಹಿಂದೆ ಜಗತ್ತನ್ನು ಪುನರ್ವಿನ್ಯಾಸಗೊಳಿಸುವ ಆಶಯವೂ ಇದೆ ಎಂದು ಸ್ಪಷ್ಟಪಡಿಸಿದ್ದರು. ಆದರೆ, ನೆಹರೂ ಗಾಂಧಿಯ ದಾಕ್ಷಿಣ್ಯಕ್ಕೆಂಬಂತೆ ಗ್ರಾಮಾಭಿವೃದ್ಧಿಗೆ ಕೆಲವು ಅನೌಪಚಾರಿಕ ಕಾರ್ಯಕ್ರಮಗಳ ತುಟಿಯುಪಚಾರ ನೀಡಿ ನಗರೀಕರಣದ ಆಧುನಿಕತೆಯನ್ನು ಆಯ್ದುಕೊಂಡು ಮುನ್ನಡೆದರು. ಅಷ್ಟೇ ಅಲ್ಲ, ಗಾಂಧಿಯನ್ನು ರಾಷ್ಟ್ರಪಿತ ಎಂದು ಕರೆದ ನೆಹರೂ, ಸಂವಿಧಾನದಲ್ಲಿ ಗಾಂಧಿವಾದದ ತಿರುಳೆನಿಸಿದ್ದ ಗ್ರಾಮರಾಜ್ಯದ ಪ್ರಸ್ತಾಪವಾದರೂ ಇರುವಂತೆ ನೋಡಿಕೊಳ್ಳಲಾಗಲಿಲ್ಲ. ಇದಕ್ಕೆ ಗ್ರಾಮ ದಲಿತರ ಪಾಲಿನ ನರಕ ಎಂದು ಭಾವಿಸಿದ್ದ ಮತ್ತು ನಮ್ಮ ಸಂವಿಧಾನವನ್ನು ರೂಪಿಸುವಲ್ಲಿ ಮುಖ್ಯ ಪಾತ್ರ ವಹಿಸಿದ್ದ ಅಂಬೇಡ್ಕರರೂ ಕಾರಣರಾಗಿದ್ದರೆ ಆಶ್ಚರ್ಯವಿಲ್ಲ. ಕೊನೇಗಳಿಗೆಯಲ್ಲಿ ಸಂವಿಧಾನ ಸಭೆಯ ಅನಾಮಿಕ ಸದಸ್ಯರೊಬ್ಬರು ಈ ಲೋಪವನ್ನು ಸಭೆಯ ಗಮನಕ್ಕೆ ತಂದಾಗ ಅದನ್ನು ನಿರ್ದೇಶಕ ತತ್ವಗಳಲ್ಲಿ ಒಂದನ್ನಾಗಿ ಸೇರಿಸಲಾಯಿತಷ್ಟೆ. ನೆಹರೂ ಮೊಮ್ಮಗ ರಾಜೀವ್ ಗಾಂಧಿಯ ಕಾಲಕ್ಕಷ್ಟೆ ಇದು ಪಂಚಾಯತ್ ರಾಜ್ ಎಂಬ ಹೆಸರಿನಲ್ಲಿ ಮುಂದುವರೆದ ನಗರೀಕರಣದ ಮಧ್ಯೆಯೇ ಒಂದು ವಿಪರ್ಯಾಸದ ಕಾನೂನಾಗಿ ಜಾರಿಗೆ ಬಂದದ್ದು.

ನೆಹರೂ ಅವರಿಂದ ಮಿಶ್ರ ಅರ್ಥವ್ಯವಸ್ಥೆಯ ಹೆಸರಿನಲ್ಲಿ ಹಲವರ ಸಂದಿಗ್ಧತೆಯೊಂದಿಗೇ (ಇದರಲ್ಲಿ 'ಪೂರ್ವಕ್ಕೆ ಮುಖ ಪಶ್ಚಿಮಕ್ಕೆ ಪಯಣ'ದ ಅನಂತಮೂರ್ತಿಯವರ ಸಂದಿಗ್ಧವೂ ಸೇರಿದೆ!) ಆರಂಭವಾದ ಈ ನಗರೀಕರಣ ಪ್ರಕ್ರಿಯೆ, ಇಂದು ಮನಮೋಹನ ಸಿಂಗರ ಕಾಲಕ್ಕೆ ನಮ್ಮ ಆರ್ಥಿಕ ನೀತಿಯ ಅಸಂದಿಗ್ಧ ಹಾಗಾಗಿ ಅಂತಿಮ ಗುರಿಯೇ ಆಗಿಬಿಟ್ಟಿದೆ. ಈ ಗುರಿ ಮುಟ್ಟಲೆಂದೇ ಮನಮೋಹನ ಸಿಂಗ್ ಅವರು ಅಮೆರಿಕಾದೊಡನೆಯ ನಾಗರಿಕ ಪರಮಾಣು ಒಪ್ಪಂದಕ್ಕೆ ಸಹಿ





## ಬೇರೆ ದಾರಿಯಿಲ್ಲ

ತನ್ನವರೆಲ್ಲ ದೂರ ಸರಿದ ಮೇಲೆ ಒಬ್ಬಂಟಿ ಬದುಕಬೇಕು ಬೇರೆ ದಾರಿಯಿಲ್ಲ
ಹರಿದರೆ ಹೊಲಿಸಬಹುದು, ಪಿಸಿದ ಬಟ್ಟೆ ಬೆನ್ನು ಹತ್ತಿದರೆ ಅರ್ಥವಿಲ್ಲ

ಬಿದ್ದವರಿಗೇ ಕಲ್ಲೊಗೆಯುವರು ಜನ, ಎದ್ದು ಹೂಂಕರಿಸದೇ ಬೇರೆ ದಾರಿಯಿಲ್ಲ
ಕೊರೆದ ತಗ್ಗಿನಲ್ಲೆ ಮಳೆ ನೀರು ನಿಲ್ಲುವುದು ಅದಕೆ ಬೇರೆ ಅರ್ಥವಿಲ್ಲ

ಕಾಲನ ಕೈಗೊಂಬೆ ಬುಗುರಿ ತಿರುಗಿರೆ ಕಾಯದೇ ಬೇರೆ ದಾರಿಯಿಲ್ಲ
ನೆಟ್ಟ ಮೊಳೆ ಕತ್ತರಿಸಿದ ತೆಗ್ಗನು ಅಳೆಯುತ್ತ ಕೂಡುವುದರಲಿ ಅರ್ಥವಿಲ್ಲ

ಮುಖವಿರದ ಮುಂಡಗಳು ಅರ್ಧರಾತ್ರಿ ಕುಣಿಯುತಿರೆ ಬೇರೆ ದಾರಿಯಿಲ್ಲ
ಬೆಳಕ ಮೈಯವರು ಕರಿನೆರಳಿನ ಆಕೃತಿಗೆ ಹೆದರುವುದರಲಿ ಅರ್ಥವಿಲ್ಲ

ಸವೆದ ಸೂರ್ಯನ ಎದೆಹರಿದು ಪ್ರತಿಫಲ ಕೇಳದೆ ಬೇರೆ ದಾರಿಯಿಲ್ಲ
ಗೌರವಕೆ ಕೊರಳೊಡ್ಡಿ ನ್ಯಾಯ ಕೇಳದ ಜೀವಕೆ ಎಂದೂ ಅರ್ಥವಿಲ್ಲ

**ಶಾರದಾ ಮುಳ್ಳೂರು**
ಸರ್ಕಾರಿ ಬಾಲಿಕೆಯರ ಪಿ.ಯು. ಕಾಲೇಜು, ಜಮಖಂಡಿ - ೫೮೭೩೦೧

ಹಾಕಿರುವುದು. ಈ ಒಪ್ಪಂದ ಒದಗಿಸುವ ಪರಮಾಣು ಇಂಧನವನ್ನು ಅನಿವಾರ್ಯವಾಗಿಸಿರುವುದೇ ಈ ನಗರೀಕರಣ ಕಾರ್ಯಕ್ರಮ. ಇದರ ಅಂಗವಾಗಿ, ೨೦೧೫ರ ವೇಳೆಗೆ ಸುಮಾರು ೪೦ ಕೋಟಿ ಭಾರತೀಯರು ಕೃಷಿ ನಿರಾಶ್ರಿತರಾಗಿ ನಗರಗಳೆಡೆಗೆ ಧಾವಿಸಲಿದ್ದಾರೆಂದು ಈ ಕಾರ್ಯಕ್ರಮದ ಕರಡನ್ನು ರೂಪಿಸಿರುವ ವಿಶ್ವ ಬ್ಯಾಂಕ್ ಅಂದಾಜು ಮಾಡಿದೆ. ಅಂದರೆ ಈ ಕೋಟ್ಯಂತರ ಕೃಷಿ ನಿರಾಶ್ರಿತರನ್ನು ನಗರಗಳಲ್ಲಿ ನೆಲೆಗೊಳಿಸಿ ಉದ್ಯೋಗ ಒದಗಿಸಲು ಈ ಪರಮಾಣು ವಿದ್ಯುತ್ ಬೇಕಾಗಿದೆ! ಈ ಒಪ್ಪಂದದ ತಾಂತ್ರಿಕ ಅಂದರೆ ಪರಮಾಣು ವಿದ್ಯುತ್ ನಿರ್ಮಾಣದ ತಾಂತ್ರಿಕ ಅನಾಹುತಗಳ ಬಗ್ಗೆ ಈಗಾಗಲೇ ಅನೇಕ ಪರಿಣತರು (ಕನ್ನಡ ಪತ್ರಿಕೆಗಳಲ್ಲಿ ಮುಖ್ಯವಾಗಿ ನಾಗೇಶ್ ಹೆಗಡೆಯವರು) ವ್ಯಾಪಕವಾಗಿ ಬರೆದಿದ್ದಾರೆ.

ಅದೇನೇ ಇರಲಿ, ಈ ಬೃಹತ್ ಉದ್ಯೋಗ ನಿರ್ಮಾಣ ಮತ್ತು ಪುನರ್ವಸತಿ ಯೋಜನೆಯೊಂದನ್ನು ವಿಶ್ವ ಬ್ಯಾಂಕ್ ಸಿದ್ಧಪಡಿಸಿದೆಯಂತೆ. ಇದರ ಅಂಗವಾಗಿಯೇ, ಅಂದರೆ ಅವರನ್ನು ನಗರ ಜೀವನಕ್ಕೆ ಮತ್ತು ನಗರ ಉದ್ಯೋಗಗಳಿಗೆ ಹೊಂದಿಸಲು ಈಗ ಎಲ್ಲರಿಗೂ – ಅದೂ ಒಂದನೇ ತರಗತಿಯಿಂದಲೇ – ಇಂಗ್ಲಿಷ್ ಕಲಿಸುವುದು ಅನಿವಾರ್ಯವಾಗಿದೆಯಂತೆ! ಬಹುಶಃ ಈಗ ರಾಷ್ಟ್ರವಿಭಜನೆಯ ಸಂದರ್ಭದಲ್ಲಿ ಕಂಡ ವಲಸೆಗಿಂತ ಅತ್ಯಂತ ಬರ್ಬರವಾದ ವಲಸೆಗೆ ನಾವು ತಯಾರಾಗಬೇಕೆಂದು ತೋರುತ್ತಿದೆ. ಅದು ಧರ್ಮಾಂಧತೆಯನ್ನಾಧರಿಸಿದ ರಾಜಕಾರಣದ ವಲಸೆಯಾಗಿದ್ದರೆ, ಇದು ಅಂಧ ಅಭಿವೃದ್ಧಿ ರಾಜಕಾರಣವನ್ನಾಧರಿಸಿದ ವಲಸೆಯಾಗಿದೆ. ಆ ವಲಸೆಯ ಪರಿಣಾಮಗಳು ಇಂದೂ ನಮ್ಮನ್ನು ಹಲವು ರೂಪಗಳಲ್ಲಿ ಕಾಡುತ್ತಿವೆ. ಇನ್ನು ಈ ವಲಸೆಯ ಪರಿಣಾಮಗಳು ? ರೈತರ ಸರಣಿ ಆತ್ಮಹತ್ಯೆ ಈ ಪರಿಣಾಮಗಳ ಆರಂಭ ಮಾತ್ರವೆಂದು ನಾನು ಭಾವಿಸಿದ್ದೇನೆ.

ಎಲ್ಲ ವಲಸೆಗಳೂ ನಿರಾಶ್ರಿತರನ್ನು ಸೃಷ್ಟಿಸುತ್ತವೆ. ರಾಷ್ಟ್ರ ವಿಭಜನೆಯ ಸಂದರ್ಭದಲ್ಲೂ ಇದನ್ನು ಕಂಡೆವು. ನಂತರ ಮಿಶ್ರ ಅರ್ಥವ್ಯವಸ್ಥೆಯ ಅಭಿವೃದ್ಧಿ ಕಾರ್ಯಕ್ರಮಗಳ ಅಂಗವಾಗಿ ಸೃಷ್ಟಿಯಾದ ಹಲವು ರೀತಿಯ ನಿರಾಶ್ರಿತರನ್ನೂ ನಾವು ಕಾಣುತ್ತಿದ್ದೇವೆ. ಉದಾಹರಣೆಗೆ ಅಣೆಕಟ್ಟು ನಿರಾಶ್ರಿತರು. ಕೇವಲ ಸಾವಿರಾರು ಸಂಖ್ಯೆಯಲ್ಲಿರುವ ಈ ನಿರಾಶ್ರಿತರಿಗೆ ನೀಡಿದ ಮರುವಸತಿಯ ಆಶ್ವಾಸನೆ ಎಷ್ಟರ ಮಟ್ಟಿಗೆ ಈಡೇರಿದೆ, ಈ ವಿಷಯದಲ್ಲಿ ಸರ್ಕಾರ ಎಷ್ಟು ಪ್ರಾಮಾಣಿಕವಾಗಿ ಮತ್ತು ದಕ್ಷವಾಗಿ ವರ್ತಿಸಿದೆ, ಯಾವ ತರಹದ ಸುಳ್ಳು, ಮೋಸ, ತಟವಟಗಳನ್ನು ಎಗ್ಗಿಲ್ಲದೆ ಪ್ರದರ್ಶಿಸುತ್ತಿದೆ ಎಂಬುದನ್ನು ನಾವೀಗಾಗಲೇ ನೋಡಿದ್ದೇವೆ. ಮೇಧಾ ಪಾಟ್ಕರರ ನರ್ಮದಾ ಬಚಾವೋ ಆಂದೋಲನಕ್ಕೆ ಕೊನೆಯೇ ಇಲ್ಲದೆ, ಅದು ಹಲವು ನೆಲೆಗಳಿಗೆ ವಿಸ್ತರಿಸುತ್ತಲೇ ಇರುವಂತಾಗಿದೆ. ಪರಿಸ್ಥಿತಿ ಹೀಗಿರುವಾಗ ಕೋಟ್ಯಂತರ ಜನ ನಿರಾಶ್ರಿತರ ಪುನರ್ವಸತಿ ಇನ್ನು ಹೇಗೆ ನಡೆಯಬಹುದೆಂದು ನೀವೇ ಯೋಚಿಸಿ. ಇವರಿಗೆಲ್ಲ ನೀರು, ನೆಲೆ, ವಿದ್ಯುತ್, ವಿದ್ಯೆ, ಉದ್ಯೋಗ, ರಸ್ತೆ ಇತ್ಯಾದಿಗಳನ್ನು ನಮ್ಮ ನಗರಗಳಲ್ಲಿ ಅಥವಾ ಅವುಗಳಿಗೆ ಹೊಂದಿಕೊಂಡಂತೆ ನಿರ್ಮಿಸಲು ಸಾಧ್ಯವೆ ? ಇದು ಹೇಗೋ, ಎಂದೋ ಒಂದು ದಿನ ಸಾಧ್ಯ ಎಂದೇ ಇಟ್ಟುಕೊಂಡರೂ, ಆ ಪ್ರಕ್ರಿಯೆಯಲ್ಲಿ ಮತ್ತು ಆ ಹೊತ್ತಿಗೆ ಆಗಿರುವ ವಿವಿಧ ರೂಪದ ಮಾನವೀಯ ದುರಂತಗಳ ಕಲ್ಪನೆಯಾದರೂ ಇವರಿಗಿದೆಯೆ ? ಅಭಿವೃದ್ಧಿಯ ಅಂಧತೆ ಎಂದೆನಲ್ಲ, ಅದು ಇದೇ. ಎಂದೋ ಒಂದು ಅನಿರ್ದಿಷ್ಟ ದಿನದಂದು ಯಾರಿಗಾಗಿಯೋ ಸೃಷ್ಟಿಯಾಗಲಿರುವ ಸ್ವರ್ಗಕ್ಕಾಗಿ ಇಂದು ಇನ್ನಾರ ಪಾಲಿಗೋ ನರಕಗಳನ್ನು ಸೃಷ್ಟಿಸುತ್ತಾ ಹೋಗುವುದು! ಇದು ಆಧುನಿಕ ನಾಗರಿಕತೆಯಲ್ಲಿ ಅಂತರ್ಗತವಾಗಿರುವ ಹಿಂಸೆ. ಇದು ನಮ್ಮ ಅನುಭವಕ್ಕೇಕೆ ತೀವ್ರವಾಗಿ ಬರುತ್ತಿಲ್ಲವೆಂದರೆ ನಾವು ಈ ಆಧುನಿಕ ನಾಗರಿಕತೆಯ ತತ್ಕಾಲೀನ ಫಲಾನುಭವಿಗಳು. ನಾವು ಇನ್ನೊಂದು ದಡದಲ್ಲಿ ನಿಂತಷ್ಟೇ ಆ ನರಕಗಳನ್ನು ನೋಡುತ್ತಿದ್ದೇವೆ. ಹೆಚ್ಚೆಂದರೆ ನಮ್ಮ ಪಾಲಿಗೆ ಅದು ಮಾನಸಿಕ ಹಿಂಸೆಯಷ್ಟೆ! ಆಧುನಿಕ ನಾಗರಿಕತೆ, ಜನತೆಯನ್ನು ಹೀಗೆ ಭಾವನಾತ್ಮಕವಾಗಿ ಒಡೆದಿಟ್ಟೇ ತನ್ನ ರಾಜಕಾರಣವನ್ನು ಮುಂದುವರೆಸಿಕೊಂಡು ಹೋಗುವುದು.

ಇದನ್ನು ನಿಧಾನವಾಗಿ ಕೆಳಕ್ಕೆ ಸೋರುವ ಸಿದ್ಧಾಂತದ ಮೇಲೆ ಸಮರ್ಥಿಸಿಕೊಳ್ಳಲಾಗುತ್ತಿದೆ. ಅಂದರೆ, ಶ್ರೀಮಂತರ ಭೋಗದ ಮೇಲೆ ಖರ್ಚು ಮಾಡುವ ಹಣ ಒಂದಲ್ಲ ಒಂದು ದಿನ ಹನಿ ಹನಿಯಾಗಿ ಕೆಳಕ್ಕೆ ಇಳಿಯುತ್ತಾ ಬಡವರ ಯೋಗಕ್ಕೆ ಕಾರಣವಾಗುವುದಂತೆ! ಇದು ಈ ಅಭಿವೃದ್ಧಿ ಮಾದರಿಯ ಅತ್ಯುತ್ತಮ ಉದಾಹರಣೆಯೆಂದು ಹೇಳಲಾಗುತ್ತಿದ್ದ ಅಮೆರಿಕಾದಲ್ಲೇ ಅಂತಿಮವಾಗಿ ವಿಫಲವಾಗಿದೆ ಎಂಬುದನ್ನು ಅಲ್ಲಿನ ಆರ್ಥಿಕ ತಜ್ಞರೇ ಈಗ ಹೇಳತೊಡಗಿದ್ದಾರೆ. ಇದು ಗೊತ್ತಿದ್ದರೂ ಇದನ್ನು ಒಂದು ಮೋಸ, ಆರ್ಥಿಕ ಅಶ್ಲೀಲತೆ ಎಂದು ಕರೆಯುವ ದೃಷ್ಟಿ ಸ್ಪಷ್ಟತೆ ಮತ್ತು ನೈತಿಕ ಧೈರ್ಯವನ್ನೇ ನಾವು ಕಳೆದುಕೊಂಡಿದ್ದೇವೆ. ಇದನ್ನೇ ಗಾಂಧಿ ರೋಗ ಎಂದು ಕರೆದದ್ದು. ಗುರಿ ಮತ್ತು ಮಾರ್ಗಗಳನ್ನು ಒಡೆದು ದೃಷ್ಟಿ ದೋಷಕ್ಕೆ ಕಾರಣವಾಗುವ ಆಧುನಿಕ ನಾಗರಿಕತೆಯ ರೋಗವಿದು.

ಈ ರೋಗವನ್ನು ನೆಹರೂ ಕಾಲದಿಂದಲೇ ಗುರುತಿಸಿ, ಅದನ್ನು ನಿವಾರಿಸುವ ರಾಜಕಾರಣಕ್ಕೆ ಬದ್ಧವಾದ ಗುಂಪೊಂದು ಗಾಂಧಿ ಸನಿಹದಲ್ಲೇ ಬೆಳೆದಿತ್ತು. ಅದು 'ಹಿಂದ್ ಸ್ವರಾಜ್'ನ ದರ್ಶನವನ್ನು ಗಾಂಧಿ ಅವರೊಂದಿಗೆ ನಿರಂತರ ಸಂವಾದದಲ್ಲಿರುವ ಮೂಲಕ ಭಾರತೀಯ ಸಂದರ್ಭಕ್ಕನುಗುಣವಾಗಿ ಆಧುನೀಕರಿಸಿದ ಭಾರತೀಯ ಸಮಾಜವಾದಿ ಚಳುವಳಿ. ವಿಶೇಷವಾಗಿ ನೆಹರೂ ಪ್ರತಿನಿಧಿಸುತ್ತಿದ್ದ ಸರ್ಕಾರಿ ಗಾಂಧೀವಾದ ಮತ್ತು ವಿನೋಬಾ ಪ್ರತಿನಿಧಿಸುತ್ತಿದ್ದ ಮಠೀಯ ಗಾಂಧೀವಾದಕ್ಕೆ ಪ್ರತಿಯಾಗಿ ತನ್ನನ್ನು ತಾನು ವಿದ್ರೋಹಿ ಗಾಂಧಿವಾದಿ ಗುಂಪೆಂದು ಕರೆದುಕೊಳ್ಳುತ್ತಿದ್ದ ಲೋಹಿಯಾ ನೇತೃತ್ವದ ಸಮಾಜವಾದಿ ಗುಂಪು. ಇದು ಕೆಲವರ ಸದಾ ಏರುತ್ತಾ ಹೋಗುವ ಜೀವನ ಮಟ್ಟದ ಆಶಯವುಳ್ಳ ಪಶ್ಚಿಮದ ನಾಗರಿಕತೆಗೆ ಪ್ರತಿಯಾಗಿ ಎಲ್ಲರ ಒಂದು ಸಾಮಾನ್ಯ ಸಭ್ಯ ಜೀವನ ಮಟ್ಟದ ಆಶಯವುಳ್ಳ ನಾಗರಿಕತೆಯನ್ನು ನಿರ್ಮಿಸುವ ರಾಜಕಾರಣವನ್ನು ಕಟ್ಟುವ ಪ್ರಯತ್ನ ಮಾಡಿತ್ತು. ಗಾಂಧಿ ಹೇಗೂ ತಮ್ಮ ರಾಜಕೀಯ ದರ್ಶನವನ್ನು ಅಹಿಂಸಾತ್ಮಕ ಸಮಾಜವಾದವೆಂದು ಕರೆದುಕೊಂಡಿದ್ದರಲ್ಲ! ಹಾಗಾಗಿ ನೆಹರೂ ದಾರಿ ತಪ್ಪುತ್ತಿದ್ದಾರೆ ಎಂದು ಗಾಂಧಿಗೆ ಅನಿಸತೊಡಗಿದೆ ಎಂದು ಸಮಾಜವಾದಿಗಳಿಗೆ ಗೊತ್ತಾದೊಡನೆ, ಅವರು ತಮ್ಮ ನೇತೃತ್ವವನ್ನು ಗಾಂಧಿ ವಹಿಸಿಕೊಳ್ಳುವಂತೆ ಕೋರಿದ್ದೂ ಉಂಟು. ಆಗ ಗಾಂಧಿ ಹೇಳಿದ್ದು:'ನಾನು ಹುಟ್ಟಾ ಸಮಾಜವಾದಿ. ನೀವು ದೇವರು, ಧರ್ಮವನ್ನು ನಂಬಿ ಗ್ರಾಮಗಳಿಗೆ ಬಂದು ದಲಿತರ ಮತ್ತು ಮಹಿಳೆಯರ ನಡುವೆ ಕೆಲಸ ಮಾಡುವುದಾದರೆ, ನಾನು ನಿಮ್ಮ ಪಕ್ಷದ ಅಧ್ಯಕ್ಷನಾಗಲೂ ಸಿದ್ಧ!'

ಆದರೆ ಈ ಸಂದರ್ಭದಲ್ಲಿ ಸಮಾಜವಾದಿ ಪಕ್ಷ, ಗಾಂಧಿ ಕುರಿತು ಅಪಾರ ವೈಯಕ್ತಿಕ ಗೌರವವಿದ್ದರೂ ತಾತ್ವಿಕವಾಗಿ ಇನ್ನೂ ಮಾರ್ಕ್ಸ್‌ವಾದಿಯಾಗಿದ್ದ ಜಯಪ್ರಕಾಶ್ ನಾರಾಯಣ್ ಮತ್ತು ಅವರಂತೆಯೇ ಚಿಂತಿಸುವ ಭೌತವಾದಿಗಳ (ಹೇಗೂ ಮಾರ್ಕ್ಸ್ ಭಾರತವನ್ನು ಬ್ರಿಟಿಷರು ಮೊದಲು ಸಂಪೂರ್ಣ ಪಾಶ್ಚಾತ್ಯೀಕರಿಸಬೇಕೆಂದು ಹೇಳಿದ್ದನಲ್ಲ!) ಪ್ರಭಾವದಲ್ಲಿದ್ದ ಕಾರಣದಿಂದಾಗಿ ಅದು ಗಾಂಧಿಯವರ ದೇವರು ಮತ್ತು ಧರ್ಮಗಳ ನಂಬಿಕೆಗಳನ್ನು ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳುವಲ್ಲಿ ವಿಫಲವಾಯಿತು. ಹೀಗಾಗಿ ಮುಂದೆ ಗಾಂಧಿ ನಂತರವೂ ಸಮಾಜವಾದಿ ಚಳುವಳಿಯ ವೈಚಾರಿಕವಾಗಿ ಗಾಂಧಿ ಭಾವನೆಗೇ ಬದ್ಧವಾಗಿದ್ದರೂ, ತನ್ನ ರಾಜಕೀಯ ಕಾರ್ಯಶೀಲತೆಯಲ್ಲಿ ಒಂದು ನೆಲೆಯ ವೈರ ಮತ್ತು ಕ್ರೋಧಗಳನ್ನು ಅಳವಡಿಸಿಕೊಂಡಿದ್ದರಿಂದ ಹತಾಶೆಗೆ ಸಿಕ್ಕಿ ಚಿಂದಿ ಚಿಂದಿಯಾಯಿತು. ಆದರೆ ಸಮಾಜವಾದಿ ಚಳುವಳಿಯ ತಾತ್ವಿಕತೆ, ಹುರುಪು ಮತ್ತು ಬದ್ಧತೆಗಳು ಈಗಲೂ ರಾಷ್ಟ್ರಾದ್ಯಂತ ಹಲವು ಗುಂಪುಗಳ ಹಲವು ರೀತಿಯ ಚಟುವಟಿಕೆಗಳಲ್ಲಿ ವ್ಯಕ್ತವಾಗುತ್ತಲೇ ಇದೆ. ಹೆಗ್ಗೋಡಿನಲ್ಲಿಯೇ ಅಂತಹ ಚಟುವಟಿಕೆಗಳ ಎರಡು ಕೇಂದ್ರಗಳಿವೆ. ಒಂದು ನೀನಾಸಂ. ಇನ್ನೊಂದು ಚರಕಾ. ರಾಷ್ಟ್ರ ಮಟ್ಟದಲ್ಲಿ ಇಂತಹ ಚಟುವಟಿಕೆಗಳ ಹಿಂದಿನ ರಾಜಕಾರಣಕ್ಕೆ ಪ್ರತೀಕವಾಗಿರುವವರೆಂದರೆ ಮೇಧಾ ಪಾಟ್ಕರ್. ಇಂದು ನಾವು ಚರ್ಚಿಸುತ್ತಿರುವ 'ಮನೋಭೂಮಿಕೆಯಲ್ಲಿ ಸ್ವರಾಜ್ಯ'ದ ಮುಂದುವರಿಕೆಯಾಗಿ, ವಾಸ್ತವದಲ್ಲೂ 'ಹಿಂದ್ ಸ್ವರಾಜ್' ಬಗ್ಗೆ ಏನಾದರೂ ನಮ್ಮಲ್ಲಿ ಸದ್ಯಕ್ಕೆ ಭರವಸೆ ಮೂಡಿಸುವವರಿದ್ದರೆ ಅವರೇ! ಆದರೆ ಅವರು ನಮ್ಮ ಮಾಧ್ಯಮಗಳಲ್ಲಿ 'ತಲೆ ಕೆಟ್ಟ ಮಹಿಳೆ'ಯಂತೆ ಚಿತ್ರಿತವಾಗುತ್ತಿರುವುದು ಪ್ರಸಕ್ತ ರಾಜಕಾರಣ ವಸಾಹತುಶಾಹಿ ರಾಜಕಾರಣಕ್ಕಿಂತ ಭೀಕರವಾಗಿದೆ ಎಂಬುದನ್ನಷ್ಟೇ ತೋರಿಸುತ್ತದೆ. ಆದರೆ ನಮ್ಮ ಜನರಲ್ಲಿ 'ಹಿಂದ್ ಸ್ವರಾಜ್'ನ ಭಾವನೆ ಬೀಜ ರೂಪದಲ್ಲಿ ಇನ್ನೂ ಸಂರಕ್ಷಿತವಾಗಿದೆ ಎಂಬ ಬಗ್ಗೆ ಯಾರಿಗೂ ಅನುಮಾನ ಬೇಡ. ಮೊನ್ನೆ ಮಹಾರಾಷ್ಟ್ರದ ರಾಯ್‌ಗಡದ ರೈತರು ಅಲ್ಲಿ ಇಂದಿನ ರಾಜಕಾರಣದ ಹೆಗ್ಗುರುತೆನಿಸಿರುವ ವಿಶೇಷ ಆರ್ಥಿಕ ವಲಯ ಯೋಜನೆಯ ಬಗ್ಗೆ ಜನಮತ ಗಣನೆಯಲ್ಲಿ ಶೇಕಡಾ ೯೧ರ ಮತದೊಂದಿಗೆ ತಿರಸ್ಕರಿಸಿರುವುದೇ ಇದಕ್ಕೆ ದೊಡ್ಡ ಸಾಕ್ಷಿಯಾಗಿದೆ. ಹಾಗಾಗಿ ಇದು ನಮ್ಮ ಇಂದಿನ ರಾಜಕಾರಣ ಎಷ್ಟು ಜನದೂರವಾಗಿ ಜನವಿರೋಧಿಯಾಗಿದೆ ಎಂಬುದನ್ನು ಸೂಚಿಸುತ್ತದೆ. ಅಲ್ಲದೆ, ಸಮಾಜವಾದಿ ಚಳುವಳಿಯ ಸಾಧನೆ ಮತ್ತು ವೈಫಲ್ಯದ ಕಾರಣಗಳ ಹಿನ್ನೆಲೆಯಲ್ಲಿ ಮುಂದಿನ ರಾಜಕಾರಣ ಹೇಗಿರಬೇಕೆಂಬುದನ್ನೂ ಬೊಟ್ಟುಮಾಡುತ್ತದೆ ಎಂದು ನಾನು ಭಾವಿಸಿದ್ದೇನೆ.

ಡಿ. ಎಸ್. ನಾಗಭೂಷಣ
ಎಚ್. ಐ. ಜಿ. ೫, 'ನುಡಿ' ಕಲ್ಲಹಳ್ಳಿ ಬಡಾವಣೆ, ವಿನೋಬಾ ನಗರ
ಶಿವಮೊಗ್ಗ - ೫೭೭೨೦೪

ತಿಳಿವು

# ಪ್ರಜ್ಞಾವಂತಿಕೆಯ ಮರುವಿಮರ್ಶೆ: ಇಂದಿನ ಅಗತ್ಯ

ಶರಣರು, ಸೂಫಿಗಳು ಬದುಕಿದ ನಾಡಿನಲ್ಲಿ ಇಂದು ಭ್ರಾತೃತ್ವಕ್ಕೆ ಕೊಡಲಿ ಪೆಟ್ಟು ಬೀಳುತ್ತಿದೆ. ಸನಾತನ ಹಿಂದೂ ಧರ್ಮಾನುಯಾಯಿ, ಶ್ರೇಷ್ಠ ರಾಮಭಕ್ತ ಮಹಾತ್ಮಾ ಗಾಂಧೀಜಿ, ಇಂದು ನಮ್ಮ ಯುವ ಜನತೆಗೆ ಮಾದರಿಯಾಗಿ ಕಾಣುತ್ತಿಲ್ಲದಿರುವುದು ವಿಷಾದದ ಸಂಗತಿಯಾಗಿದೆ. ರಾಮ, ಕೃಷ್ಣ ಇಬ್ಬರನ್ನೂ ಆಳವಾಗಿ ಅಧ್ಯಯನ ಮಾಡಿದ ರಾಮ ಮನೋಹರ ಲೋಹಿಯಾರ ರಾಷ್ಟ್ರೀಯ, ರಾಜಕೀಯ ಚಿಂತನೆಗಳನ್ನು ತಿಳಿದುಕೊಳ್ಳುವ ವ್ಯವಧಾನ ನಮ್ಮ ಪೀಳಿಗೆಗೆ ಇಲ್ಲವಾಗಿದೆ. ಪರಧರ್ಮವನ್ನು ದ್ವೇಷಿಸುವ, ಶಾಂತಿ ಕದಡಿ, ಕೋಮುಗಲಭೆ ಹುಟ್ಟು ಹಾಕುವವರನ್ನೇ ರಾಷ್ಟ್ರಭಕ್ತರು, ದೇಶಪ್ರೇಮಿಗಳು ಎಂದು ತಪ್ಪಾಗಿ ಅರ್ಥೈಸಿ, ವ್ಯವಸ್ಥಿತವಾಗಿ ಪ್ರಚಾರ ಮಾಡುವ ಕಾರ್ಯ ಸಾಗಿರುವುದು ಆತಂಕ ತರುತ್ತಿದೆ.

ಇಂತಹ ಸನ್ನಿವೇಶ ನಿರ್ಮಾಣವಾಗಲು ಇರುವ ಕಾರಣಗಳು, ರಾಜಕೀಯ-ಸಾಂಸ್ಕೃತಿಕ ವೈಫಲ್ಯಗಳನ್ನು ಸ್ವವಿಮರ್ಶೆಗೆ ಒಡ್ಡಿಕೊಳ್ಳಬೇಕಾದ ಬಹುದೊಡ್ಡ ಜವಾಬ್ದಾರಿ ಪ್ರತಿಯೊಬ್ಬ ಪ್ರಜ್ಞಾವಂತರ ಹೆಗಲ ಮೇಲೆ ಇದೆ.

ಕೋಮುವಾದದ ವಿರುದ್ಧವಾಗಿ ಮಾತನಾಡಿದೊಡನೆ ಆತನನ್ನು ನಾಸ್ತಿಕ ಎಂದು ಭಾವಿಸಿ, ಬುದ್ಧಿಜೀವಿ ಪಟ್ಟ ಕಟ್ಟುವ ಪದ್ಧತಿ ನಮ್ಮಲ್ಲಿ ಬೆಳೆಯುತ್ತಿದೆ. ಕೋಮುವಾದವನ್ನೂ ಬಯಸದ, ನಾಸ್ತಿಕವಾದವನ್ನೂ ಒಪ್ಪದ ಜನರ ಸಂಖ್ಯೆ ಭಾರತದಲ್ಲಿ ದೊಡ್ಡ ಪ್ರಮಾಣದಲ್ಲಿದೆ. ಆದರೆ ಹೀಗೆ ಆಲೋಚಿಸುವವರು ಮತ್ತು ಆ ರೀತಿಯಲ್ಲಿ ಬದುಕಲು ಬಯಸುವವರು ಇಂದು ದಾರಿ ತಪ್ಪಿದಂತಾಗಿದ್ದಾರೆ. ಇಂತಹ ಸಮಾಜವಾದಿ ನೆಲೆಯ ಚಿಂತನೆಗಳನ್ನು ಇಂದು ಪುನರ್ ಅಧ್ಯಯನಕ್ಕೆ ಒಳಪಡಿಸಿ, ಕೋಮುವಾದ, ಉಗ್ರವಾದಕ್ಕೆ ಹೊರತಾದ ಸ್ಪಷ್ಟ ಮಾರ್ಗಸೂಚಿ ರೂಪಿಸಬೇಕಾಗಿದೆ.

ಕಳೆದ ದಶಕಗಳಲ್ಲಿ ಪ್ರಗತಿಪರ ಹೋರಾಟಗಳು ಹಾಗೂ ಬಂಡಾಯ ಸಂಘಟನೆಗಳಲ್ಲಿ ಗುರುತಿಸಿಕೊಳ್ಳಲು ಹೆಮ್ಮೆಪಡುತ್ತಿದ್ದ ಅಂದಿನ ಯುವ ಸಮುದಾಯದಂತೆ ಈಗಿನ ಪೀಳಿಗೆ ಆಲೋಚಿಸುತ್ತಿಲ್ಲ, ಅಷ್ಟೇ ಅಲ್ಲ, ಪ್ರಗತಿಪರತೆ, ಸೌಹಾರ್ದತೆ ಎಂಬ ಪದಗಳ ವಿಶಾಲ ಅರ್ಥ ಗ್ರಹಿಸಿಕೊಳ್ಳದೆ, ಇಂತಹ ಚಳವಳಿಗಳನ್ನು ಕಂಡರೆ ಮೂಗುಮುರಿಯುವ ಪರಿಸ್ಥಿತಿ ನಿರ್ಮಾಣವಾಗಿದೆ.

ಕೋಮುಶಕ್ತಿಗಳು ಯುವಕರ ಹಸಿ ಭಾವನೆಗಳನ್ನು ಹದಗೆಡಿಸುತ್ತಿದ್ದರೆ, ಉಗ್ರವಾದಿಗಳು ತಮ್ಮ ಕೃತ್ಯಗಳಿಗೆ ಧಾರ್ಮಿಕ ಲೇಪನ ಹಚ್ಚಿ, ಜಿಹಾದ್ ಪಟ್ಟ ಕಟ್ಟಲು ಯತ್ನಿಸುತ್ತಿದ್ದಾರೆ. ಆಯಾ ಧರ್ಮಗಳ ಮೂಲಸಾರವನ್ನೇ ತಿಳಿಯದ ಕಿಡಿಗೇಡಿಗಳು ಇಂತಹ ಕೆಲಸಗಳಲ್ಲಿ ನಿರತರಾಗಿದ್ದಾರೆ. ನಿಜವಾದ, ನಿಷ್ಕಲ್ಮಶ ಧರ್ಮಾನುಯಾಯಿಗಳು ಒಪ್ಪದ ಕಾರ್ಯಗಳನ್ನು ಧರ್ಮಾಂಧರು ಮಾಡುತ್ತಿದ್ದಾರೆ ಹಾಗೂ ಅದರಲ್ಲಿ ಬಹುಪಾಲು ಮೇಲುಗೈಯನ್ನೂ ಸಾಧಿಸುತ್ತಿದ್ದಾರೆ.

ಧರ್ಮದ ಹೆಸರಿನಲ್ಲಿ ತ್ರಿಶೂಲ ಹಂಚುವವರನ್ನು, ಜಿಹಾದ್ ಹೆಸರಿನಲ್ಲಿ ಬಾಂಬ್ ಸ್ಫೋಟಿಸುವ ಉಗ್ರವಾದಿಗಳು ಇಬ್ಬರನ್ನೂ ಪ್ರತ್ಯೇಕಿಸಿ ನೋಡಬಾರದು. ಇಬ್ಬರೂ ದೇಶಕ್ಕೆ ಸಮಾನವಾಗಿ ಅಪಾಯಕಾರಿಗಳಾಗಿದ್ದಾರೆ. ಇವರಿಬ್ಬರ ಪ್ರಚೋದನಕಾರಿ ಮಾತುಗಳು, ಚಟುವಟಿಕೆಗಳು ದೇಶದ ಭದ್ರತೆಗೆ ಧಕ್ಕೆ ತಂದಿವೆ.

ದೇಶದ ಒಳಿತಿಗಾಗಿ ತ್ರಿಶೂಲಧಾರಿಗಳು ಮತ್ತು ಆತಂಕವಾದಿಗಳನ್ನು ಮಟ್ಟಹಾಕಲೇಬೇಕು. ಆದರೆ ಆಯಾ ಧರ್ಮಗಳಲ್ಲಿನ ಹಿರಿಯರು ಮತ್ತು ಪ್ರಜ್ಞಾವಂತರು ಈ ಕಾರ್ಯಕ್ಕೆ ಕೈಹಾಕಿದಾಗ ಮಾತ್ರ ಅಂತಹ ಪ್ರಯತ್ನ ಪರಿಣಾಮಕಾರಿಯಾಗುತ್ತದೆ. ಇಲ್ಲವಾದರೆ ಒಂದು ಧರ್ಮದ ಬಗ್ಗೆ ಮತ್ತೊಬ್ಬರು ಮಾತನಾಡಿದಾಗ ಅನಗತ್ಯ ವಿವಾದಗಳು ಉಲ್ಬಣಗೊಳ್ಳುತ್ತವೆ. ಹಿಂದೂ ಧರ್ಮದಲ್ಲಿನ ಮತಾಂಧರನ್ನು ಹಿಂದೂಗಳೇ ನಿಗ್ರಹಿಸುವ, ಇಸ್ಲಾಮ್ ಹೆಸರಿನಲ್ಲಿ ಧರ್ಮಾಂಧ ಕೆಲಸ ಮಾಡುವವರನ್ನು ಅಲ್ಲಿನ ಹಿರಿಯರೇ ತಡೆಯುವ ಔದಾರ್ಯ ಬೆಳೆದರೆ, ನಾವು ನೆಲೆಸಿದ ನೆಲಕ್ಕೆ ದೊಡ್ಡ ಉಪಕಾರ ಮಾಡಿದಂತಾಗುತ್ತದೆ.




ನಮ್ಮ ಬುದ್ಧಿಜೀವಿಗಳು, ಚಿಂತಕರೆನಿಸಿಕೊಂಡವರು ವಾಸ್ತವ ಜಗತ್ತಿಗೆ ಅರ್ಥವಾಗುವ ಸರಳ ಭಾಷೆಯಲ್ಲಿ ಮಾತನಾಡಬೇಕು. ಪ್ರಗತಿಪರರು, ಎಡಪಂಥೀಯ ಹೋರಾಟಗಾರರು ಅತ್ಯುತ್ತಮ ಆಶಯಗಳನ್ನಿಟ್ಟುಕೊಂಡೇ ಚಳವಳಿನಿರತರಾಗಿದ್ದರೂ ಕೂಡ ಅವು ನಿರೀಕ್ಷಿತ ಮಟ್ಟದ ಪರಿಣಾಮ ಬೀರುತ್ತಿಲ್ಲ. ಅದಕ್ಕೆ ಕಾರಣಗಳನ್ನು ತಿಳಿದುಕೊಂಡು ಹೊಸ ಮಾರ್ಪಾಡುಗಳೊಂದಿಗೆ, ಸಾಕಷ್ಟು ಜನಬೆಂಬಲ ಪಡೆಯುವ ನಿಟ್ಟಿನಲ್ಲಿ ಯಶಸ್ಸು ಸಾಧಿಸಬೇಕು. ಇಲ್ಲದಿದ್ದರೆ ಕೋಮುವಾದಿಗಳ ಓಟಕ್ಕೆ ಕಡಿವಾಣ ಹಾಕಲು ಸಾಧ್ಯವಿಲ್ಲ.

ಉಭಯ ಧರ್ಮಗಳಲ್ಲಿಯೂ ವೈಚಾರಿಕ ಸ್ಪಷ್ಟತೆಯಿಲ್ಲದ ಮುಗ್ಧರನ್ನು ಅಲ್ಲಿನ ಕೋಮುವಾದಿಗಳು ತಮ್ಮ ಉದ್ರೇಕಕಾರಿ ಮಾತುಗಳಿಂದ ಸೆಳೆದುಕೊಳ್ಳುತ್ತಿರುವುದನ್ನು ತಡೆಯದಿದ್ದರೆ ಸಮಾಜದ ಸ್ವಾಸ್ಥ್ಯ ಹದಗೆಡುತ್ತಲೇ ಹೋಗುತ್ತದೆ.

ಬಡತನ, ನಿರುದ್ಯೋಗಗಳಂತಹ ಸಮಸ್ಯೆಗಳನ್ನು ನಿವಾರಿಸಿ ಅನ್ನ, ವಿದ್ಯೆ, ವಸತಿ, ಆರೋಗ್ಯ, ಸಾಮಾಜಿಕ ನ್ಯಾಯ ಇರುವಂತಹ ಸುಭಿಕ್ಷ ರಾಷ್ಟ್ರವನ್ನು ನಿರ್ಮಾಣ ಮಾಡುವುದು ಕೋಮುವಾದಿಗಳಿಂದ ಸಾಧ್ಯವಿಲ್ಲ. ಇಂತಹ ಕಾರ್ಯಗಳಿಗೆ ಅವರು ಆದ್ಯತೆ ನೀಡುವುದಿಲ್ಲ. ಕೇವಲ ಮಠ, ಮಂದಿರಗಳನ್ನು ಕಟ್ಟಿ ವರ್ಣಾಶ್ರಮ ಪದ್ಧತಿಯನ್ನು ಪುನಃ ಸ್ಥಾಪಿಸುವುದು ಅವರ ಗುಪ್ತಕಾರ್ಯಸೂಚಿಯಾಗಿದೆ.

ಕೋಮುವಾದ, ನಾಸ್ತಿಕವಾದ ಎರಡಕ್ಕೂ ಹೊರತಾದ ಪ್ರಜ್ಞಾವಂತರನ್ನು ಒಳಪಡಿಸಿಕೊಂಡು ವ್ಯಾಪಕ ನೆಲೆಯಲ್ಲಿ ಚರ್ಚೆ, ವಿಮರ್ಶೆಗಳ ಮೂಲಕ ಎಲ್ಲ ವರ್ಗಗಳಲ್ಲಿ ಹೊಸ ಆಲೋಚನೆ, 'ಹೊಸತ'ರೆಡೆಗೆ ಜನಸಮುದಾಯಗಳನ್ನು ಕರೆದೊಯ್ಯಬೇಕಿದೆ.

ಬುದ್ಧ, ಬಸವಣ್ಣ, ಶಿಶುನಾಳ ಶರೀಫರು, ಮಹಾತ್ಮಾ ಗಾಂಧೀಜಿ, ಅಂಬೇಡ್ಕರ್, ಅವರ ಚಿಂತನೆಗಳ ಮೂಲಕ ಪ್ರಸಕ್ತ ಸನ್ನಿವೇಶಕ್ಕೆ ಉತ್ತರ ಕಂಡುಕೊಳ್ಳಬೇಕು. ಗಾಂಧೀಜಿ ಈಗ ಇದ್ದಿದ್ದರೆ ಏನು ಮಾಡುತ್ತಿದ್ದರೆಂಬುದನ್ನು ಊಹಿಸಿ, ಆ ದಿಶೆಯಲ್ಲಿ ಹೆಜ್ಜೆ ಇಡುವ ಸಂಘಟಿತ ವಿಮರ್ಶೆ, ಪ್ರಯತ್ನಗಳು ವರ್ತಮಾನದ ಅಗತ್ಯತೆಗಳಾಗಿವೆ.

ಮಂಜುನಾಥ ಡಿ. ಡೊಳ್ಳಿನ
ಪ್ರಸಾರ ನಿರ್ವಾಹಕರು, ಆಕಾಶವಾಣಿ, ಭದ್ರಾವತಿ, ಶಿವಮೊಗ್ಗ ಜಿಲ್ಲೆ

# ಇದೀಗ ಪ್ರಕಟವಾಗಿದೆ

## ನವಕರ್ನಾಟಕದ ಅಪೂರ್ವ ಕೊಡುಗೆ




ಡೆಮಿ 1/4 ಆಕಾರದ 320 ಪುಟಗಳು



**ಪ್ರತಿಯೊಂದು ಮನೆ, ಶಾಲಾ - ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
'ಹೊಸತು' ಪತ್ರಿಕೆಯ
ಮೂರು ವರ್ಷದ ಚಂದಾದಾರರಿಗೆ
ರೂ. 320 ಮಾತ್ರ
(ಅಂಚೆ ವೆಚ್ಚ ರೂ. 20 ಪ್ರತ್ಯೇಕ)

ಪ್ರಾರಂಭದಿಂದ ಇಲ್ಲಿಯವರೆಗೆ ಸಾಹಿತ್ಯ, ಶಾಂತಿ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ, ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 774 ಮಂದಿ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

*ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 340ರ ಡಿ.ಡಿ. ಅಥವಾ ಎಂ.ಒ. ಕೆಳಕಂಡ ವಿಳಾಸಕ್ಕೆ ಕಳಿಸಿ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001. ಫ್ಯಾಕ್ಸ್ : 30578023
ಫೋನ್ : 30578022, 22203580 e-mail : navakarnataka@dataone.in web : www.navakarnatakabooks.com

**ಶಾಖೆಗಳು : ಬೆಂಗಳೂರು © 22251382 :: ಮಂಗಳೂರು © 2441016 :: ಮೈಸೂರು © 2424094 :: ಗುಲ್ಬರ್ಗಾ © 224302**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

